# ವೇಶ್ಯಾ

ಅಥವಾ

# ದುಷ್ಟ ಸಮಾಜ.

ಲೇಖಕ,

ಬಸವಯ್ಯ ಬೂದಯ್ಯ ಬೂದೀಹಾಳ,

( ನಂದೀಶಂ )

ಶಾಲಾ ಮುಖ್ಯಾಧ್ಯಾಪಕ ಮೇಡ್ಲೇರಿ, ಜಿಲ್ಹಾ ಧಾರವಾಡ.

ಪ್ರಥಮಾವೃತ್ತಿ.

ಧಾರವಾಡ.

ಎಚ್. ಎಸ್. ಶಿವಲಿಂಗಶಾಸ್ತ್ರಿ ಇವರ ಧರ್ಮತರಂಗಿಣೀ ಮುದ್ರಾಲಯದಲ್ಲಿ
ಮುದ್ರಿಸಲ್ಪಟ್ಟಿತು.

೧೯೧೬.



ಬೆಲೆ ೧ ರೂಪಾಯಿ.

# ಅರ್ಪಣಾ ಪತ್ರಿಕಾ.



ಏತತ್ಕಾದಂಬರಿಯನ್ನು

ಮೇಣ್ಣೇರಿ ಸುಪ್ರಸಿದ್ಧ ಶ್ರೀಮಂತರಾದ

ಮ. ರಾ. ರಾ. ಹಾಲಪ್ಪಣ್ಣ ಸಣ್ಣಬಸವೀರಪ್ಪ

ಮುಂಡಾಸದ

ಇವರಿಗೆ

ಇವರಲ್ಲಿ ಮೂರ್ತಿಮಂತವಾದ

ವ್ಯವಹಾರ ಚಪಲತ್ವ, ಚಿತ್ತನಿರ್ಮಲತ್ವ, ಉದಾರಗುಣಬಹು
ಲತ್ವ, ಗುಣಗ್ರಾಹಕತ್ವ, ದೀನದಯಾಲುತ್ವ, ಧರ್ಮಾ
ನುಸಾರತ್ವ ಈ ಮೊದಲಾದ ಸದ್ಗುಣಗಳ
ಅಭಿನಂದನಕ್ಕಾಗಿ

(ಸಮ್ಮತಿಯನ್ನು ಹೊಂದಿ)

ಗ್ರಂಥಕರ್ತನು ಕೇವಲ ಪವಿತ್ರ ಪ್ರೇಮದಿಂದ ಸಮರ್ಪಿಸಿದ್ದಾನೆ.

# ಲೇಖಕನ ಶಬ್ದದ್ವಯ.

ಭೋ! ಸರ್ವ ಮಹಾನುಭಾವರೇ,

(I) ಈ "ವೇಣೂ" ಕಾದಂಬರಿಯು ಅತ್ಯಂತ ಚಿತ್ತರಂಜಕವೂ, ಬೋಧ ಪೂರ್ಣವೂ, ಮನೋರಮವೂ ಆದ ಕಾದಂಬರಿಯಾಗಿದೆ. ಈ ಕಾದಂಬರಿಯಲ್ಲಿ ಹಿಂದೂ ಸಮಾಜ ಪದ್ಧತಿಯ ಬಗ್ಗೆ ಸಾಂಗೋಪಾಂಗ ವಿಚಾರ ಮಾಡಿರುವದಲ್ಲದೆ, ಸಮಾಜದ ಅಪಕರ್ಷದ ಕಾರಣವೂ, ಉತ್ಕರ್ಷದ ಉಪಾಯವೂ ಬೇರೆ ಬೇರೆ ಪಾತ್ರ ಗಳಿಂದ ವಿಶದವಾಗಿ ಬೋಧವಾಗುವಂತೆ ಯೋಜನೆ ಮಾಡಿರುತ್ತದೆ. ಸಮಾಜ-ಕಂ ಟಕ ಜನರು ಸಮಾಜದ ಅವನತಿಯ ಸಲುವಾಗಿ ಎಂಥೆಂಥ ಪ್ರಯತ್ನ ಮಾಡುತ್ತಾರೆಂ ಬುವದನ್ನು ಈ ಕಾದಂಬರಿಯಲ್ಲಿ ವಿಶೇಷ ಮಾರ್ಮಿಕತೆಯಿಂದ ತೋರಿಸಿರುತ್ತದೆ:– ಒಟ್ಟಿಗೆ ಇದರಲ್ಲಿ ಸಮಾಜದ ಸದ್ಯಸ್ಥಿತಿಯ ಚಿತ್ರವು ಅವರ್ಣನೀಯವಾಗಿ ತೆಗೆದಿರುತ್ತ ದೆಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

(II) ಈ ಕಾದಂಬರಿಯಲ್ಲಿ 'ವೇಣೂ' ಎಂಬ ಹೆಸರಿನ ಸ್ತ್ರೀಯಳೇ ಕಥಾ ನಾಯಕಳಾಗಿರುವದರಿಂದ ಇದಕ್ಕೆ 'ವೇಣೂ' ಎಂಬ ಒಂದು ಹೆಸರನ್ನೂ, ಸಮಾಜದ ಅಧಃಪತನವಾಗಲಿಕ್ಕೆ ಸಮಾಜದಲ್ಲಿ ಸಮಾವೇಶವಾಗಿರುವ ದುಷ್ಟ ಜನರೇ ಕಾರಣ ರೆಂಬುವದನ್ನು ಇದರಲ್ಲಿ ವಿಸ್ತೃತವಾಗಿ ತೋರ್ಪಡಿಸಿರುವದರಿಂದ 'ದುಷ್ಟ ಸಮಾಜ ವೆಂಬ ಮತ್ತೊಂದು ಹೆಸರನ್ನೂ ಇಟ್ಟಿರುತ್ತದೆ.

(III) ಈ ಕಾದಂಬರಿಯನ್ನು ಭಾರತ ಗೌರವ ಗ್ರಂಥಮಾಲಾ ಚಾಲಕರಾದ "ಪ್ರಭಾಕರ ಭಸೆ" ಎಂಬವರು ಮಹಾರಾಷ್ಟ್ರ ಭಾಷೆಯಲ್ಲಿ ಬರೆದ "ಸಮಾಜ ಕಂ ಟಕ" ವೆಂಬ ಪುಸ್ತಕದ ಆಧಾರದಿಂದ ಬರೆದಿರುವೆನು.

(IV) ಲೇಖನ ಪ್ರಯತ್ನದಲ್ಲಿ ಇದು ನನ್ನ ಪ್ರಥಮ ಪ್ರಯತ್ನವು. ಮೊದಲೇ ನಾನು ಅಷ್ಟು ಕಲಿತವನಲ್ಲ; ಆದರಲ್ಲಿ ಮೊಟ್ಟಮೊದಲಿನ ಬರವಣಿಗೆ, ಅಂದಮೇಲೆ ನನ್ನ ಕೃತಿಯಲ್ಲಿ ದೋಷಗಳಿದ್ದರೂ ಇರಬಹುದು. ಸುಜ್ಞರೂ, ಲೇಖಕೋತ್ತೇಜ ಕರೂ ಆದ ತಾವೆಲ್ಲರು ಹಂಸಕ್ಷೀರ ನ್ಯಾಯದಂತೆ ಗುಣವನ್ನು ಸ್ವೀಕರಿಸಿ, ದೋಷ ವನ್ನು ಸೂಚಿಸಿದಲ್ಲಿ ಭಾವೀ ಆವೃತ್ತಿಯಲ್ಲಿ ಸುಧಾರಿಸುವೆನು.

( V ) ಈ ಕಾದಂಬರಿಯನ್ನು "ಧರ್ಮತರಂಗಿಣಿ" ಯಲ್ಲಿ ಮುದ್ರಿಸಿ ಪ್ರಸಿದ್ಧ ಮಾಡಿದ್ದಕ್ಕಾಗಿ ತರಂಗಿಣಿಯ ಉತ್ಪಾದಕರೂ, ಚಾಲಕರೂ ಆದ ಶಿ. ರಾ. ರಾ. ಶಿವಲಿಂಗ ಶಾಸ್ತ್ರಿಗಳ ಉಪಕಾರವನ್ನು ನಾನು ತುಂಬಾ ನೆನಿಸುತ್ತೇನೆ.

( VI ) ಈ ಕಾದಂಬರಿಯನ್ನು ಬುಡದಿಂದ ತುದಿಯವರೆಗೆ ಓದಿದ ತರ್ಕಶೀಲರಾದ ವಾಚಕರೇ ಈ ಕಾದಂಬರಿಯ ವೈಶೇಷ್ಯವನ್ನು ಕಂಡು ಹಿಡಿಯುತ್ತಿರುವಾಗ, ನಾನು ಪ್ರಸ್ತಾವನೆಯಲ್ಲಿಯೇ ರಾಮಾಯಣವನ್ನು ಬರೆಯುವ ಕಾರಣವಿಲ್ಲೆಂದು ನೆನಿಸಿ, ಆತ್ಮನಿವೇದನವನ್ನು ಸಂಪೂರ್ಣಿಸಿ ಸ್ವೀಕೃತ ಕಾರ್ಯಕ್ಕೆ ಜಯಪ್ರದವನ್ನು ಮಾಡಿದ ಶ್ರೀ ಶಂಕರನನ್ನು ಅನನ್ಯ ಭಕ್ತಿಭಾವದಿಂದ ಭಜಿಸುವೆನು.

॥ ಶಾರ್ದೂಲವಿಕ್ರೀಡಿತವೃತ್ತ. ॥

ಶ್ರೀಮಚ್ಛಂಕರ ಕಿಂಕರಪ್ರಿಯ ಸುಮೇಷುಧ್ವಂಸ ಸರ್ವೇಶ್ವರಾ ।
ಶ್ರೀಮಚ್ಛಿಷ್ಟ ಸುರಕ್ಷಣಪ್ರಿಯ ಹರಿಬ್ರಹ್ಮೇಂದ್ರ ವಂದ್ಯೇಶ್ವರಾ ।
ಶ್ರೀಮಚ್ಛೇಷಚಯಾಂಗ ಶೈಲಗೃಹ ನೀರೌಘೌರ್ಘಕಾಷ್ಠೇಶ್ವರಾ ।
ಶ್ರೀಮಚ್ಛಂಕರಿಕಾಂತ ಮಾಡು ಮಮಕೃತ್ಯಕ್ಕೀಗ ಮಾಂಗಲ್ಯಮಂ ॥

ಮೇಡ್ಲೇರಿ.
ತಾ. ೪ – ೮ – ೧೯೧೬.
( ಶ್ರಾವಣ ಶು. ೫. )

ವಿನಮ್ರ ವಿಧೇಯ,

( ನಂದೀಶಂ. )

# ವೇಣು

ಅಥವಾ

# ದುಷ್ಟ ಸಮಾಜ.

## ೧ನೆಯ ಪ್ರಕರಣ—ನಿದ್ರೆ.

ಬಿಸಿಲುಗಾಲದ ಒಂದು ದಿವಸ ಸಂಜೆಯ ನಾಲ್ಕೈದು ಘಂಟೆಯ ವೇಳೆಯು. ಆದರೆ ಶರೀರದಲ್ಲಿ ಒಂದೇಸವನೆ ಉರಿಯುರಿ ಆಗುತ್ತಿತ್ತು. ಈ ವೇಳೆಯಲ್ಲಿ ಅವಂತೀಪುರ ಗ್ರಾಮದಲ್ಲಿ ಸುಮಾರು ಹದಿನೇಳು ಹದಿನೆಂಟು ವರ್ಷದ ಸರ್ವಾಂಗ ಸುಂದರಿಯಾದ ಒಬ್ಬ ತರುಣಿಯು, ತನ್ನ ಮನೆಯ ಒಂದು ಕೋಣೆಯಲ್ಲಿ ಪಲ್ಲಂಗದ ಮೇಲೆ ಕುಳಿತು, ಏನೋ ವಿಚಾರ ಮಾಡುತ್ತಿದ್ದಳು. ಅವಳು ಚಿಂತಾಗ್ರಸ್ತಳಾಗಿದ್ದಳೆಂಬುವದು ಅವಳನ್ನು ನೋಡಿದ ಕೂಡಲೆ ಕಲ್ಪನೆಯಲ್ಲಿ ಬರುತ್ತಿತ್ತು. ಅವಳ ದೊಡ್ಡವಾದ ಕಣ್ಣುಗಳಲ್ಲಿ ಕಣ್ಣೀರು ಚಿಮುಕಿಸುತ್ತಿತ್ತು. ಅವಳ ಮೈಮೇಲಿನ ಬೆವರಿನ ಹನಿಗಳು ಮುತ್ತಿನಂತೆ ಅಂದವಾಗಿ ಕಾಣಿಸುತ್ತಿದ್ದವು. ಈ ವೇಳೆಯಲ್ಲಿ ಆ ತರುಣಿಯು ಒಂದು ಸ್ವಚ್ಛವಾದ ಬೆಲೆಯುಳ್ಳ ಶ್ವೇತಾಂಬರವನ್ನು ಉಟ್ಟುಕೊಂಡಿದ್ದಳು. ಅವಳ ಕೈಗಳಲ್ಲಿ ನಾಲ್ಕು ನಾಲ್ಕು ಕಾಜಿನ ಬಳೆಗಳು ಮಾತ್ರ ಇದ್ದವು. ಅವಳು ಕಂಠದಲ್ಲಿ ಮುತ್ತಿನ ಸರವನ್ನು ಹಾಕಿಕೊಂಡಿದ್ದಳು. ಕಿವಿಯಲ್ಲಿ ಓಲೆಗಳನ್ನಿಟ್ಟುಕೊಂಡಿದ್ದಳು. ಅವಳ ಮೈಮೇಲೆ ಇದಕ್ಕಿಂತ ಹೆಚ್ಚಿನ ಆಭರಣಗಳಿದ್ದಿಲ್ಲ. ಅವಳ ಉಜ್ವಲವಾದ ಮೈಬಣ್ಣವು ರತಿವರ್ಣವನ್ನು ಹೋಲುತ್ತಿತು. ಅವಳ ಕಣ್ಣುಗಳಲ್ಲಿ ಲಜ್ಜಾಯುಕ್ತವಾದ ಭಾವವು ಸ್ಪಷ್ಟವಾಗಿ ಕಾಣಿಸುತ್ತಿತ್ತು. ಅವಳ ವಯೋಮಾನದಂತೆ ಅವಳ ಸರ್ವ ಅವಯವಗಳಿಗೆ ಪೂರ್ಣತೆಯು ಪ್ರಾಪ್ತವಾಗಿತ್ತು. ಅವಳ ರಮಣೀಯ ದೇಹಾಕೃತಿಯು ಬ್ರಹ್ಮದೇವನ ಅಗಾಧ ರಚನಾಸಾಮರ್ಥ್ಯವನ್ನು ತೋರ್ಪಡಿಸುತ್ತಿತ್ತು.

ಆ ತರುಣಿಯು ಕುಳಿತ ಕೋಣೆಯಲ್ಲಿ ಇತಿಹಾಸದಲ್ಲಿ ಸುಪ್ರಸಿದ್ಧರಾದ ಮಹನೀಯರ ಭಾವಪಟಗಳೂ, ಪ್ರೇಕ್ಷಣೀಯ ಸ್ಥಳಗಳ ಚಿತ್ರಪಟಗಳೂ, ಉಪಯುಕ್ತ ಪುಸ್ತಕಗಳಿಂದ ತುಂಬಿದ ಸುಂದರವಾದ ಎರಡು ಮೂರು ಕವಾಟುಗಳೂ ಇದ್ದವು. ಪಲ್ಲಂಗದ ಹತ್ತರ ಒಂದು ಮೇಜೂ, ಒಂದು ಖುರ್ಚಿಯೂ ಇದ್ದು, ಮೇಜಿನ ಮೇಲೆ ಲೇಖನ ಸಾಮಗ್ರಿಯು ಇಟ್ಟಿತ್ತು. ಆ ತರುಣಿಯು ವಿಚಾರ ಮಾಡುತ್ತ ಮಾಡುತ್ತ ಒಂದು ಪತ್ರ ಬರೆಯಲಿಕ್ಕೆ ಆರಂಭಿಸಿ, ಅದನ್ನು ತ್ವರಿತವಾಗಿ ಬರೆದು ಮುಗಿಸಿದಳು. ಎಡೆಬಿಡದೆ ಪತ್ರ ಬರೆದದ್ದರ ಮೇಲಿಂದ ಪತ್ರದಲ್ಲಿ ಬರೆಯುವ ಸಂಗತಿಯನ್ನು ಅವಳು ಮುಂಚೆಯೇ ಆಲೋಚನೆ ಮಾಡಿರಬಹುದಾಗಿ ತೋರಿತು. ಬರೆದ ಪತ್ರವನ್ನು ಒಂದು ಪಾಕೇಟಿನಲ್ಲಿ ಹಾಕಿ ಬಾಯಿ ಮುಚ್ಚಿ, ಪಾಕೇಟಿನ ಮೇಲೆ 'ಕೃಷ್ಣರಾವ' ಎಂಬ ಹೆಸರು ಬರೆದು, ಅದನ್ನು ಅಲ್ಲಿಯೇ ಪಲ್ಲಂಗದ ಮೇಲಿಟ್ಟು, ಮತ್ತೆ ವಿಚಾರದಲ್ಲಿ ಮಗ್ನಳಾಗಿ ಆ ತರುಣಿಯು ಮೋರೆಯನ್ನು ಕೆಳಗೆ ಮಾಡಿಕೊಂಡು ಮಲಗಿದಳು.

ಯಾವದೊಂದು ಮಹತ್ವದ ಸಂಗತಿಯನ್ನು ಆಲೋಚಿಸುವಂಥ ಮನುಷ್ಯನಿಗೆ ಏಕಾಂತ ಸ್ಥಳವು ಒಳ್ಳೇ ಅನುಕೂಲವುಳ್ಳದ್ದಿರುತ್ತದೆ. ಆ ಪ್ರಕಾರ ಆ ತರುಣಿಯ ಕೋಣೆಯಾದರೂ ಏಕಾಂತ ಸ್ಥಳಕ್ಕೆ ಒಳ್ಳೇ ಅನುಕೂಲವಾಗಿತ್ತು. ಆದರೂ ಅವಳು ತನ್ನ ಮುಖ-ಕಮಲವನ್ನು ತನ್ನ ಎರಡೂ ಅಂಗೈಗಳಲ್ಲಿಟ್ಟುಕೊಂಡು ಏಕಾಂತವನ್ನು ಮಾಡುತ್ತಿದ್ದಳು. ಎದುರಿಗೆ ನಡೆದ ಸಂಗತಿಯು ಅವಳಿಗೆ ತಿಳಿಯುವಂತಿದ್ದಿಲ್ಲ. ಈ ಸಮಯದಲ್ಲಿ ಅವಳ ಕೋಣೆಯ ಬಾಗಿಲ ಹತ್ತರ ಒಬ್ಬ ತರುಣನು ಬಂದು ನಿಂತಿದ್ದನು. ಅವನು ಬಾಗಿಲ ಕಿಂಡಿಯಲ್ಲಿ ಸೂಕ್ಷ್ಮದೃಷ್ಟಿಯಿಂದ ನೋಡಲಾಗಿ ಅವನಿಗೆ ಮೋರೆಯನ್ನು ಕೆಳಗೆ ಮಾಡಿಕೊಂಡು ಪಲ್ಲಂಗದ ಮೇಲೆ ಸ್ವಸ್ಥವಾಗಿ ಮಲಗಿದ ತರುಣಿಯು ದೃಷ್ಟಿಗೆ ಬಿದ್ದಳು. ಇಂಥ ಸ್ಥಿತಿಯಲ್ಲಿ ಅವಳ ಕೋಣೆಯಲ್ಲಿ ಹೋಗಬೇಕೋ ಹೋಗಬಾರದೋ ಎಂಬ ವಿಚಾರದಲ್ಲಿ ಆಗಂತುಕ ತರುಣನು ಮಗ್ನನಾದನು. ಕೋಣೆಯ ಬಾಗಿಲು ಮುಚಿದ್ದರೂ, ಅಗಳೆಯನ್ನು ಹಾಕದ್ದರಿಂದ ಅವನು ಒಳಗೆ ಹೋಗಬೇಕೆಂದು ಸಿದ್ಧನಾದನು. ಆದರೆ ಕುಲೀನ ಸ್ತ್ರೀಯ ಕೋಣೆಯಲ್ಲಿ ಅವಳ ಒಪ್ಪಿಗೆಯಿಲ್ಲದೆ ಹೋಗುವದು

ಶಾಸ್ತ್ರವಿರುದ್ಧವಾದದ್ದು ! ಎಂಬೀ ವಿಚಾರದಿಂದ ಅವನು ಮತ್ತೆ ಒಳಗೆ ಹೋಗಲು ಹಿಂಜರಿದನು. ಕಡೆಗೆ ಅವನು ಆ ತರುಣಿಯನ್ನು ಕರೆದು ಅವಳ ಸಮ್ಮತಿಯೊಂದಿಗೆ ಒಳಗೆ ಹೋಗಬೇಕೆಂದಾಲೋಚಿಸಿ ಆ ಪ್ರಕಾರ ವೇಣೂ ಎಂದು ಕರೆದನು. ಆದರೂ ಮಲಗಿದ ತರುಣಿಯು ಮೇಲಕ್ಕೇಳಲಿಲ್ಲ. ಹಾ ಹೂ ಎಂದೂ ಅನ್ನಲಿಲ್ಲ. ಅವಳು ಯಥಾಪ್ರಕಾರ ತನ್ನ ವಿಚಾರದಲ್ಲಿ ಮಗ್ನಳಾಗಿದ್ದಳು. ಆಗ ಅವನು, ತರುಣಿಯು ಗಾಢನಿದ್ರಾವಸ್ಥೆಯಲ್ಲಿರುತ್ತಾಳೆಂದು ಭಾವಿಸಿ, ಹತ್ತರ ಹೋಗಿ ಕರೆಯಬೇಕೆಂದು ನಿಶ್ಚಯಿಸಿ ಬಾಗಿಲು ತೆಗೆದು ಪಲ್ಲಂಗದ ಸಮೀಪಕ್ಕೆ ಹೋದನು.

ಆಗಂತುಕ ತರುಣನ ಆಗಮನವು ವಿಚಾರದಲ್ಲಿ ಮುಳುಗಿದ ತರುಣಿಗೆ ಗೊತ್ತಾಗಲಿಲ್ಲ. ತರುಣನ ಮುಖಮುದ್ರೆಯು ಪ್ರಶಾಂತವಾದದ್ದು. ಅವನ ಮೈಬಣ್ಣವು ಸತೇಜವಾದ ಗೌರವರ್ಣದ್ದು. ಅವನ ಕಣ್ಣುಗಳು ತೇಜಃಪುಂಜವಾದವು. ಅವನ ದೃಷ್ಟಿಯು ಪ್ರೇಮಭರಿತವಾದದ್ದು. ತಲೆಯ ಕೂದಲುಗಳು ಅಚ್ಚ ಕಾಳವರ್ಣದವಿದ್ದು, ಪ್ರಕಾಶಮಯವಾಗಿದ್ದವು. ಈ ವೇಳೆಯಲ್ಲಿ ಅವನ ಮೈಯಲ್ಲಿ ಒಂದೇ ಒಂದು ಅಂಗಿಯಿತ್ತು. ತಲೆಯ ಮೇಲೆ ಏನೂ ಇದ್ದಿಲ್ಲ. ಅವನ ಬಲಗೈಯ್ಯ ಕಿರಿಬೆರಳಿನಲ್ಲಿ ಒಂದು ವಜ್ರದ ಹರಳು ಕೂಡ್ರಿಸಿದ ಸುವರ್ಣದ ಉಂಗುರವು ಮಿನುಕುತ್ತಿತು. ಅವನ ವಯಸ್ಸು ಸುಮಾರು ಇಪ್ಪತ್ತು ಇಪ್ಪತ್ತೊಂದಿತ್ತು. ಅವನು ಅಂಜಂಜುತ್ತ ಕೋಣೆಯಲ್ಲಿ ಪ್ರವೇಶಿಸಿದ್ದರೂ, ಅವನ ಮುಖಮುದ್ರೆಯಲ್ಲಿ ಏನೂ ಹೆಚ್ಚು ಕಡಿಮೆಯಾಗದ್ದರಿಂದ, ನೀಚೋದ್ದೇಶದಿಂದ ಕೋಣೆಯಲ್ಲಿ ಹೋಗಿರಲಿಲ್ಲವಾಗಿ ತೋರಿತು.

ತರುಣನು ಆ ತರುಣಿಯ ಹತ್ತರ ಹೋಗಿ ನಿಂತುಕೊಂಡು, ತೆರೆದ ರೆಪ್ಪೆಯನ್ನು ಮುಚ್ಚದೆ ಒಂದೇಸವನೆ ಆ ತರುಣಿಯನ್ನು ನೋಡುತ್ತಿದ್ದನು. ಪ್ರಿಯಕರವಾದ ಯಾವದೊಂದು ವಸ್ತುವು ಬಹಳ ದಿವಸಕ್ಕೆ ದೃಷ್ಟಿಗೆ ಬಿದ್ದರೆ ಅದನ್ನು ಹೇಗೆ ಸಕೌತುಕ ದೃಷ್ಟಿಯಿಂದ ನೋಡಬೇಕಾಗುವದೋ, ಹಾಗೆ ಆ ತರುಣನು ಮಲಗಿದ ಸ್ತ್ರೀಯನ್ನು ಸಕೌತುಕ ದೃಷ್ಟಿಯಿಂದ ನೋಡುತ್ತಿದ್ದನು. ಬಹಳ ವೇಳೆಯ ವರೆಗೆ ಅವನು ಅವಳನ್ನು ನೋಡಿದರೂ, ಅವನಿಗೆ ಸಮಾಧಾನವಾಗಲಿಲ್ಲ. ಪ್ರಾಯದಲ್ಲಿ ನೋರೆಯನ್ನು ಕೆಳಗೆ ಮಾಡಿ

ಕೊಂಡು ಮಲಗಿದ ಸ್ತ್ರೀಯನ್ನು ನೋಡಿದ. ಅವನಿಗ ಅಸಮಾಧಾನವಾದದ್ದು ಅರಿದಲ್ಲ. ಅಸಂಖ್ಯ ಕೇಶಗಳಿಂದ ಪರಿಪುತವಾದ ಮಸ್ತಕದಿಂದಲೂ, ವಿಶಾಲವಾದ ಕೈಗಳಿಂದಲೂ, ಅಸ್ಪಷ್ಟವಾಗಿ ಕಾಣಿಸುವ ಉರಪ್ರದೇಶದಿಂದಲೂ, ಉಟ್ಟುಕೊಂಡ ಶ್ವೇತಾಂಬರವು ಅವ್ಯವಸ್ಥಿತವಾಗಿ ಬಿದ್ದದರಿಂದ, ಸುಲಿದ ಬಾಳೇಹಣ್ಣಿನಂತೆ ಕಾಣಿಸುವ ಸುಕೋಮಲವಾದ ಹೊಟ್ಟೆಯಿಂದಲೂ ಆ ತರುಣಿಯು ಆ ವೇಳೆಯಲ್ಲಿ ಬಹಳ ಮನೋಹರವಾಗಿಯೂ, ಚಿತ್ತಾಕರ್ಷಕವಾಗಿಯೂ ತೋರುತ್ತಿದ್ದಳು.

ಆಗಂತುಕ ತರುಣನು ಆ ತರುಣಿಯ ಮುಖಕಮಲವನ್ನು ನೋಡುವದಕ್ಕಾಗಿ ಆತುರವುಳ್ಳವನಾಗಿದ್ದನು. ಅದರಲ್ಲಂತೂ ಅವಳ ಎರಡು ಇನಿ ಮಾತುಗಳನ್ನು ಕೇಳಬೇಕೆಂದು ಉತ್ಕಟಾಪೇಕ್ಷೆಯುಳ್ಳವನಾಗಿದ್ದನು. ಆದರೆ ಅವನ ಮನೋಬಯಕೆಯು, ಅವಳ ನಿದ್ರೆಯು ಪೂರ್ಣವಾಗುವ ಹೊರ್ತು ಈಡೇರುವಂತಿದ್ದಿಲ್ಲ. ಸಂಜೆಯ ಐದು ಘಂಟೆ ವೇಳೆಯಲ್ಲಿಯ ಅವಳ ಗಾಢ ನಿದ್ರೆಯನ್ನು ಕಂಡು ಆ ತರುಣನಿಗೆ ಅತ್ಯಾಶ್ಚರ್ಯವಾಯಿತು. ಆಗ ಅವನ ಬಾಯಿಯಿಂದ ಸಹಜವಾಗಿ 'ಇದೇನು ಚಮತ್ಕಾರಿತ ನಿದ್ರೆ' ಎಂಬ ಶಬ್ದವು ಸ್ಪಷ್ಟವಾಗಿ ಹೊರಟಿತು. ಆದರೂ ಆ ತರುಣಿಗೆ ಎಚ್ಚರವಾಗಲಿಲ್ಲ. ಆಗಂತೂ ಆ ತರುಣನಿಗೆ ಬಹಳೇ ಸಖೇದಾಶ್ಚರ್ಯವಾಯಿತು. ಆತುರವಿದ್ದ ಸಂಗತಿಯು ತಡವಾಗಿ ಆಗಬಾರದಾಗಿ ಸಾಧಾರಣವಾಗಿ ಪ್ರತಿಯೊಬ್ಬ ಮನುಷ್ಯನ ಮನಸ್ಸಿನ ಧರ್ಮವಿರುತ್ತದೆಂದು ಆರ್ಯರು ಹೇಳಿರುವದು ಸುಳ್ಳಲ್ಲ. ವಾಸ್ತವಿಕವಾಗಿ ಆ ತರುಣನು ಆ ತರುಣಿಯ ಕೋಣೆಯಲ್ಲಿ ಬಂದು ನಿಂತು, ಬಹಳ ಹೊತ್ತಾಗದಿದ್ದರೂ, ಅವಳ ಸಂಗಡ ಎರಡು ಸವಿಮಾತುಗಳನ್ನಾಡಬೇಕಾಗಿ ಆ ತರುಣನ ಉತ್ಸುಕತೆಯಿದ್ದದರಿಂದ, ಅವನಿಗೆ ಒಂದೊಂದು ಘಳಿವು ಒಂದು ಗಳಿಗೆಯಂತೆ ತೋರಿತು. ಸಭ್ಯತೆ, ಶಾಂತತೆ, ಸಾರಾಸಾರ ವಿಚಾರ ಮೊದಲಾದ ಸದ್ಗುಣಗಳು ಆ ತರುಣನಲ್ಲಿ ಇಲ್ಲದಿದ್ದರೆ, ಅವನು ಬಂದ ಕೂಡಲೇ ಅವಳ ಕೈಯನ್ನು ಹಿಡಿದು ತನ್ನ ಮನದಿಚ್ಛೆಯನ್ನು ಪೂರ್ತಿ ಮಾಡಿಕೊಳ್ಳುತ್ತಿದ್ದನು; ಆದರೆ ಸಭ್ಯತೆ, ಶಾಂತತೆ, ನಮ್ರತೆ ಮುಂತಾದ ಸುಗುಣಗಳು ಆ ತರುಣನ ಹೃದಯ-ಮಂದಿರದಲ್ಲಿ ಮೂರ್ತಿಮಂತವಾಗಿದ್ದದರಿಂದ, ಅವನಿಗೆ ಅವಳ ಕೈಯನ್ನು ಹಿಡಿದು ಎಬ್ಬಿಸುವ, ಗಟ್ಟಿಯಾಗಿ

ವೇಣೂ ಎಂದು ಕರೆಯುವ ಧೈರ್ಯವಾಗಲಿಲ್ಲ. ಆ ವೇಳೆಯಲ್ಲಿ ಮಾಡುವ ಉಪಾಯವೂ ಅವನಿಗೆ ತೋಚಲಿಲ್ಲ. ಪಲ್ಲಂಗದ ಸಮೀಪದಲ್ಲಿದ್ದ ಒಂದು ಪುಸ್ತಕದ ಕಪಾಟಿಗೆ ಹೊಂದಿ ಆ ತರುಣನು ನಿಂತಿದ್ದನು. ಅವನ ನೋಟವೆಲ್ಲ ಪಲ್ಲಂಗದ ಮೇಲೆ ಪವಡಿಸಿದ ಚಂದ್ರಿಕೆಯ ಕಡೆಗೇ ಇತ್ತು. ಸ್ವಭಾವತಃ ಅವನು ಅವಳ ಮುಖವನ್ನೇ ನಿರುಕಿಸುತ್ತಿದ್ದನು. ವಿಶೇಷವಾಗಿ ಅವಳ ಮೋರೆಯು ಅವಳ ಅಂಗೈಗಳಲ್ಲಿ ಅಡಗಿತ್ತು. ಆ ತರುಣನು ನಿಂತ ಭಾಗಕ್ಕೆ ಅವಳ ಮುಚ್ಚಿಕೊಂಡ ಕಣ್ಣುಗಳೂ, ಕೆಂಪು ಗಲ್ಲಗಳೂ ಅವನ ದೃಷ್ಟಿಗೆ ಬಿದ್ದವು. ಅವನೇ ದೃಷ್ಟಿಗೆ ಬಿದ್ದ ಅವಯವಗಳನ್ನು ಸೂಕ್ಷ್ಮದೃಷ್ಟಿಯಿಂದ ನೋಡುತ್ತಿರಲು, ಅವನಿಗೆ ಅವಳ ಗಲ್ಲದ ಮೇಲೆ ಎರಡು ಕಣ್ಣೀರಿನ ಹನಿಗಳು ಬಿದ್ದದ್ದು ಕಾಣಿಸಿತು. ಆಗ ಮಧ್ಯಾಹ್ನದ ಸೂರ್ಯಪ್ರಕಾಶದಂತೆ ಪ್ರಕಾಶಮಯವಾದ ಆ ತರುಣನ ಮುಖಕಮಲವು ಬತ್ತಿ ಹೋಯಿತು. ಅವನು ಉಸುರ್ಗರೆದು ಮನಸ್ಸಿನಲ್ಲಿ:—"ಈ ಸುಂದರಿಯು ನಿದ್ರಾವಸ್ಥೆಯಲ್ಲಿ ಇಲ್ಲ, ಶೋಕ-ವಿಚಾರದಲ್ಲಿ ಮುಳುಗಿದ್ದಾಳೆ" ಎಂದಾಲೋಚಿಸಿ, ಗಟ್ಟಿ ಮನಸ್ಸು ಮಾಡಿ ಪ್ರೇಮುಲವಾದ ಸ್ವಲ್ಪ ಘೋರಸ್ವರದಿಂದ ವೇಣೂ ಎಂದು ಕರೆದನು.

ಆ ಶಬ್ದವನ್ನು ಕೇಳಿ ವೇಣುವು ಚಕಿತಳಾದಳು. ಅವಳು ಕೂಡಲೆ ಎದ್ದು ಕುಳಿತು ನೋಡುತ್ತಾಳೆ, ಎದುರಿಗೆ ಕೃಷ್ಣರಾವನು! ಸುಮ್ಮನೆ ನಿಂತಿದ್ದಾನೆ! ಅವನನ್ನು ನೋಡಿದ ಕೂಡಲೆ ಅವಳು ಲಜ್ಜೆಯಿಂದ ಬಾಗಿ ಪಲ್ಲಂಗದ ಮೇಲಿಂದೆದ್ದು ಅದರ ಹತ್ತರ ಕೆಳಗೆ ನಿಂತುಕೊಂಡಳು. ತುಫಾನದಲ್ಲಿ ಸಿಕ್ಕ ಹಡಗದಂತೆ ಅವಳು, ವಿಚಾರ-ತರಂಗದ ಮೇಲಿಂದ ದೂರ ಹರಿದು ಹೋಗಿದ್ದರೂ, ಹಡಗದಂತೆ ಯಾವದೊಂದು ಬಂದರಕ್ಕೆ ಹೋಗಿ ಹತ್ತದೆ ತಾನು ಮೊದಲು ಹೊರಟ ಬಂದರಕ್ಕೆ ಬಂದು ಹತ್ತಿದಳು. ವಿಚಾರ-ತರಂಗದ ಗತಿಯು ಮನುಷ್ಯನನ್ನು ಮೊದಲಿನ ಸ್ಥಳಕ್ಕೆ ತಂದು ಬಿಡುತ್ತದೆ. ವೇಣುವು ಮೊದಲಿನ ಸ್ಥಳಕ್ಕೆ ಬಂದು ಹತ್ತಲಿಕ್ಕೂ, ಆ ತರುಣನು ವೇಣೂ ಎಂದು ಕರೆಯಲಿಕ್ಕೂ ಅವರೀರ್ವರ ಐಮ್ಮನಸ್ಸೇ ಕಾರಣವಾಗಿದೆ. ಅದ್ದರಿಂದಲೇ ವೇಣುವಿನ ಕಿವಿಯಲ್ಲಿ 'ವೇಣೂ' ಎಂಬ ಎರಡು ಅಕ್ಷರಗಳು ತಟ್ಟನೆ ಸೇರಿ ಪರಿಣಾಮವನ್ನುಂಟು ಮಾಡಿದವು; ಮತ್ತು ವೇಣೂ ಎಂದ

ಕರೆದ ಆ ತರುಣನು ಯಾರೆಂಬುವದನ್ನು ಅವಳು ಕೂಡಲೆ ಕಂಡು ಹಿಡಿದಳು; ಮತ್ತು ತರುಣನನ್ನು ಕಂಡ ಕೂಡಲೆ ಅವಳು ಎದ್ದು ನಿಂತಳು; ಎದ್ದ ಕೂಡಲೆ ಒಂದು ಬಾರೆ ಪ್ರೇಮಾಧಿಕ್ಯ ದೃಷ್ಟಿಯಿಂದ ತರುಣನ ಕಡೆಗೆ ನೋಡಿದಳು. ಅಷ್ಟರಿಂದಲೇ ಆ ತರುಣನಿಗೆ ಆನಂದವಾಯಿತು. ಪರಸ್ಪರ ದರ್ಶನದಿಂದ ಈರ್ವರೂ ಆನಂದಪರವಶರಾದರು. ಇಷ್ಟರಲ್ಲಿ ತರುಣನ ಲಕ್ಷವು ಗಾದೆಯು ಮೇಲಿದ್ದ ಪತ್ರದ ಕಡೆಗೆ ಹೋಯಿತು. ಅದರ ಮೇಲಿದ್ದ "ಕೃಷ್ಣರಾವ" ಎಂಬ ಅಕ್ಷರಗಳನ್ನು ನೋಡಿ ಅವನಿಗೆ ವಿಲಕ್ಷಣ ಜಿಜ್ಞಾಸೆಯು ಹುಟ್ಟಿತು. ತರುಣನ ಲಕ್ಷವು ಪತ್ರದ ಕಡೆಗೆ ಹೋಯಿತೆಂಬುವದು ತರುಣಿಯ ಧ್ಯಾನದಲ್ಲಿ ಬಂದ ಕೂಡಲೆ, ಅವಳು ಅವನ ಕಣ್ಣು ತಪ್ಪಿಸಿ ಆ ಪತ್ರವನ್ನು ಅವನಿಗೆ ಕಾಣದಂತೆ ಇಡಲು ಪ್ರಯತ್ನ ಮಾಡಲಾರಂಭಿಸಿದಳು. ಅವಳು ಮೆಲ್ಲನೆ ಆ ಪತ್ರವನ್ನು ಶೀರೆಯ ಪದರಿನಲ್ಲಿ ಸೇರಿಸಿದಳು. ತರುಣನ ಲಕ್ಷವೆಲ್ಲ ಆ ಕಡೆಗೇ ಇತ್ತು. ಆದರೂ ಅವನು ಆ ಪತ್ರದ ಸಂಬಂಧವಾಗಿ ಏನೂ ಮಾತಾಡದೆ, ಔಪಚಾರಿಕ ರೀತಿಯಿಂದ ನುಡಿದನೇನಂದರೆ :— ವೇಣೂ ನಾನು ಇಲ್ಲಿ ಬಂದು ನಿಂತು ಎಷ್ಟೋ ವೇಳೆಯಾದರೂ ನೀನು ನನ್ನನ್ನು ಹೊರಳಿ ಕೂಡ ನೋಡಲಿಲ್ಲವೆಂದನು.

ಆಗ ವೇಣುವಿಗೆ ಉತ್ತರವೇನು ಕೊಡಬೇಕೆಂಬುವದು ತಿಳಿಯದೆ ಹೋಯಿತು. ಅವಳು ಪತ್ರವನ್ನು ಅಡಗಿಸುವ ವಿಚಾರದಲ್ಲಿ ಲೀನವಾಗಿದ್ದಳು. ಸೀರೆಯ ಪದರಿನಲ್ಲಿ ಇಟ್ಟ ಆ ಪತ್ರವು ಅದರಲ್ಲಿಂದ ಹೊರಗೆ ಸ್ಪಷ್ಟವಾಗಿ ಕಾಣಿಸುತ್ತಿತ್ತು. ಆದ್ದರಿಂದ ಅವಳು ಮೆಲ್ಲನೆ ಆ ಪತ್ರವನ್ನು ಗಾದಿಯ ಕೆಳಗಿಟ್ಟು ಬಿಟ್ಟಳು. ವೇಣುವು ಪತ್ರವನ್ನು ಮುಚ್ಚಿಡುವದರ ಸಲುವಾಗಿ ಮಾಡುವ ಪ್ರಯತ್ನವನ್ನು ನೋಡಿ, ಆ ತರುಣನ ಜಿಜ್ಞಾಸೆಯು ಮತ್ತಿಷ್ಟು ಪ್ರಬಲವಾಯಿತು. ಆಗ ಅವನು :—ವೇಣೂ, ಅದು ಯಾರ ಪತ್ರವೆಂದು ಕೇಳಿದನು. ವೇಣುವು ಗೊಂದಲದಲ್ಲಿ ಬಿದ್ದಳು. ಏನಾದರೂ ಮಾಡಿ ತನ್ನ ಕಾರ್ಯಸಾಧನೆ ಮಾಡಿಕೊಳ್ಳುವ ಉದ್ದೇಶದಿಂದ ಅವಳು :—ಛೇ, ಅದು ಪತ್ರವಲ್ಲ. ಕೃಷ್ಣರಾವ ಈ ಖುರ್ಚಿಯ ಮೇಲೆ ಮಂಡಿಸಿರಿ. ತಾವು ಬಂದು ನಿಂತು ಬಹಳ ವೇಳೆಯಾದಂತೆ ಕಾಣುತ್ತದೆ, ಎಂದಳು.

ತರುಣನ ಹೆಸರು ಕೃಷ್ಣರಾವನೆಂಬುವದು ನಿಜವು. ವೇಣುವು ಪತ್ರ

ದ ವಿಷಯವನ್ನು ಬಿಟ್ಟು, ಎರಡನೇ ವಿಷಯವನ್ನು ತೆಗೆದ ಕೂಡಲೆ ಅವನೂ ಆ ಸಂಬಂಧವಾಗಿ ಏನೂ ಮಾತಾಡದೆ, ನಡೆದ ವಿಷಯದ ಸಂಬಂಧವಾಗಿ ಮಾತಾಡಲಾರಂಭಿಸಿದನು.

ಕೃಷ್ಣರಾವ:—ವೇಣೂ, ನಾನು ಬಂದು ನಿಂತು ಎಷ್ಟೋ ವೇಳೆಯಾದರೂ ನೀನು ಸ್ವಲ್ಪವಾದರೂ ಯೋಗಕ್ಷೇಮವನ್ನು ವಿಚಾರಿಸಲಿಲ್ಲ. ನಾನು ಹುಬ್ಬಳ್ಳಿಗೆ ಹೋಗಿದ್ದರಿಂದ ಗಾಡಿಯಿಂದ ಇಳಿದ ಕೂಡಲೆ ನಿನ್ನ ಬಳಿಗೆ ಬಂದೆನು.

ವೇಣು:—(ಮಧುರ ಸ್ವರದಿಂದ) ಕೃಷ್ಣರಾವ, ತಮಗೆ ಇಷ್ಟು ಕೋಪವು ಬರಬೇಕಾದರೆ, ನನ್ನಿಂದಾದ ತಪ್ಪಾದರೂ ಯಾವದು? ಒಂದು ವೇಳೆ ನನ್ನಿಂದ ಅಂಥ ಅಪರಾಧವಾಗಿದ್ದರೆ, ಅದನ್ನು ದಯಮಾಡಿ ಕ್ಷಮಿಸಿರಿ.

ಕೃಷ್ಣರಾವ:—ನಿನ್ನ ತಪ್ಪಿನ ಬಗ್ಗೆ ನಿನಗೆ ಶಿಟ್ಟು ಮಾಡುವ ಅಧಿಕಾರವಾದರೂ ನನಗೆಲ್ಲಿಯದು?

ವೇಣು:—(ಅಧೋದೃಷ್ಟಿಯಿಂದ) ಕೃಷ್ಣರಾವ, ಅಪರಾಧ ಮಾಡಿದವರಿಗೆ ಶಿಟ್ಟು ಮಾಡುವದು ಯಥಾಕ್ರಮವಾಗಿದೆ. ನಾನಂಥ ಅಪರಾಧವನ್ನು ಮಾಡಿದ್ದರೆ, ಆ ಬಗ್ಗೆ ತಮ್ಮಲ್ಲಿ ಕ್ಷಮೆ ಬೇಡಲಿಕ್ಕೆ ಅಡ್ಡಿಯೇನು?

ಕೃಷ್ಣರಾವ:—(ನಗುತ್ತ) ಹೌದು, ಹೌದು. ಅದೆಲ್ಲ ನಿಜವು. ಆದರೆ ನಿನ್ನಂಥ ತಪ್ಪು ಮಾಡುವವರು ಜಗತ್ತಿನಲ್ಲಿ ದೊರೆಯಲಿಕ್ಕಿಲ್ಲ. ನಿನ್ನ ತಪ್ಪಿಗೆ ಕ್ಷಮೆಯನ್ನಾದರೂ ಹೇಗೆ ಮಾಡಬೇಕು.

ವೇಣು:—(ಖೇದಕಾರಕ ಸ್ವರದಿಂದ) ಕೃಷ್ಣರಾವ, ತಾವು ಸುಮ್ಮನೆ ನನ್ನನ್ನು ಗೊಂದಲದಲ್ಲಿ ಯಾಕೆ ಕೆಡಹುತ್ತೀರಿ? ನನ್ನ ಅಪರಾಧವನ್ನು ಹೇಳಿ, ನನ್ನನ್ನು ದಂಡಿಸಲಿಕ್ಕೂ, ಅಥವಾ ಕ್ಷಮಿಸಲಿಕ್ಕೂ ನೀವು ಯಾಕೆ ಹಿಂದುಮುಂದು ನೋಡುತ್ತೀರಿ?

ಕೃಷ್ಣರಾವ:—ವೇಣೂ ನಿನ್ನ ಅಪರಾಧವು ಸಣ್ಣದಲ್ಲ. ಯಾವಾಗಲೂ ಪ್ರಫುಲ್ಲಿತವಾದ ನಿನ್ನ ಮುಖವನ್ನು ನನ್ನನ್ನು ನೋಡಿದ ಕೂಡಲೆ ಖಿನ್ನ ಮಾಡಿದಿ. ಮುಖದ ಮೇಲಿನ ಕಾಂತಿಯನ್ನು ಅಡಗಿಟ್ಟುಕೊಂಡಿ. ಗಲ್ಲದ ಮೇಲಿನ ಆರಕ್ತತೆಯನ್ನು ಬಚ್ಚಿಟ್ಟುಕೊಂಡಿ. ಕಲ್ಲಸಕ್ಕರೆಗಿಂತಲೂ ಸವಿಯಾದ ಸ್ವರವನ್ನು ಕದ್ದಿಟ್ಟು, ನನ್ನೊಡನೆ ಆರ್ತಸ್ವರದಿಂದ ಮಾತಾಡಲಿಕ್ಕೆ ಆರಂಭ ಮಾಡಿದಿ. ನಾನು ತಿರುಗಿ ಬೇಗನೆ ಹೋಗಲೆಂದು ಕಣ್ಣುಗಳಲ್ಲಿ

ಗಂಗಾ-ಯಮುನೆಯನ್ನು ಧಾರಣ ಮಾಡಿದಿ. ವೇಣೂ, ನಿನ್ನ ತಪ್ಪುಗಳಿಗೆ ಲೆಕ್ಕವಿಲ್ಲ. ನಿನ್ನ ತಪ್ಪುಗಳ ಬಗ್ಗೆ ನೀನೇ ಆಲೋಚಿಸಿ ನೋಡು.

ಕೃಷ್ಣರಾವನ ಮಾತುಗಳಿಂದ ವೇಣುವಿಗೆ ಬಹಳ ದುಃಖವಾಯಿತು. ಅವಳ ಎದೆಯೊಡೆದು ನೀರಾಯಿತು. ಅವಳ ಕಣ್ಣುಗಳು ಕಣ್ಣೀರುಗಳಿಂದ ತುಂಬಿ ಹೋದವು. ಅವಳ ಕಂಠವು ಗದ್ಗದಿತವಾಯಿತು. ಅವಳ ಗಲ್ಲಗಳ ಮೇಲಿಂದ ನಿಜವಾಗಿಯೇ ಕಣ್ಣೀರಿನ ಹನಿಗಳು ದಳದಳ ಕೆಳಗೆ ಬೀಳಹತ್ತಿ ದವು. ಅವಳು ನಿಟ್ಟುಸುರು ಬಿಟ್ಟು ಆರ್ತಸ್ವರದಿಂದ:—ಕೃಷ್ಣರಾವ, ಏನು ಹೇಳಲಿ! ನನ್ನ ದುರ್ದೈವವೇ ನನ್ನನ್ನು ಅಪರಾಧಿಯನ್ನಾಗಿ ಮಾಡಿದೆ!! ನನ್ನ ಕರ್ಮಭೋಗವೇ ನನ್ನ ಅಸಂತೋಷಕ್ಕೆ ಕಾರಣವಾಗಿದೆ!!! ಆ ಸಂ ಬಂಧವಾಗಿ ತಾವು ಏನೂ ವಿಚಾರಿಸದಿದ್ದರೆ, ಬಹಳೇ ನೆಟ್ಟಗಾಗುತ್ತದೆ!

ವೇಣುವು ಬಹಳ ಕಷ್ಟದಿಂದ ಮಾತಾಡುತ್ತಿದ್ದಳು. ತುಂಬಿದ ಹುಣ್ಣಿ ವೆಯ ಚಂದ್ರನ ಕಾಂತಿಯನ್ನು ಸರಿಗಟ್ಟುವ ಅವಳ ಮುಖಕಾಂತಿಯು ನಿಸ್ತೇಜವಾಗಿ ತೋರಹತ್ತಿತು. ಅವಳು ಬಾಗಿದ ತಲೆಯಿಂದ ಅಲೆದಾಡದೆ, ನಿಂತಿದ್ದಳು. ವೇಣುವಿನ ಸ್ಥಿತಿಯನ್ನು ನೋಡಿ ಕೃಷ್ಣರಾವನಿಗೆ ಕಡು ದುಃಖ ವಾಯಿತು. ಅವಳ ಮೃದುವಾದ ಮನಸ್ಸನ್ನು ಕಾರಣವಿಲ್ಲದೆ ನೋಯಿಸಿದ್ದ ರಿಂದ ಅವನಿಗೆ ಬಹಳ ಅಸಮಾಧಾನವಾಯಿತು. ಆದ ತಪ್ಪಿಗಾಗಿ ಕ್ಷಮೆಯನ್ನು ಬೇಡುವ ಉದ್ದೇಶದಿಂದ, ಕೃಷ್ಣರಾವನು—

ವೇಣೂ, ನಿನ್ನ ಕೋಮಲಾಂತಃಕರಣವನ್ನು ನೋಯಿಸಿದ್ದಕ್ಕಾಗಿ ನನಗೆ ಬಹಳ ದುಃಖವೆನಿಸಿದೆ. ನಿನ್ನ ತಪ್ಪನ್ನು ತೋರಿಸಿಕೊಟ್ಟದ್ದೇ ನನ್ನ ತಪ್ಪಾಯಿತು. ಈ ಬಗ್ಗೆ ಕ್ಷಮಿಸು. ನನ್ನ ಮಾತುಗಳಿಂದ ನಿನಗೆ ಸಿಟ್ಟು ಬಂದೀತೆಂದು ನಾನು ಕನಸು-ಮನಸಿನಲ್ಲಿಯಾದರೂ ತಿಳಿದಿದ್ದಿಲ್ಲ.

ಕೃಷ್ಣರಾವನ ಮೋಹಕ ವಚನಗಳಿಂದ ವೇಣುವಿನ ಖಿನ್ನತೆಯು ಸಮೂಲ ನಾಶವಾಯಿತು. ಅವಳು ಸೀರೆಯ ಪದರಿನಿಂದ ಕಣ್ಣೀರನ್ನೊರಸು ತ್ತ:-ಕೃಷ್ಣರಾವ, ಮನಬಂದಂತೆ ಮಾತಾಡುವದರಿಂದ ಪ್ರಯೋಜನವೇನು? ನಿಮ್ಮ ಮಾತುಗಳಿಂದ ನನಗೆ ಸ್ವಲ್ಪಾದರೂ ಸಿಟ್ಟು ಬರುವಂತಿಲ್ಲ.

ಕೃಷ್ಣರಾವ:—(ನಗುತ್ತ) ಹೌದು, ನನ್ನ ಮಾತಿನಿಂದ ಸಿಟ್ಟು ಬರು ವಂಥ ಗುಣವನ್ನು ದೇವರು ನಿನಗೆ ಕೊಟ್ಟೇ ಇಲ್ಲ.

ವೇಣು:—ಎಂಥವರಿದ್ದರೂ, ಒಬ್ಬರನ್ನೊಬ್ಬರು ಸ್ತುತಿ ಮಾಡುವದು ಮನುಷ್ಯನ ಸ್ವಾಭಾವಿಕ ಗುಣವಾಗಿದೆ.

ನಂತರ ಕೃಷ್ಣರಾಯನು ಏನೂ ಮಾತಾಡದೆ, ಕೆಲಹೊತ್ತು ತಟಸ್ಥ ನಾಗಿ ನಿಂತಿದ್ದನು. ಬಂದಂದಿನಿಂದ ಪತ್ರದ ಬಗ್ಗೆ ಅವನ ಮನಸ್ಸಿನಲ್ಲಿ ಅನೇಕ ವಿಚಾರ ತರಂಗಗಳು ಉತ್ಪನ್ನವಾದವು. ಆಗ ಅವನು ಪ್ರಸ್ತುತ ವಿಷಯವನ್ನು ಬಿಟ್ಟು, ಪತ್ರದ ವಿಷಯವನ್ನು ತೆಗೆದನು.

ಕೃಷ್ಣರಾವ:—ವೇಣೂ, ಇಲ್ಲಿದ್ದ ಪತ್ರವು ಎಲ್ಲಿ ಅದೆ? ತಾ.

ವೇಣು:—(ಏನಾದರೂ ಹೇಳಿ ಹೊತ್ತುಗಳೆಯಬೇಕೆಂಬ ಉದ್ದೇಶ ದಿಂದ) ಕೃಷ್ಣರಾವ, ಎಂಥ ಪತ್ರ? ಯಾವ ಸ್ಥಳದಲ್ಲಿತ್ತು? ಈಗ ಎಲ್ಲಿ ಯದೆ?

ಕೃಷ್ಣರಾವ:—ನೀನು ಆ ಪತ್ರವನ್ನು ನನಗೆ ಕಾಣದಂತೆ ಮುಚ್ಚಿಟ್ಟಿ ರುವಾಗ, ಅದು ಇಂಥಲ್ಲಿಯೇ ಅದೆಯೆಂದು ನಾನು ಹೇಗೆ ಹೇಳಲಿ!

ವೇಣು:—(ಯುಕ್ತಿವಾದ ಮಾಡುವ ಉದ್ದೇಶದಿಂದ) ಪತ್ರದ ಮೋ ರೆಯನ್ನೇ ಕಾಣದ ನಾನು ಅದನ್ನು ಮುಚ್ಚಿಡುವದೆಲ್ಲಿ?

ಕೃಷ್ಣರಾವ:—ಸುಳ್ಳು ಮಾತುಗಳನ್ನಾಡಬೇಡ. ನಾನು ಬಂದಕೂ ಡಲೆ ನೊದಲು ಆ ಪತ್ರವನ್ನು ನೋಡಿರುತ್ತೇನೆ. ನಾನು ಬಂದ ಮೇಲೆ ಇಲ್ಲಿ ಯಾರೂ ಬಂದಿಲ್ಲ. ಆ ಪತ್ರವಾದರೂ ಅಚೇತನವಸ್ತು!

ವೇಣು:—ತಮಗೆಲ್ಲಿಯೋ ರಾತ್ರಿಯಲ್ಲಿ ಪತ್ರದ ಸ್ವಪ್ನವು ಬಿದ್ದಂತೆ ಕಾಣುತ್ತದೆ.

ಕೃಷ್ಣರಾವ:-ಛೇ, ಛೇ! ನನಗೆಲ್ಲಿಯ ಸ್ವಪ್ನ! ಸ್ವಲ್ಪ ಶ್ರಮ ತಕ್ಕೊಂ ಡು ಹುಡುಕಿದರೆ, ಸಿಕ್ಕೇ ಸಿಗುತ್ತದೆ.

ವೇಣು:—(ತಾನು ಮುಚ್ಚಿಟ್ಟ ಪತ್ರವು ಸಿಗುವದಿಲ್ಲವೆಂಬ ವಿಶ್ವಾಸ ದಿಂದ) ಕೃಷ್ಣರಾವ, ತಾವು ಆ ಪತ್ರವನ್ನು ನೋಡಿದ್ದಾದರೆ, ಹುಡುಕಿದರಾ ಯಿತು. ಆ ಬಗ್ಗೆ ನನ್ನದೇನೂ ಪ್ರತಿಬಂಧವಿಲ್ಲ.

ಕೃಷ್ಣರಾವ:—ವೇಣೂ, ನಾನು ನೋಡಿದಲ್ಲೆಲ್ಲ ನಿನ್ನ ಸಮ್ಮತಿಯಿ ದ್ದರೆ..............

ವೇಣುವು ಪುನಃ ಪೇಚಾಟದಲ್ಲಿ ಬಿದ್ದಳು. ಕೃಷ್ಣರಾಯನು ಪತ್ರವನ್ನು ಹುಡುಕಿದರೆ, ಅದು ಸಿಕ್ಕೇ ಸಿಗುತ್ತದೆಂದಾಲೋಚಿಸಿ, ಅವಳು ನುಡಿದಳೇನಂ

ದರೆ–ಕೃಷ್ಣರಾವ, ಎರಡನೆಯವರ ಪತ್ರವನ್ನು ತಕ್ಕೊಂಡಾದರೂ ನೀವೇನು ಮಾಡುವಿರಿ? "ಒಬ್ಬರ ಪತ್ರವನ್ನು ಮತ್ತೊಬ್ಬರು ನೋಡಬಾರದೆಂದು ಬಲ್ಲವರು ಹೇಳುತ್ತಾರೆ."

ಕೃಷ್ಣರಾವ:—ವೇಣೂ, ಎರಡನೆಯವರ ಪತ್ರವನ್ನು ನೋಡಲಿಕ್ಕೆ ನಾನೇನು ಮೂರ್ಖನಲ್ಲ! ಆ ಪತ್ರವು ನನ್ನದಂತೆಯೇ ನಾನು ಇಷ್ಟು ಪ್ರಯತ್ನದಿಂದ ಹುಡುಕಲಿಕ್ಕೆ ತೊಡಗಿರುವೆನು.

ವೇಣು:—(ಆಶ್ಚರ್ಯಕಾರಕ ಸ್ವರದಿಂದ) ಕೃಷ್ಣರಾವ, ಆ ಪತ್ರವು ನಿಮ್ಮದೇ ಎಂಬುವದು ಯಾವ ಆಧಾರದ ಮೇಲಿಂದ?

ಕೃಷ್ಣರಾವ:—ಅದರ ಮೇಲೆ "ಕೃಷ್ಣರಾವ" ಎಂಬ ಹೆಸರು ಇದ್ದದ್ದರ ಮೇಲಿಂದ.... ...........

ವೇಣುವು ನಿರುತ್ತರಳಾಗಿ ಕಂಬದಂತ ನಿಂತಳು. ಅವಳ ಉತ್ತರದ ಮಾರ್ಗವನ್ನು ನೋಡದೆ, ಕೃಷ್ಣರಾಯನು:— ವೇಣೂ, ನನ್ನ ಪತ್ರವನ್ನು ನನಗೆ ಕೊಡಲಿಕ್ಕೆ ಇದೆಷ್ಟು ಸಂಕಟ!

ವೇಣು:—ಕೃಷ್ಣರಾವ, ಈಗ ಆ ಪತ್ರದಿಂದ ತಮಗೆ ಯಾವ ಅಡಚಣೆಯಾಗಿದೆ. ಆ ಪತ್ರವು ತಮ್ಮದೇ ಆಗಿದ್ದರೆ, ತಮಗೆ ಸಿಕ್ಕೇ ಸಿಗುತ್ತದೆ. ಸುಮ್ಮನೆ ಆತುರವೇಕೆ?

ಕೃಷ್ಣರಾವ:—(ನಗುತ್ತ) ವೇಣೂ, ಮೊದಲು ನಿನಗೆ ಪತ್ರವನ್ನು ಕೊಡೆಂದು ಕೇಳಲು, "ಎಂಥ ಪತ್ರ? ಎಲ್ಲಿ ಇತ್ತು" ಎಂದು ವಾದಿಸಿದಿ, ಚರ್ಚೆಯನ್ನು ಮಾಡಲು "ಅದು ನಿಮ್ಮ ಪತ್ರವೆಂದು ಯಾವ ಆಧಾರದ ಮೇಲಿಂದ" ಎಂದು ವಿವಾದಿಸಿದಿ; ಮತ್ತಿಷ್ಟು ಚರ್ಚೆಯನ್ನು ಮಾಡಲು, "ಅದು ನಿಮ್ಮದಾದರೆ ನಿಮಗೆ ಸಿಕ್ಕೇಸಿಗುತ್ತದೆಂದು" ಅನ್ನುವಿ. ಈ ಮೂರೂ ಮಾತುಗಳ ಮೇಲಿಂದ ನನಗಂತೂ ಬಹಳೇ ಆಶ್ಚರ್ಯವಾಗುತ್ತದೆ. ಏನೇ ಇರಲಿ, ಸದ್ಯಕ್ಕೆ ಆ ಪತ್ರವನ್ನು ಕೊಡು.

ವೇಣು:—ಕೃಷ್ಣರಾವ, ಈಗ ಆ ಪತ್ರವನ್ನು ಕೊಡುವದು ಅಷ್ಟೇನೂ ಅವಶ್ಯ ತೋರುವದಿಲ್ಲ.

ಪತ್ರವನ್ನು ಕೊಡುವದರ ಸಲುವಾಗಿ ವೇಣುವು ತೋರಿಸುವ ಪ್ರತಿಕೂಲತೆಗಳನ್ನು ನೋಡಿ, ಕೃಷ್ಣರಾಯನಿಗೆ ಮತ್ತಿಷ್ಟು ಆ ಪತ್ರವನ್ನು ನೋ

ಡಬೇಕೆಂಬ ಆಕಾಂಕ್ಷೆಯು ಪ್ರಬಲವಾಯಿತು. ಏನಾದರೂ ಯುಕ್ತಿ ಪ್ರಯುಕ್ತಿ ಮಾಡಿ, ಆ ಪತ್ರವನ್ನು ಎಳಕೊಳ್ಳುವ ಹೊರ್ತು ಹೋಗಬಾರದಾಗಿ ನಿಶ್ಚಯಿಸಿ, ಅವನು ಅಂದದ್ದೇನಂದರೆ,—ವೇಣೂ ಆ ಪತ್ರವನ್ನು ನನ್ನ ಕೈಯಲ್ಲಿ ಕೊಡಬಾರದಾಗಿ ನಿನ್ನ ಸಂಕೇತವಿದ್ದರೆ, ಅದರಲ್ಲಿದ್ದ ಸಂಗತಿಯನ್ನು ಓದಿಯಾದರೂ ಹೇಳು.

ವೇಣುವು ನಿರುತ್ತರಳಾದಳು. ಅವಳು ಕೃಷ್ಣರಾಯನಿಗೇ ಆ ಪತ್ರವನ್ನು ಬರೆದಿದ್ದಳು. ಆದರೆ ಕೃಷ್ಣರಾಯನೇ ಪ್ರತ್ಯಕ್ಷವಾಗಿ ಬಂದದ್ದರಿಂದ, ಅದನ್ನು ಅವನ ಕೈಯಲ್ಲಿ ಕೊಡಲಿಕ್ಕೆ ಅವಳಿಗೆ ಧೈರ್ಯವಾಗಲಿಲ್ಲ. ಪತ್ರದಲ್ಲಿ ಬರೆದ ಸಂಗತಿಯು ಅವಳ ನೆನಪಿನಲ್ಲಿತ್ತು. ಆದರೂ ಅವಳು ಆ ಪತ್ರವನ್ನು ಓದಿ ಹೇಳಲಿಕ್ಕೂ ಸಿದ್ಧಳಾಗಲಿಲ್ಲ. ಒಂದು ವೇಳೆ ಆ ಪತ್ರವನ್ನು ಕೃಷ್ಣರಾಯನ ಕೈಯಲ್ಲಿ ಕೊಟ್ಟರೂ, ಅವನು ಆ ಪತ್ರವನ್ನು ತನ್ನೆದುರಿಗೆ ಓದಬಾರದಾಗಿ ಅವಳ ಮನದಿಚ್ಛೆಯಿತ್ತು. ಪತ್ರವನ್ನು ಬರೆಯುವಾಗ್ಗೆ ಅವಳ ಮನಸ್ಸಿನಲ್ಲಿದ್ದ ವಿಚಾರವು, ಕೃಷ್ಣರಾಯನ ಮುಖ-ದರ್ಶನದಿಂದ ಶಿಥಿಲವಾಗಿರಬಹುದಾದ್ದರಿಂದ, ಅವಳು ಆ ಪತ್ರವನ್ನು ಕೃಷ್ಣರಾಯನ ಕೈಯಲ್ಲಿ ಕೊಡಲಿಕ್ಕೆ ಹಿಂದುಮುಂದು ನೋಡಿರಬಹುದು. ಅಥವಾ ಯಾವದೊಂದು ಮನೋವ್ಯಥೆಯನ್ನು ಹೆಚ್ಚಿಸುವ ಸಂಗತಿಯನ್ನು ಆದಷ್ಟು ತಡವಾಗಿ ಕೃಷ್ಣರಾಯನಿಗೆ ತಿಳಿಸಬೇಕೆಂಬ ಉದ್ದೇಶದಿಂದ ಅವಳು ಆ ಪತ್ರವನ್ನು ಕೊಡಲಿಕ್ಕೆ ಅನುಮಾನಿಸಿರಬಹುದು. ಅಥವಾ ಈಗ ಅವಳ ಮನಸ್ಸಿನಲ್ಲಿ ಆ ಪತ್ರವನ್ನೇ ಹರಿದು ಹಾಕಿ ಬಿಡಬೇಕೆಂಬ ವಿಚಾರವಿತ್ತೋ ಏನೋ? ಏನೇ ಇರಲಿ. ಇತ್ತ ಕೃಷ್ಣರಾಯನಿಗೆ ಪತ್ರವನ್ನು ನೋಡುವ ಉತ್ಸುಕತೆಯು ಪ್ರಬಲವಾಯಿತು. ವೇಣುವು ಪತ್ರವನ್ನು ಕೊಡಲಿಕ್ಕೆ ತಡಮಾಡಿದ ಹಾಗೆಲ್ಲ ಅವನ ಜಿಜ್ಞಾಸೆಯು ಅಧಿಕವಾಯಿತು. ಆ ಪತ್ರದಲ್ಲಿ ಏನು ಇದ್ದೀತು? ಆ ಪತ್ರವನ್ನು ಕೊಡಲಿಕ್ಕೆ ವೇಣುವು ಯಾಕೆ ಹಿಂದು ಮುಂದು ನೋಡುತ್ತಿದ್ದಾಳು? ಪತ್ರದಲ್ಲಿ ಏನು ಬರೆದಿರಬಹುದು? ಅದನ್ನು ಅವಳು ಯಾಕೆ ಓದಿ ಹೇಳುತ್ತಿರಲಿಕ್ಕಿಲ್ಲ? ಎಂಬೀ ಮೊದಲಾದ ಪ್ರಶ್ನಗಳ ಬಗ್ಗೆ ಕೃಷ್ಣರಾಯನ ಹೃದಯದಲ್ಲಿ ವಿಚಾರವು ನಡೆದಿತ್ತು. ಕೃಷ್ಣರಾಯನ ಈ ಸ್ಥಿತಿಯನ್ನು ನೋಡಿ,

ವೇಣು:—ಕೃಷ್ಣರಾವ, ನಿಮಗೇ ಆ ಪತ್ರವನ್ನು ಬರೆದಿದ್ದರೂ,

ನಿಮ್ಮ ಕೈಯಲ್ಲಿ ಆ ಪತ್ರವನ್ನು ಕೊಡಬೇಕೋ ಕೊಡಬಾರದೋ ಎಂಬ ಬಗ್ಗೆ ನನಗೆ ಬಹಳ ದಿಗಿಲು ಬಿದ್ದದೆ.

ಕೃಷ್ಣರಾವ:—ವೇಣೂ, ಆ ಪತ್ರವು ನಿನ್ನನ್ನು ಬಹಳವಾಗಿ ಚಿಂತಾ ಸಾಗರದಲ್ಲಿ ಮುಳುಗಿಸಿದಂತೆ ಕಾಣುತ್ತದೆ. ಪತ್ರದ ವಿಷಯವು ಹೊರಟಂ ದಿನಿಂದ ನಿನ್ನ ಮುಖದ ಮೇಲೆ ಸಂತೋಷದ ಕಳೆಯೇ ಇಲ್ಲ. ಆದ್ದರಿಂದ ಆ ಪತ್ರದಲ್ಲಿ ಏನಾದರೂ ಅಶುಭ ವಾರ್ತೆಯಿರಬಹುದಾಗಿ ನಾನು ಊಹಿಸು ತ್ತೇನೆ.

ವೇಣು:—(ಖಿನ್ನ ಸ್ವರದಿಂದ) ಕೃಷ್ಣರಾವ, ಇನ್ನು ಸ್ವಲ್ಪ ವೇಳೆ ಯಲ್ಲಿ ತಮಗೆ ಆ ಪತ್ರವು ಸಿಕ್ಕೇ ಸಿಗುತ್ತದೆ. ಆದ್ದರಿಂದ ಈ ಸಂಬಂಧ ವಾಗಿ ಹೆಚ್ಚು ವಿವಾದವು ಕಾರಣವಿಲ್ಲ. ಮತ್ತು—

ವೇಣುವಿನ ಮನಸ್ಸಿನಲ್ಲಿ ಇನ್ನೂ ಏನೋ ಮಾತಾಡುವದಿತ್ತು. ಆದ ರೆ ಅವಳಿಗೆ ಮಾತಾಡಲಿಕ್ಕೆ ನಾಲಿಗೆಯೇ ಏಳಲಿಲ್ಲ. ಪತ್ರವನ್ನು ಕೊಡುವದ ರ ಸಲುವಾಗಿ ಅವಳಿಗೆ ನಿಜವಾಗಿ ದೊಡ್ಡ ವಿಚಾರವು ಬಿದ್ದಿತ್ತು. ಯಾವ ನೊಬ್ಬ ಮನುಷ್ಯನ ಸಂಗಡ ಮಾತಾಡಬೇಕಾದಷ್ಟು ಮಾತಾಡಲಿಕ್ಕೆ ಕಠಿಣ ವಾಗುತ್ತದೆ. ಆದರೆ ಅದನ್ನೇ ಪತ್ರಮುಖದಿಂದ ತಿಳಿಸಬೇಕಾದರೆ, ನಿಜವಾದ ಸಂಗತಿಗಿಂತ ನಾಲ್ಕೈದು ಸಾಲು ಹೆಚ್ಚು ಬರೆದರೂ ಸಡೆಯುತ್ತದೆ. ಆ ಪ್ರಕಾರ ಅವಳು ಆ ಪತ್ರದಲ್ಲಿ ಎಲ್ಲ ಬ್ರಹ್ಮಾಂಡವನ್ನೇ ಬರೆದಿದ್ದಳು. ಕೃಷ್ಣ ರಾಯನ ದರ್ಶನವಾದ ಕೂಡಲೆ ತನ್ನ ಮೊದಲಿನ ವಿಚಾರದ ಬಗ್ಗೆ ಅವಳ ಅಂತಃಕರುಣದಲ್ಲಿ ತುಮುಲ ಯುದ್ಧವು ನಡೆದಿತ್ತು. ಅವಳು 'ಮತ್ತು' ಎಂದು ನಿಂತ ಮೇಲೆ ಕೃಷ್ಣರಾಯನು:—ವೇಣೂ, ನೀನು ಆ ಪತ್ರವನ್ನು ಕೊಡಲಿಕ್ಕೆ ಹೊತ್ತು ಮಾಡಿದಂತೆ ನನ್ನ ಮನಸ್ಸು ಹೆಚ್ಚು ಹೆಚ್ಚು ಆತುರ ಪಡುತ್ತದೆ. ನನಗೆ ಈಗ ಆ ಪತ್ರವನ್ನು ಕೊಟ್ಟು ಬಿಡು. ಇಲ್ಲವಾದರೆ ಆ ಪತ್ರದ ಸಂಗತಿಯನ್ನು ಓದಿ ಹೇಳು, ಎಂದನು.

ವೇಣುವು ನಿರುಪಾಯುಳಾದಳು. ಅವಳು ಗಾದಿಯ ಬುಡದಲ್ಲಿ ಇಟ್ಟ ಪತ್ರವನ್ನು ಕಡೆಗೆ ತೆಗೆದು, ಕೈಯಲ್ಲಿ ಹಿಡಿದುಕೊಂಡಳು. ಅವಳು ಆ ಪತ್ರ ವನ್ನು ಕೃಷ್ಣರಾಯನಿಗೆ ಕೊಡಬೇಕೆಂದು ಕಡೆಗೆ ತೆಗೆದರೂ, ಅವಳಿಗೆ ಅದ ನ್ನು ಅವನಿಗೆ ಕೊಡುವ ಧೈರ್ಯವಾಗಲಿಲ್ಲ. ಅವಳು ಆ ಪತ್ರವನ್ನು ಕೈಯ

ಲ್ಲಿ ಹಿಡಿದುಕೊಂಡು ಏನೋ ವಿಚಾರಿಸುತ್ತ ಸುಮ್ಮನೆ ನಿಂತಳು. ಆದರೆ ಅದು ಕೃಷ್ಣರಾಯನಿಗೆ ಸಹನವಾಗಲಿಲ್ಲ.

ಕೃಷ್ಣ:—ವೇಣೂ, ಪತ್ರವನ್ನಾದರೂ ಕೊಡು, ಇಲ್ಲವಾದರೆ ಓದಿ ಯಾದರೂ ಹೇಳು.

ವೇಣು:—(ಅನನ್ಯೋಪಾಯಳಾಗಿ) ಕೃಷ್ಣರಾವ, ಪತ್ರವನ್ನೇನೋ ತಮ್ಮ ಕೈಯಲ್ಲಿ ಕೊಡುತ್ತೇನೆ. ಆದರೆ ನನ್ನೆದುರಿಗೆ ಮಾತ್ರ ಅದನ್ನು ಓದ ಬೇಡಿರಿ.

ಹೀಗನ್ನುತ್ತ ವೇಣುವು ಕಂಪಿತಹಸ್ತದಿಂದ ಕೃಷ್ಣರಾಯನ ಕೈಯಲ್ಲಿ ಆ ಪತ್ರವನ್ನು ಕೊಟ್ಟಳು. ಪತ್ರವು ಕೈಗೆ ಬೀಳುವದೊಂದೇ ತಡವು, ಕೃಷ್ಣ ರಾಯನ ಆನಂದಕ್ಕೆ ಮೇರೆಯಿಲ್ಲದಾಯಿತು. ಪತ್ರವನ್ನು ಬೊಕ್ಕಣದಲ್ಲಿ ಹಾಕುತ್ತ ಹಾಕುತ್ತ ಅವನು ನುಡಿದನೇನಂದರೆ,—ವೇಣೂ, ಏನಗೆ ಮನೆಗೆ ಹೋಗಲು ಅನುಜ್ಞೆಯನ್ನು ಕೊಡು. ಯಾಕಂದರೆ, ಯಾವಾಗ್ಗೆ ಪತ್ರವನ್ನು ಓದಿ ನೋಡೇನೆಂದು ನನಗೆ ಆತುರವಾಗಿದೆ.

ವೇಣುವು ಮಾತಾಡಲಿಲ್ಲ. ಅವಳು ಕಂಠಸಂಜ್ಞೆಯಿಂದ ಕೃಷ್ಣರಾ ಯನಿಗೆ ಮನೆಗೆ ಹೋಗಲಿಕ್ಕೆ ಸಮ್ಮತಿಯನ್ನು ಕೊಟ್ಟಳು. ಮತ್ತು ಕೃಷ್ಣ ರಾಯನು ಹೋಗುವಾಗ ಅವಳು:—ಕೃಷ್ಣರಾವ, ನಾನು ಆ ಪತ್ರವನ್ನು ಬರೆಯುವಾಗ್ಗೆ ನನ್ನ ಮನಸ್ಸು ಕಲ್ಲಿನಂತೆ ಇತ್ತು, ಎಂದಂದಳು.

ಕೃಷ್ಣರಾಯನು ಹೋಗುತ್ತ-ಹೋಗುತ್ತ ವೇಣುವಿನ ಕಡೆಗೆ ನೋಡಿ ಕಲ್ಲಿಗಿಂತಲೂ ಕಠಿಣವಾಗಿರುವ ನಿನ್ನ ಮನಸ್ಸನ್ನು ಬೆಣ್ಣೆಗಿಂತಲೂ ಮೆತ್ತಗೆ ಮಾಡುವ ಸಾಮರ್ಥ್ಯವು ನನ್ನಲ್ಲಿರುತ್ತದೆ. ಹೀಗನ್ನುತ್ತ ಉತ್ತರದಿಂಥ ನಡೆ ದು ಹೋದನು. ವೇಣುವು ಕಣ್ಣಿಗೆ ಕಾಣಿಸುವ ತನಕ ಕೃಷ್ಣರಾಯನನ್ನು ನೋಡಿದಳು. ಕೃಷ್ಣರಾಯನು ಕಾಣಧ ಹಾಗಾದ ಕೂಡಲೆ, ಕಣ್ಣೀರು ಸುರಿಸುತ್ತ ತನ್ನಷ್ಟಕ್ಕೆ ತಾನೇ:—ಕೃಷ್ಣರಾಯನು ಅಂದಂತೆ ಕಲ್ಲಿಗಿಂತಲೂ ಕಠೋರವಾದ ನನ್ನ ಮನಸ್ಸು ನಿಶ್ಚಯವಾಗಿ ಬೆಣ್ಣೆಗಿಂತಲೂ ಮೃದುವಾಗ ಹತ್ತಿತು, ಎಂದಂದಳು.



## ೨ನೆಯ ಪ್ರಕರಣ—ಪತ್ರ.

ಕೃಷ್ಣರಾಯನ ಮನೆಯು ವೇಣುವಿನ ಮನೆಯಿಂದ ಎಷ್ಟೋ ದೂರ ವಿತ್ತು. ಕೃಷ್ಣರಾಯನಿಗೆ ಪತ್ರವನ್ನು ಓದಿ ನೋಡುವ ಆಕಾಂಕ್ಷೆಯು ಅಧಿಕವಾದ್ದರಿಂದ, ಅವನು ತನ್ನ ಮನೆಯ ಕಡೆಗೆ ತ್ವರೆಯಿಂದ ಹೋಗುತ್ತಿದ್ದನು. ಅವನು ಯಾವಾಗ್ಗೆ ಪತ್ರವನ್ನು ಓದಿ ನೋಡೆನು, ಎಂಬಾತುರವುಳ್ಳವನಾಗಿದ್ದನು. ಸೂರ್ಯನು ಪಶ್ಚಿಮಾಂಬುಧಿಯಲ್ಲಿ ಮುಳುಗಿ ಬಹಳ ಹೊತ್ತಾದ್ದರಿಂದ, ಎಲ್ಲ ಕಡೆಗೂ ಕತ್ತಲೆಯು ಹಬ್ಬಿತ್ತು. ಆದರೂ ಆ ಕಡೆಗೆ ಕೃಷ್ಣರಾಯನ ಲಕ್ಷವಿದ್ದಿಲ್ಲ. ರಾತ್ರಿ ಎಷ್ಟಾಗಿದೆ, ಕತ್ತಲೆ ಎಷ್ಟು ಬಿದ್ದದೆ, ತಾನು ಎಷ್ಟು ದೂರ ನಡೆದು ಹೋಗಬೇಕಾಗಿದೆ, ಎಂಬ ಆಲೋಚನೆಯು ಕೃಷ್ಣರಾಯನ ಮನಸ್ಸಿನಲ್ಲಿ ಹುಟ್ಟಲೇ ಇಲ್ಲ. ಅದರಲ್ಲಿ ಆ ಅವಂತೀಪುರದಲ್ಲಿ ಅಲ್ಲಿಗೊಂದಿಲ್ಲಿಗೊಂದು ಮನೆಗಳಿದ್ದದರಿಂದ, ಜನರ ಉಲುವಿಗೂ ಇಂಬಿದ್ದಿಲ್ಲ. ಗಿಡಗಳ ದಟ್ಟವಾದ ನೆರಳು ಬಿದ್ದದರಿಂದ, ಮಾರ್ಗದಲ್ಲಿ ಏನೂ ಕಾಣುವಂತಿದ್ದಿಲ್ಲ. ಒಂದು ಕಡೆಗೆ ಉಬ್ಬು, ಮತ್ತೊಂದು ಕಡೆಗೆ ತಗ್ಗುಳ್ಳ ಬೀದಿಗಳಾದರೂ ಸಣ್ಣ ಸಣ್ಣ ಚೂಪುಗಲ್ಲುಗಳಿಗೂ, ಮುಳ್ಳುಗಳಿಗೂ ತವರ ಮನೆಯಾಗಿದ್ದವು. ಮಾರ್ಗದಲ್ಲಿ ಹೋಗುವಾಗ್ಗೆ ಕಾಲೊಳಗೆ ಬೇಕಾದಷ್ಟು ಮುಳ್ಳುಗಳು ನೆಟ್ಟರೂ, ತಗ್ಗು-ಉಬ್ಬಿನಲ್ಲಿ ಹೊತ್ತುಕೊಂಡು ಬಿದ್ದರೂ, ಕೃಷ್ಣರಾಯನು 'ಹಾಯ್' ಕೂಡ ಅನ್ನದೆ, ತನ್ನ ಮನೆಯ ಕಡೆಗೆ ಹೋಗುತ್ತಿದ್ದನು. ಹಾದಿಯಲ್ಲಿ ಹೋಗುವಾಗ್ಗೆ ಕ್ಷಣಕ್ಷಣಕ್ಕೆ ಬೊಕ್ಕಣದಲ್ಲಿ ಪತ್ರವದೆಯೋ ಇಲ್ಲೋ, ಎಂದು ನೋಡುತ್ತಿದ್ದನು. ಆಗ ಅವನ ಮನಸ್ಸಿನಲ್ಲಿ ಪತ್ರದ ಹೊರ್ತು ಎರಡನೇ ಆಲೋಚನೆಯಿದ್ದಿಲ್ಲ. ಅವನ ಯಾವತ್ತೂ ವಿಚಾರಶಕ್ತಿಯು ಪತ್ರದ ಸಲುವಾಗಿ ವಿಚಾರ ಮಾಡುತ್ತಿತ್ತು. ಯಾವ ಪತ್ರವನ್ನು ಕೊಡಲಿಕ್ಕೆ ವೇಣುವು ಹಿಂದುಮುಂದು ನೋಡಿದಳೋ, ಯಾವ ಪತ್ರದಲ್ಲಿಯ ಸಂಗತಿಯನ್ನು ಓದಿ ಹೇಳಲಿಕ್ಕೆ ಅವಳ ಧೈರ್ಯವಾಗಲಿಲ್ಲವೋ, ಯಾವ ಪತ್ರವು ಬಹಳ ಪ್ರಯಾಸದಿಂದ ಕೈಗೆ ಸಿಕ್ಕಿತೋ ಆ ಪತ್ರದಲ್ಲಿ ನಿಜವಾಗಿ ಏನಾದರೂ ವಿಲಕ್ಷಣ ಸಂಗತಿಯಿರಬಹುದೆಂದು ತರ್ಕಿಸಿ, ಕೃಷ್ಣರಾಯನು ತ್ವರೆಯಿಂದ ಮನೆಯ ಕಡೆಗೆ ಹೋಗುತ್ತಿದ್ದನು. ಅವಂತೀಪುರವು

ಒಂದು ವೇಳೆ ದೊಡ್ಡ ಪಟ್ಟಣವಾಗಿದ್ದರೆ, ಕೃಷ್ಣರಾಯನು ಆ ಪತ್ರವನ್ನು ಕಂದೀಲಿನ ಬೆಳಕಿಗೆ ಹಿಡಿದು ಓದುತ್ತಿದ್ದನು, ಅಥವಾ ಅವನಿಗೆ ಬೀಡಿಯನ್ನು ಸೇದುವ ಚಟವಿದ್ದರೆ, ತಟ್ಟನೆ ಕಡ್ಡಿಗಳನ್ನು ಕೆರೆದು-ಕೆರೆದು ಅದರ ಬೆಳಕಿನಲ್ಲಿಯಾದರೂ ಆ ಪತ್ರವನ್ನು ಓದುತ್ತಿದ್ದನು, ಅಥವಾ ಕಾರಣವಿಲ್ಲದೆ ಯಾರ ಮನೆಗಾದರೂ ಹೋಗುವ ಅವನ ನಡಾವಳಿಯಿದ್ದರೆ, ಅವನು ಬೇಗನೆ ಯಾರ ಮನೆಯನ್ನಾದರೂ ಹೊಕ್ಕು ಆ ಪತ್ರವನ್ನು ಓದುತ್ತಿದ್ದನು. ಆದರೆ ಎಲ್ಲ ಸಂಗತಿಗಳಿಗೂ ವಿರೋಧ-ಮನಸ್ಕನಾದ್ದರಿಂದ, ತನ್ನ ಮನೆಗೆ ಹೋದ ಹೊರತು ಎರಡನೇ ಕಡೆಗೆ ಎಲ್ಲಿಯೂ ಅವನ ಅಭೀಷ್ಟವು ಈಡೇರುವಂತಿದ್ದಿಲ್ಲ. ಬೇಗನೆ ನಡೆಯುತ್ತ ಹೋಗಿ ಅವನು ತನ್ನ ಮನೆಯನ್ನು ಮುಟ್ಟಿದನು. ಮನೆಯನ್ನು ಮುಟ್ಟಿದ ಕೂಡಲೆ ಮೊದಲು ಅವನು ತನ್ನ ವಿಶ್ರಾಂತಿಯ ಕೋಣೆಯನ್ನು ಹೊಕ್ಕನು. ಕೋಣೆಯಲ್ಲಿ ಇನ್ನೂ ಕತ್ತಲಿತ್ತು. ಆದ್ದರಿಂದ ಕೃಷ್ಣರಾಯನು ತನ್ನ ಸೇವಕನನ್ನು ಕರೆದು, ಅವನಿಗೆ ದೀವಿಗೆಯನ್ನು ಹಚ್ಚಲಿಕ್ಕೆ ಹೇಳಿದನು. ಕೂಡಲೆ ಸೇವಕನು ದೀವಿಗೆಯನ್ನು ಹಚ್ಚಿ, ಕೋಣೆಯಲ್ಲಿಯ ಹೊಲಸು ತೆಗೆದು ಹೋದನು. ನಂತರ ಕೃಷ್ಣರಾಯನು ತನ್ನ ಪಂಚಪ್ರಾಣವಾದ ಪತ್ರವನ್ನು ಜೋಕ್ಕಣದಿಂದ ಹೊರಗೆ ತೆಗೆದು, ಅದನ್ನು ಹತ್ತರಸಲ್ಲಿದ್ದ ಮೇಜಿನ ಮೇಲಿಟ್ಟು, ತಾನು ಆರಾಮ ಖುರ್ಚಿಯ ಮೇಲೆ ಕುಳಿತು ಕೆಲಹೊತ್ತು ಏನೋ ವಿಚಾರ ಮಾಡಿದನು. ನಂತರ ಆ ಪತ್ರದ ಬಾಯನ್ನು ಒಡೆದು ಓದಬೇಕೆಂದು ಅದನ್ನು ಕೈಯಲ್ಲಿ ತಕ್ಕೊಂಡನು. ಪತ್ರವನ್ನು ಒಡೆಯಲಿಕ್ಕೆ ಆರಂಭಿಸಿದ ಕೂಡಲೆ ಅವನ ಕೈಗಳು ಥರಥರ ನಡುಗ ಹತ್ತಿದವು. ಅವನ ಮನಸ್ಸು ಪುನಃ ವಿಪರೀತವಾಯಿತು. ಪತ್ರದಲ್ಲಿ ಅಶುಭಕಾರಕ ಸಂಗತಿಯಿದ್ದರೆ, ಮನಸ್ಸಿಗೆ ಹಳಹಳಿಯಾಗುತ್ತದೆ, ಮತ್ತು ರಾತ್ರಿಯಲ್ಲಿ ನಿದ್ರೆಯೂ ಬರಲಿಕ್ಕಿಲ್ಲ ಕಾರಣ ಈಗ ಪತ್ರವನ್ನು ಓದಬಾರದು, ಪ್ರಾತಃಕಾಲಕ್ಕೆ ಓದಬೇಕು ಎಂದು ಕೃಷ್ಣರಾಯನು ಆಲೋಚಿಸಹತ್ತಿದನು। ಆದರೆ ಆ ಆಲೋಚನೆಯೂ ಸ್ಥಿರವಾಗಿ ಉಳಿಯಲಿಲ್ಲ. ಪತ್ರದಲ್ಲಿ ಏನೇ ಇರಲಿ, ಅದನ್ನು ಓದಿಯೇ ತೀರಬೇಕೆಂದಾಲೋಚಿಸಿ, ಪತ್ರದ ಆವರಣವನ್ನು ತೆಗೆದು ಓದಲಿಕ್ಕೆ ಆರಂಭಿಸಿದನು.

"ಶ್ರೀಯುತ ರಾ. ರಾ. ಕೃಷ್ಣರಾವ ಇವರಿಗೆ—

"ಈ ಪತ್ರದಲ್ಲಿ ನಿಮಗೆ ಸರಿಯಾಗಿ ಬರೆಯಲಿಕ್ಕೆ ನನಗೆ ತಿಳಿಯಲಾಸ್ಪದವಿಲ್ಲ. ಹೃದ್ಗತವನ್ನು ತಿಳಿಸಬೇಕೆಂದು ಪತ್ರವನ್ನೇನೋ ಬರೆಯಲಿಕ್ಕೆ ಕುಳಿತೆನು. ಆದರೆ ನನ್ನ ಲೆಕ್ಕಣಿಕೆಯೇ ಮುಂದೆ ಸಾಗಲಿಲ್ಲ. ಆದರೂ ಅಷ್ಟಕ್ಕೇ ಬಿಡದೆ, ಹಾಗೂ ಹೀಗೂ ಬರೆದು ನನ್ನ ಮನೋವ್ಯಥೆಯನ್ನು ನಿಮಗೆ ನಿವೇದನ ಮಾಡಿಕೊಂಡಿರುತ್ತೇನೆ.

"ನಿಮ್ಮ ಸಹವಾಸದಲ್ಲಿ ಈ ದೀನಳ ಆಯುಷ್ಯವು ಹರಣವಾಗುವಂತೆ ಕಾಣುವದಿಲ್ಲ. ಈ ಎರಡು ಹೂವುಗಳನ್ನು ಏಕತ್ರ ಮಾಡಿ, ಇವುಗಳ ಶೋಭೆಯನ್ನು ಹೆಚ್ಚಿಸಬೇಕೆಂದು ಜಗದೀಶ್ವರನ ಇಚ್ಛೆಯಿದ್ದಂತೆ ಕಾಣುವದಿಲ್ಲ. ನಿಮ್ಮ ಸಂಗಡ ನನ್ನ ಲಗ್ನವಾಗುವ ಭಾಗವೂ, ಉಭಯತರಿಗೆ ವೈವಾಹಿಕ ಸುಖ ಪ್ರಾಪ್ತಿಯಾಗುವ ಭಾಗವೂ ಈಗ ಉಳಿದಿರುವದಿಲ್ಲ. ಈ ಎಲ್ಲ ದುಃಸ್ಥಿತಿಗೆ ದುಷ್ಟ ಸಮಾಜವೇ ಕಾರಣವಾಗಿದೆ. ನಮ್ಮ ಸಮಾಜದ ಪ್ರಮುಖ ಜನರಲ್ಲಿ ಎಷ್ಟೋ ಜನರು ದುಷ್ಟರಿದ್ದಾರೆ! ಅವರ ಪ್ರಯತ್ನವು ಅಪರಿಮಿತವಾದದ್ದು!! ಅವರ ನ್ಯಾಯವು ಬಹು ಚಮತ್ಕಾರವಾದದ್ದು!!! ಅವರ ದುಷ್ಟತನವು ಅತ್ಯಂತ ಕಠೋರತರವಾದದ್ದು!!!! ಈ ದುಷ್ಟ ಜನರ ವಿರುದ್ಧ ಹೋಗಿ ನೀವು ನನ್ನನ್ನು ಲಗ್ನವಾದರೆ, ಅಥವಾ ಲಗ್ನವಾಗುವ ಬಗ್ಗೆ ಪ್ರಯತ್ನವನ್ನು ನಡಿಸಿದರೆ ನೀವೇ ನಿಮ್ಮ ಮೈಮೇಲೆ ಕಾದ ಎಣ್ಣೆಯನ್ನು ಸುರುವಿಕೊಂಡಂತಾಗುತ್ತದೆ. ಮತ್ತು ನೀವು ಜಾತಿಬಾಹಿರರಾಗುವ ಪ್ರಸಂಗವು ಬರುತ್ತದೆ. ನಿಮ್ಮನ್ನು ಸಮಾಜವೆಲ್ಲ ವಕ್ರದೃಷ್ಟಿಯಿಂದ ನೋಡಹತ್ತುತ್ತದೆ. ವಿವಾಹದ ಪರಿಣಾಮವು ಮಹದನಿಷ್ಟಕಾರಕವಾಗುತ್ತದೆಂದು ನಾನು ನಿಸ್ಸಂದೇಹವಾಗಿ ಹೇಳುತ್ತೇನೆ. ವಿವಾಹದಿಂದ ನಮ್ಮಿರ್ವರಿಗೆ ತೊಂದರೆಯಾಗುವದಲ್ಲದೆ, ನಮ್ಮ ಸಂತತಿಗೂ ತೊಂದರೆಯಾಗುತ್ತದೆ. ಈ ಸಮಾಜದಿಂದಾಗುವ ತೊಂದರೆಯನ್ನು ಸಹಿಸುವಂಥ, ತಿರುಗಿ ಸಮಾಜಕ್ಕೆ ತೊಂದರೆಯನ್ನುಂಟು ಮಾಡುವಂಥ ಶಕ್ತಿಯು ನಮ್ಮಿರ್ವರಲ್ಲಿದ್ದರೂ, ನಮ್ಮ ಸಂತತಿಗೆಲ್ಲಿಯದು? ಈಗಿನ, ಮುಂದಿನ ವಿಚಾರವನ್ನು ಮಾಡಿಯೇ ನಾನು ಪತ್ರ ಬರೆದಿರುವೆನು. ನಮಗೂ, ನಮ್ಮ ಮಕ್ಕಳು-ಮರಿಗೂ ದುಃಖವನ್ನುಂಟು ಮಾಡುವಂಥ ವಿವಾಹವನ್ನೇ ದೂರೀಕರಿಸುವದು ಉತ್ತಮವಾದದ್ದು.

"ನನ್ನ ಮೇಲೆ ತೋರಿಸುವ ತಮ್ಮ ಸ್ನೇಹ-ಪ್ರೀತ್ಯಭಿಮಾನಗಳು ನನ್ನ ಅಂತಃಕರಣದಲ್ಲಿ ಪೂರ್ಣವಾಗಿ ಬಿಂಬಿಸಿರುತ್ತವೆ. ತಮ್ಮ ಸರಳ ಸ್ವಭಾವದ ಬಗ್ಗೆ ನನಗೆ ಪೂರ್ಣವಾಗಿ ಪರಿಚಯವದೆ. ಜಗತ್ತಿನಲ್ಲಿ ತಮ್ಮ ಹೊರ್ತು ನನಗೆ ಪೂಜ್ಯವಾದ ವಸ್ತುವು ಮತ್ತೊಂದಿಲ್ಲ. ನಿಮ್ಮ ಅಗಾಧ ಸ್ನೇಹವನ್ನೂ, ಪ್ರಸಕ್ತ ಪ್ರೀತಿಯನ್ನೂ, ಸಮಾನ-ವೃಷ್ಟಿಯನ್ನೂ ನಾನು ಎಂದೂ ಮರೆಯುವಂತಿಲ್ಲ. ಉಭಯತರ ಅಕೃತ್ರಿಮ ಸ್ನೇಹದ ಸಂಬಂಧ ವಾಗಿ ಇಲ್ಲಿಯ ವರೆಗೆ ಸಂಶಯವು ಬರುವಂತಿದ್ದಿಲ್ಲ. ಆದರೆ ಮುಂದೆ ಹೇಗೋ ಏನೋ, ಯಾರಿಗೆ ಗೊತ್ತು!

"ಈರ್ವರೂ ಹುಡುಗರಿರುವಾಗ್ಗೆ ಒಂದೇ ಸ್ಥಳದಲ್ಲಿದ್ದೆವು, ಒಂದೇ ಸ್ಥಳದಲ್ಲಿ ಆಡಿದೆವು, ಒಂದೇ ಸ್ಥಳದಲ್ಲಿ ವಿದ್ಯಾಭ್ಯಾಸವನ್ನು ಮಾಡಿದೆವು, ಅಂತೂ ಇಂತೂ ಆಕಾಲವು ಒಳ್ಳೆ ಉಲ್ಲಾಸಕಾರಕವಾಗಿತ್ತು. ಅಂಥ ಸುಖ ಕಾಲವು ಇನ್ನೆಂದೂ ಪ್ರಾಪ್ತವಾಗುವಂತಿಲ್ಲ. ಆಕಾಲದಲ್ಲಿ ನಡೆದ ಸಂಗತಿ ಗಳೆಲ್ಲ ಮರೆತು ಹೋಗಿರುತ್ತವೆ. ನಿಮಗೂ ಆ ಸಂಗತಿಗಳು ಮರೆತಿದ್ದರೆ, ನೆಟ್ಟಗಾಗುತ್ತದೆ. ವೇಣುವು ಯಾವಳೋ ಎಂದು ಭಾವಿಸಿದರೆ, ನನ್ನಮೇಲೆ ಅನುಗ್ರಹಮಾಡಿದಂತಾಗುತ್ತದೆ. ನೀವು ಪೂರ್ವದಲ್ಲಿ ಇದ್ದ ಹಾಗೆ ಈಗಲೂ ಇರುವಿರಿ; ಆದರೆ ವೇಣುವು ಹಾಗಿರುವದಿಲ್ಲ. ನನಗೆ ಈ ಜಗತ್ತಿನ ಬಗ್ಗೆ ತಿರಸ್ಕಾರವು ಹುಟ್ಟಿದೆ. ನಾನು ಯಾವತ್ತು ಸಮಾಜದ ಬಗ್ಗೆ ತುಂಬಾ ಉದಾಸೀನಳಾಗಿದ್ದೇನೆ. ಆದರೂ ನನಗೆ ಪ್ರಿಯವಾದ ವಸ್ತುವೆಂದರೆ ಕೃಷ್ಣ ರಾಯರೇ ಒಬ್ಬರು. ಆ ಸ್ವರ್ಗವಾಸಿಯಾದ ಅಪ್ಸರಾ-ಸ್ತ್ರೀಯು ಕೂಡ ಮೃ ತ್ಯುಲೋಕಕ್ಕೆ ಹೋಗಿ, ಸುಸ್ವರೂಪ-ಸುಶಿಕ್ಷಿತ-ಸುಗುಣಾಭರಣರಾದ ಕೃಷ್ಣ ರಾಯರನ್ನು ವರಿಸಿ, ಸುಖಬಡಬೇಕೆಂದು ಇಚ್ಛಿಸಬಹುದು; ಆದರೆ ನನಗೆ ಮಾತ್ರ ತಮ್ಮ ವಿಷಯಕ್ಕೆ ಪೂರ್ಣವಾಗಿ ಅನಾದರವು ಉತ್ಪನ್ನವಾಗಿದೆ. ಇದಕ್ಕೆ ಸಮಾಜದಿಂದ ತಮಗೆ ತೊಂದರೆಯಾಗಬಾರದೆಂಬುವದೇ ಮೂಲ ಕಾರಣವು. ನಾನು ನನ್ನ ವಿಚಾರವನ್ನು ಸ್ಥಿರಗೊಳಿಸಿರುತ್ತೇನೆ. ನೀವೂ ನನ್ನಂತೆ ನಿಮ್ಮ ಮನಸ್ಸನ್ನು ಸ್ಥಿರಗೊಳಿಸಿರಿ.

"ನಾನೇನೋ ಮನಸ್ಸನ್ನು ಸ್ಥಿರಗೊಳಿಸಿರೆಂದು ಹೇಳುತ್ತೇನೆ; ಆದರೆ ಮನಸ್ಸನ್ನು ಸ್ಥಿರಗೊಳಿಸುವದು ಕಠಿಣವಾಗಿದೆ. ಮನೋನಿಗ್ರಹ ಮಾಡು

ವದು ಬಹಳ ಕಠಿಣವೆಂದು ಹಿರಿಯರು ಹೇಳುವದು ಸುಳ್ಳಲ್ಲ. ಮನಸ್ಸು ಬಹಳ ಚಮತ್ಕಾರವಾದದ್ದದೆ. ಮನಸ್ಸಿನ ಗತಿಗೆ ವಿದ್ಯುಲ್ಲತೆಯ ಗತಿಯು ಸರಿಬಾರದು. ಇದು ಯಾವಾಗ್ಗೆ ಯಾವ ಕಡೆಗೆ ಹಾರಿಹೋದಿತೆಂಬುವದರ ನಿಯಮವೇ ಇಲ್ಲ. ಮನಸ್ಸಿನ ಗತಿಯು ಮರ್ಯಾದಿತವಾಗಿಲ್ಲ. ಮನಸ್ಸಿನ ಮಾರ್ಗವೆಷ್ಟ್ಯದೆಯೆಂಬುವದನ್ನು ಇಲ್ಲಿಯ ವರೆಗೆ ಯಾರೂ ಅಳೆದಿಲ್ಲ. ಹೀಗಿರಲು ಆ ವಿಷಯವಾಗಿ ನನ್ನಂಥ ಅಲ್ಪಜ್ಞಳಿಗೆ ಬರೆಯಲು ಸಾಮರ್ಥ್ಯವೆಲ್ಲಿ? ತಮ್ಮ ಬುದ್ಧಿಸಾಮರ್ಥ್ಯದ ಬಗ್ಗೆ ನನಗೆ ತುಂಬಾ ಮನವರಿಕೆಯದೆ. ನಾನು ಪತ್ರದಲ್ಲಿ ಬರೆದಿರುವ ಇಂಗಿತವನ್ನು ತಿಳಿದು, ನನ್ನ ವಿನಯ-ವಿನಂತಿಯನ್ನು ಪಾಲಿಸಬೇಕೆಂದು ನಾನು ಬಿದ್ದು ಬೇಡುವೆನು. 'ನಾನು ನಿನ್ನ ಸಲುವಾಗಿ ಬೇಕಾದಷ್ಟು ಕಷ್ಟವನ್ನು ಸೋಸೇನು' ಎಂದು ನೀವು ಮೊದಲು ಅನುತ್ತಿದ್ದಿರಿ. ಆಗ ನೀವು ಹಾಗೆ ತ್ರಿಕರಣಶುದ್ಧಿಯಾಗಿ ಅಂದಿದ್ದರೆ, ಈಗ ನೀವು ಬಂದಂಥ ಮಾನಸಿಕ ಕಷ್ಟವನ್ನು ನಿಜವಾಗಿ ಸೋಸೀರಿ. ಈ ನಿಮ್ಮ ಉಪಕಾರಕ್ಕೆ ನಾನು ತಮ್ಮ ಆಜನ್ಮ ಋಣಿಯಾಗುವೆನು. ನಿಮ್ಮಂಥ ಸುಜ್ಞ-ಮನುಷ್ಯರಿಗೆ ಇದೆಷ್ಟೂ ಅಸಾಧ್ಯವಲ್ಲ. ನಾನು ತಿಳಿಸುವ ಸಂಗತಿಯ ಸಲುವಾಗಿ ತಮ್ಮ ಸಮ್ಮತಿಯು ದೊರೆತರೆ ಸಾಕು, ನಾನು ಧನ್ಯಳಾಗುವೆನು.

"ನಿಮಗೆ ದುಷ್ಟಸಮಾಜದ ಪರಿಚಯವನ್ನು ಮಾಡಿಕೊಡುವ ಕಾರಣವಿಲ್ಲ. ನಮ್ಮ ಮೇಲೆ ಬಂದ ಸಂಕಟ-ಪ್ರಸಂಗಗಳ ಬಗ್ಗೆ ನಿಮಗೂ ಪರೀಕ್ಷೆಯವಿರಬಹುದು. ಈ ಕಪಟ-ನಾಟಕಕ್ಕೆ ಇಲ್ಲಿಯ ಜಹಾಗೀರದಾರ ವಿಶ್ವನಾಥರಾಯನೇ ಸೂತ್ರಧಾರನು. ಇವನು ನಮ್ಮನ್ನು ಜಾತಿಬಾಹಿರರನ್ನಾಗಿ ಮಾಡಿರುತ್ತಾನೆ; ಈಮುಂದೆ ನಮ್ಮ ಸಂಗಡ ಬ್ರಾಹ್ಮಣರ ಬಳಿಕೆಯಾಗಬಾರದೆಂದು ನಿರ್ಣಯಿಸಿರುತ್ತಾನೆ; ನಮ್ಮ ಮನೆಯ ಅನ್ನ-ನೀರುಗಳನ್ನು ಯಾರೂ ಸೇವಿಸಬಾರದೆಂದು ಡಂಗುರಹೊಡಿಸಿರುತ್ತಾನೆ; ನಮ್ಮ ಮೇಲೆ ಅನೇಕ ದುರ್ಘಟ-ಸಂಕಟಗಳನ್ನು ತಂದುಹಾಕಲಿಕ್ಕೆ ಹವಣಿಸುತ್ತಿದ್ದಾನೆ; ನನ್ನ ತಾಯಿ-ತಂದೆಗಳು ಒಂದೇ ಜಾತಿಯವರಲ್ಲೆಂದು ಹೇಳಲಿಕ್ಕೆ ಸಾಕ್ಷಿ-ಪುರಾವೆಗಳನ್ನು ಸಿದ್ಧಮಾಡಹತ್ತಿದ್ದಾನೆ; ನಾನು ಮುಂಬಯಿಯಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವಾಗ್ಗೆ ಕುಲಗೆಟ್ಟಿದ್ದೇನೆಂದು ಒದರುತ್ತಾನೆ; ನಮಗೆ ಗ್ರಾಮದ ಭಾವಿಗಳಿಂದ ನೀರನ್ನು ತರಲಿಕ್ಕೆ ಕಟ್ಟುಮಾಡಿರುತ್ತಾನೆ. ವಿಶ್ವನಾಥರಾಯನು

ತನ್ನ ಮೈದುನ ಮಾಧವರಾಯನಿಗೆ ನನ್ನನ್ನು ವಿವಾಹಮಾಡಬೇಕೆಂದಾಲೋಚಿಸಿ, ಅದಕ್ಕೆ ನನ್ನ ತಾಯಿ-ತಂದೆಗಳು ಸಮ್ಮತಿಯಾಗದ್ದರಿಂದ ಇಂಥ ಸಂಕಟಗಳನ್ನುಂಟು ಮಾಡಿರುತ್ತಾನೆ. ವಿಶ್ವನಾಥರಾಯನ ಮೇಲಿನ ರಾಕ್ಷಸೀ ಕೃತಿಯನ್ನು ನೋಡಿ, ತಮಗೆ ಸಂತಾಪವಾಗಬಹುದು. ಸಂತಾಪದಭರದಲ್ಲಿ ನೀವು ಆತನೊಂದಿಗೆ ಸೊಟ್ಟ ಮೋರೆಯನ್ನು ಮಾಡಿಕೊಳ್ಳಬೇಡಿರಿ. ಅವನ ಸ್ವಭಾವ, ಅವನ ನಡಾವಳಿ, ಅವನ ಚರಿತ್ರೆ ಮೊದಲಾದ ಸಂಗತಿಗಳು ನೀವು ಅರಿಯದವುಗಳಲ್ಲ. ಅವನು ಯಾವಕಾಲಕ್ಕೆ ಏನು ಮಾಡಬಹುದೆಂಬುವದಕ್ಕೆ ನಿಯಮವೇ ಇಲ್ಲ. ಮುಖ್ಯವಾಗಿ ಅವನು ವಿಷಾರೀ ಸರ್ಪದಂತಿದ್ದಾನೆ.

"ನಾನು ಈ ಜಗತ್ತನ್ನು ತೃಣೀಕರಿಸಿದ್ದೇನೆ. ನೀವೇ ನನಗೆ ಎಷ್ಟೋ ಸಾರೆ ಈ ಜಗತ್ತಿಗಿಂತಲೂ ಶ್ರೇಷ್ಠವಾದ ಇನ್ನೊಂದು ಸ್ವರ್ಗಲೋಕವದೆಯೆಂದು ಹೇಳಿದ್ದಿರಿ; ಮತ್ತು ಅಲ್ಲಿ ಪಕ್ಷಪಾತವಿಲ್ಲೆಂದೂ, ವಂಚನೆಯಿಲ್ಲವೆಂದೂ, ಪಾಪವಿಲ್ಲೆಂದೂ, ದುಷ್ಟ-ಜನರಿಲ್ಲವೆಂದೂ ಹೇಳಿದ್ದಿರಿ. ಅಹಹಾ! ಅದು ಬಹು ಆನಂದದಾಯಕ ಸ್ಥಳವೇ ಸರಿ!! ಜಗದೀಶ್ವರನ ಕೃಪೆಯಿಂದ ನಾನು ಕಾಲಾಂತರ ಅಲ್ಲಿಗೆ ಹೋದೇನು. ನೀವಾದರೂ ಇಹಲೋಕದ ಯಾತ್ರೆಯನ್ನು ಮುಗಿಸಿಕೊಂಡು, ಪರಲೋಕದ ಯಾತ್ರೆಗಾಗಿ ಅಲ್ಲಿಗೆ ಬಂದೀರಿ. ಅದು ದೇವರ ಸಾಮ್ರಾಜ್ಯಕ್ಕೆ ಒಳಪಟ್ಟಿರುವದರಿಂದ, ಅಲ್ಲಿ ವಿಶ್ವನಾಥರಾಯನಂಥ ದುಷ್ಟಜನರು ಸ್ವಪ್ನದಲ್ಲಿಯಾದರೂ ಕಣ್ಣಿಗೆ ಬೀಳುವದಿಲ್ಲ. ಅಲ್ಲಿ ನೀವು ನನ್ನನ್ನು ಲಗ್ನವಾಗಿ ಅಕ್ಷಯ-ಸುಖದಿಂದ ಕಾಲಕ್ರಮಣ ಮಾಡಬೇಕು. ಈ ಜಗದಲ್ಲಿ ಪೂರ್ಣವಾಗದ ಅಭೀಷ್ಟವು ನಿಶ್ಚಯವಾಗಿ ಸ್ವರ್ಗದಲ್ಲಿ ಪೂರ್ಣವಾದೀತು. ಈಶ್ವರನು ನಮ್ಮಿಬ್ಬರ ಮನೋಬಯಕೆಯನ್ನು ಸ್ವರ್ಗದಲ್ಲಿ ಪೂರ್ತಿ ಮಾಡೇ ಮಾಡುತ್ತಾನೆ. ಆ ಸುಖದ ಸಮಯವು ಒದಗುವ ತನಕ ನಾನು ಅವಿವಾಹಿತಳಾಗಿರುತ್ತೇನೆ.

"ನೀವು ನನ್ನ ಸಲುವಾಗಿ ಪ್ರಯತ್ನಮಾಡಬೇಡಿರಿ. ನನ್ನ ಸಲುವಾಗಿ ನಿಮ್ಮ ಮನಸ್ಸನ್ನು ನೋಯಿಸಬೇಡಿರಿ. ನಾನು ದುಃಖಕ್ಕೆ ಈಡಾದೆನೆಂದು ನೀವೂ ದುಃಖಕ್ಕೆ ಈಡಾಗಬೇಡಿರಿ. ಬಹಳ ಹೇಳುವದೇನು! ನನ್ನ ಸಲುವಾಗಿ ಒಂದು ದುಃಖದ ಶ್ವಾಸವನ್ನು ಕೂಡ ಬಿಡಬೇಡಿರಿ. ತಮ್ಮಂಥ ಸಮಾಗಂ

ಗಸುಂದರ ಪುರುಷರ ಮೇಲಿನ ಪ್ರೇಮದೃಷ್ಟಿಯನ್ನು ಹಿಂದಕ್ಕೆ ತಕ್ಕೊಳ್ಳು ವದು ನಿಜವಾಗಿ ಕಠಿಣವು. ಆದರೆ ತಮ್ಮ ಸುಖದ ಸಲುವಾಗಿ ಮಾತ್ರ ಆ ಪ್ರೇಮದೃಷ್ಟಿಯನ್ನು ಹಿಂದಕ್ಕೆ ತೆಗೆದುಕೊಳ್ಳುತ್ತೇನೆ. ಅಷ್ಟರ ಸಲುವಾಗಿ ಯೇ ನಾನು ನನ್ನ ಹೃದಯವನ್ನು ವಜ್ರದಂತೆ ಕಠಿಣವಾಗಿಯೂ, ಪರ್ವತ ದಂತೆ ಸ್ಥಿರವಾಗಿಯೂ ಮಾಡಿದ್ದೇನೆ.

“ನನ್ನ ಸಲುವಾಗಿ ನೀವು ದುಃಖವನ್ನು ಸೋಸಬೇಕೆಂದು ನಾನು ಇಚ್ಛಿಸುವದಿಲ್ಲ. ನನಗೆ ಯಾರಾದರೂ ಏನಾದರೂ ಬಿರುನುಡಿಗಳನ್ನಾಡಿದರೆ, ಅದಕ್ಕೆ ನಾನೆಂದೂ ಹೆದರುವದಿಲ್ಲ. ನಾನು ನಿರಪರಾಧಿಯೂ, ನಿಷ್ಕಲಂಕೆಯೂ ನಿಷ್ಪಾಪಿಯೂ ಇರುವಾಗ, ಎರಡನೆಯ ತುಚ್ಛ ಜನರ ಅಪವಾದಕ್ಕೆ ನಾನು ಹೆದರಲಿಕ್ಕೇನೂ ಕಾರಣವಿಲ್ಲ. ನಾನು ಸಮಾಜದಿಂದ ಬಹಿಷ್ಕೃತಳಾದದ್ದಕ್ಕೆ ನನಗೆ ರವಷ್ಟಾದರೂ ಚಿಂತೆಯಿಲ್ಲ.

“ನನ್ನಂತೆಯೇ ನಿಮ್ಮ ಮನಸ್ಸಿಗೆ ಬೇಸರವು ಬಂದರೆ, ನನ್ನಂತೆ ಬ್ರಹ್ಮಚರ್ಯಾವಸ್ಥೆಯಲ್ಲಿ ಮಾತ್ರ ಇರಬೇಡಿರಿ. ನೀವು ಸಂಸಾರ ತತ್ಪರರಾಗಿ ಸುಖದಿಂದ ಕಾಲಹರಣ ಮಾಡಬೇಕೆಂದು, ನನ್ನ ನಿಜವಾದ ಮನೋಭಿಪ್ರಾ ಯವದೆ. ಯಾವಳೊಬ್ಬ ಸುಂದರ ಸಜಾತೀಯ ಕನ್ಯೆಯನ್ನು ನೀವು ಲಗ್ನವಾ ಗಬೇಕೆಂದು, ನಾನು ಆಗ್ರಹದಿಂದ ಹೇಳುತ್ತೇನೆ ನಿಮಗೆ ಸುಸ್ವರೂಪ ಸುಶಿ ಕ್ಷಿತ ಸ್ತ್ರೀಯು ದೊರೆತಳೆಂದರೆ, ನನ್ನ ಆನಂದಕ್ಕೆ ಸೀಮೆಯಿಲ್ಲದಾಗುವದು. ನೀವೀರ್ವರೂ ಒಳ್ಳೇ ರೀತಿಯಿಂದ ಸಂಸಾರ ಮಾಡಿದರೆ ಸಾಕು, ನಿಮ್ಮನ್ನು ನಾನು ಭಾಗ್ಯವಾನ ಪುರುಷರೆಂದು ಮಾನಿಸುತ್ತೇನೆ. ಕಾಲಾಂತರದಲ್ಲಿ ನಿಮ ಗೆ ಸುಂದರವಾದ ಮಕ್ಕಳಾದವೆಂದರೆ, ನನ್ನ ಆನಂದಕ್ಕೆಣೆಯುಂಟೇ? ಅಹಹಾ! ಆನಂದದಿಂದ ನಾನು ಅವುಗಳನ್ನು ಎತ್ತಿಕೊಂಡು ತಿರುಗಾಡು ವೆನು!! ನಿಮಗೂ, ನನಗೂ ಶರೀರಸಂಬಂಧವಿಲ್ಲದಿದ್ದರೂ, ನಾನು ಆ ಮಕ್ಕಳ ಲಾಲನೆ-ಪಾಲನೆಗಳನ್ನು ಮಾಡುವೆನು. ಈಶ್ವರನು ಆ ಸುಖದ ಕಾಲವನ್ನು ಬೇಗನೆ ಉಂಟು ಮಾಡಲಿ!

“ನಿಮ್ಮ ಸಂಬಂಧವಾಗಿ ನನ್ನ ಅಂತಃಕರಣವು ಈಗ ಸ್ನೇಹಶೂನ್ಯ ವಾಗಿದೆ. ನಿಮ್ಮ ಸಂಬಂಧವಾಗಿ ನನ್ನ ಮನಸ್ಸಿನಲ್ಲಿದ್ದ ವಿಚಾರವನ್ನು ನಾನು

ಪೂರ್ಣ ಕಿತ್ತುಹಾಕಿದ್ದೇನೆ. ನಿಮ್ಮನ್ನು ಮೊದಲು ನೋಡುತ್ತಿದ್ದ ದೃಷ್ಟಿಯಿಂದ ಈಗ ನೋಡುವದಿಲ್ಲ.

"ಪತ್ರವನ್ನು ಮುಗಿಸುವ ಪೂರ್ವದಲ್ಲಿ ಇನ್ನೊಮ್ಮೆ ತಮಗೆ ವಿನಂತಿ ಮಾಡಿಕೊಳ್ಳುವದೇನಂದರೆ:— ನೀವು ಸಮಾಜಕ್ಕೆ ವಿರೋಧವಾದ ಕಾರ್ಯವನ್ನು ಮಾಡಬೇಡಿರಿ; ವಿರೋಧವಾಗಿ ನಡೆದರೆ ನಿಜವಾಗಿ ನಿಮಗೆ ಸುಖಾಂಶವಿಲ್ಲ. ನಾನು ನನ್ನ ಮನಸ್ಸನ್ನು ದೃಢಗೊಳಿಸಿದಂತೆ ನೀವೂ ನನ್ನಂತೆ ನಿಮ್ಮ ಮನಸ್ಸನ್ನು ದೃಢಗೊಳಿಸಿರಿ, ಅಂದರಾಯಿತು.

'ವೇಣೂ'"

ಪತ್ರವನ್ನು ಓದಿ, ಕೃಷ್ಣರಾಯನು ಕುಳಿತಲ್ಲಿಯೇ ಹತಾಶನಾಗಿ ಬಿದ್ದನು.

---

## ೩ನೆಯ ಪ್ರಕರಣ—ಮೂಲ.

ಹಿಂದಿನ ಎರಡು ಪ್ರಕರಣಗಳನ್ನು ಓದಿ, ವಾಚಕಮಹಾನುಭಾವರ ಮನಸ್ಸಿನಲ್ಲಿ ವಿಧವಿಧವಾದ ಕಲ್ಪನೆಗಳು ಹುಟ್ಟಿರಬಹುದು. ವೇಣೂ ಕೃಷ್ಣರಾಯರ ಪೂರ್ವಾಪರ-ಸಂಬಂಧವು ತಿಳಿಯದ್ದರಿಂದ ತಮ್ಮ ಮನಸ್ಸಿನಲ್ಲಿ ಒಂದು ತರದಿಂದ ಅಸಂತೋಷವಾಗಿರಬಹುದು, ಅದಕ್ಕಾಗಿ ಈ ಪ್ರಕರಣದಲ್ಲಿ ಆ ಸಂಬಂಧವನ್ನು ತಿಳಿಸುವ ಯತ್ನ ಮಾಡಿರುತ್ತದೆ,

ರಾಮಕೃಷ್ಣ ಪಂತನು ವೇಣುವಿನ ತಂದೆಯು. ಇವನು ಮೊದಲು ಬಹಳ ಬಡತನದ ಸ್ಥಿತಿಯವನು. ಕೊಂಕಣದಲಿ ಸಮುದ್ರದ ದಂಡೆಯಲ್ಲಿರುವ ಅವಂತಿಪುರ ಗ್ರಾಮವೇ ರಾಮಕೃಷ್ಣಪಂತನ ವಾಸಸ್ಥಳವಾಗಿತ್ತು. ರಾಮಕೃಷ್ಣಪಂತನು ತಂದೆಯ ಮುಪ್ಪಿನಕಾಲದಲ್ಲಿ ಹುಟ್ಟಿದ ಒಬ್ಬನೇ ಒಬ್ಬ ಮಗನು. ರಾಮಕೃಷ್ಣಪಂತನ ತಂದೆಯು ಗಟ್ಟಿಮುಟ್ಟ ಇರುವಾಗ್ಗೆ ಅವನು ಪರಶ್ರಮಮಾಡಿ ಹಾಗೂ ಹೀಗೂ ತನ್ನ ಸಂಸಾರವನ್ನು ಸಾಗಿಸುತ್ತಿದ್ದನು.

ಅವನು ಮುದುಕನಾದ ಕೂಡಲೆ, ಅವನ ಸಂಸಾರವು ಸಾಗುವದು ಬಹಳ ಕಠಿಣವಾಯಿತು. ಒಕ್ಕಲತನವು ರಾಮಕೃಷ್ಣಪಂತನ ತಂದೆಯ ಉಪಜೀವನದ ಉದ್ಯೋಗವಾಗಿತ್ತು. ಕೊಂಕಣದಲ್ಲಿಯ ಭೂಮಿಗಳು ಎಷ್ಟು ಸಪೀಕ ವಿರುತ್ತವೆಂಬುವದು, ಸಾಧಾರಣ ಎಲ್ಲರಿಗೂ ತಿಳಿದ ಮಾತೇ ಆಗಿದೆ. ಅಲ್ಲಿಯ ಭೂಮಿಗಳಲ್ಲಿ ಭತ್ತದ ಹೊರ್ತು ಇತರ ಧಾನ್ಯವು ಬೆಳೆಯುವಂತಿಲ್ಲ. ಅದರಲ್ಲಿ ರಾಮಕೃಷ್ಣಪಂತನ ತಂದೆಗೆ ಬಹಳ ಭೂಮಿಗಳಾದರೂ ಇದ್ದಿಲ್ಲ. ಸಣ್ಣ-ಸಣ್ಣ ಮೂರು ಪಟ್ಟಗಳು ಮಾತ್ರ ಇದ್ದವು; ಆದರೂ ರಾಮಕೃಷ್ಣ ಪಂತನ ತಂದೆಯು ಆ ಮೂರೇ ಪಟ್ಟಗಳಿಂದ ವರ್ಷದ ಸಂಗ್ರಹವನ್ನು ಮಾಡಿಕೊಳ್ಳುತ್ತಿದ್ದನು. ಆದರೆ ಅವನು ಮುದುಕನಾದ ಮೇಲೆ ಹೊಲಗೆಲಸವು ಸರಿಯಾಗಿ ಸಾಗದ್ದರಿಂದ, ಅವನ ಸಂಸಾರದ ತಾಪತ್ರಯವು ಮಿತಿ ಮೀರಿತ್ತು.

ಆ ಕುಟುಂಬದಲ್ಲಿ ಬಹಳ ಮಂದಿಯಾದರೂ ಇದ್ದಿಲ್ಲ. ರಾಮಕೃಷ್ಣ ಪಂತನೊಬ್ಬನು, ರಾಮಕೃಷ್ಣಪಂತನ ಮುಪ್ಪಿನ ಮುದುಕರಾದ ತಂದೆ-ತಾಯಿಗಳಿಬ್ಬರು. ಅಂತೂ ಮೂವರೇ ಮೂವರು. ಒಬ್ಬನೇ ಒಬ್ಬ ಮಗನಾದ್ದರಿಂದ, ರಾಮಕೃಷ್ಣಪಂತನನ್ನು ಅವನ ತಂದೆ-ತಾಯಿಗಳು ಬಹಳ ಪ್ರೀತಿಸುತ್ತಿದ್ದರು. ತಾವು ಬಡತನದಿಂದ ಬಳಲುತ್ತಿದ್ದರೂ ಅವರು, ರಾಮಕೃಷ್ಣಪಂತನಿಗೆ ತಿಂಬುಂಬುವದಕ್ಕೂ, ಉಡು-ತೊಡುವದಕ್ಕೂ, ಕಡಿಮೆ ಮಾಡಿದ್ದಿಲ್ಲ. ತಾವು ಇರುವದು ಹಳ್ಳಿಯಾಗಿದ್ದರೂ ರಾಮಕೃಷ್ಣಪಂತನಿಗೆ ಅವನ ತಂದೆ-ತಾಯಿಗಳು ತಕ್ಕಷ್ಟು ವಿದ್ಯಾಭ್ಯಾಸವನ್ನು ಮಾಡಿಸಿದ್ದರು. ಬ್ರಾಹ್ಮಣ ಧರ್ಮಾನುಸಾರ ರಾಮಕೃಷ್ಣಪಂತನಿಗೆ ಅವನ ತಂದೆ-ತಾಯಿಗಳು ಸಂಧ್ಯಾ ಪೂಜಾ-ವೈಶ್ವದೇವ-ರುದ್ರ-ಮಹಿಮ್ನಗಳನ್ನು ಕಲಿಸಿದ್ದರು. ರಾಮಕೃಷ್ಣಪಂತನು ಚಿಕ್ಕಂದಿನಿಂದಲೇ ಕಾರ್ಯದಕ್ಷನೂ, ಒಳ್ಳೆ ಪ್ರಾಣಿಕನೂ, ಶಾಂತ ಸ್ವಭಾವದವನೂ ಆಗಿದ್ದನು. ರಾಮಕೃಷ್ಣಪಂತನನ್ನು ಯಾವದಾದರೊಂದು ಪಟ್ಟಣದಲ್ಲಿಟ್ಟು, ಮುಂದಿನ ಉಚ್ಚಪ್ರತಿಯ ಶಿಕ್ಷಣವನ್ನು ಕೊಡಿಸಬೇಕೆಂದು ಅವನ ತಂದೆಯು ಉತ್ಕಟಾಪೇಕ್ಷೆಯಿತ್ತು; ಆದರೆ ಬಡತನದಿಂದ ಅವನ ಅಪೇಕ್ಷೆಯು ಪೂರ್ಣವಾಗುವಂತಿದ್ದಿಲ್ಲ. ರಾಮಕೃಷ್ಣಪಂತನು ಹದಿನೇಳು-ಹದಿನೆಂಟು ವರ್ಷದವನಿರುವಾಗ್ಗೆ ಅವನ ತಂದೆಯು ಪೂರ್ಣವಾಗಿ ನೆಲಹಿಡಿ

ದನು. ಆದ್ದರಿಂದ ಆ ಕುಟುಂಬದ ಉದರಂಭರಣಕ್ಕೆ ತೀರ ತೊಂದರೆಯಾಗಹತ್ತಿತು. ಈ ಸ್ಥಿತಿಯು ರಾಮಕೃಷ್ಣಪಂತನಿಗೆ ಬಹಳೇ ಅಸಹ್ಯವಾಗಿ ತೋರಿತು. ಎಲ್ಲಿಯಾದರೂ ನವಕರಿಯನ್ನು ಮಾಡಿ, ನಾಲ್ಕು ದುಡ್ಡು ತಂದು, ವೃದ್ಧ-ಜನನೀ-ಜನಕರನ್ನು ರಕ್ಷಿಸಬೇಕೆಂದಾಲೋಚಿಸಿ, ಅವನು ನವಕರಿಯ ದೆಶೆಯಿಂದ ಹೊರಗಿನ ಗ್ರಾಮಕ್ಕೆ ಹೋಗುವದಕ್ಕಾಗಿ ತಂದೆ-ತಾಯಿಗಳಿಗೆ ಬೇಡಿಕೊಂಡನು. ಅವನ ತಂದೆ-ತಾಯಿಗಳಾದರೂ ಗತಿಯಿಲ್ಲದೆ, ಬಹಳ ಕಷ್ಟದಿಂದ ಅವನಿಗೆ ಎರಡನೇ ಗ್ರಾಮಕ್ಕೆ ಹೋಗಲಿಕ್ಕೆ ಸಮ್ಮತಿಯನ್ನು ಕೊಟ್ಟರು. ತಂದೆ-ತಾಯಿಗಳ ಅನುಮತಿಯು ಸಿಕ್ಕಕೂಡಲೆ ರಾಮಕೃಷ್ಣಪಂತನು ನವಕರಿಯ ಸಲುವಾಗಿ ಮುಂಬಯಿಗೆ ಹೊರಟು ಬಂದನು.

ಮುಂಬಯಿಯಾದರೂ, ದೊಡ್ಡ ಪಟ್ಟಣವು; ಯಾರದೂ ಗುರ್ತಿಲ್ಲ; ಎಲ್ಲಿಯೂ ಪರಿಚಯವಿಲ್ಲ; ಹತ್ತರ ದುಡ್ಡಾದರೂ ಇಲ್ಲ; ಈ ಮೊದಲಾದ ಪ್ರಶ್ನಗಳು ಮುಂಬಯಿಗೆ ಹೋಗುವಾಗ್ಗೆ ರಾಮಕೃಷ್ಣಪಂತನ ಮನಸ್ಸಿನಲ್ಲಿ ಹುಟ್ಟಿದರೂ, ಅವನು ಉದರಂಭರಣದ ನಿಮಿತ್ತ ಎಲ್ಲ ತೊಂದರೆಗಳನ್ನು ಧಿಕ್ಕರಿಸಿ ಮುಂಬಯಿಯ ಹಾದಿಯನ್ನು ಹಿಡಿದನು. ಹಾದಿಯಲ್ಲಿ ಹೋಗುವಾಗ್ಗೆ ತನಗೆ ನವಕರಿಯು ಹೇಗೆ ಸಿಕ್ಕೀತು, ಎಂಥ ನವಕರಿಯು ದೊರಕೀತು, ಮೊದಲಾದ ಪ್ರಶ್ನಗಳ ಬಗ್ಗೆ ರಾಮಕೃಷ್ಣಪಂತನ ಹೃದಯದಲ್ಲಿ ಒಂದು ದೊಡ್ಡ ವಿಚಾರವು ಉತ್ಪನ್ನವಾಯಿತು. ಅವನು, ಕಡೆಗೆ ಮುಂಬಯಿಗೆ ಹೋದ ಕೂಡಲೆ ಮೊದಲು ಸಿಕ್ಕ ನವಕರಿಯನ್ನು ಮಾಡಬೇಕೆಂದಾಲೋಚಿಸುತ್ತ ನಡೆದನು. ಹಾಗೆ ಮಾಡದಿದ್ದರೆ ಅವನಿಗೆ ಗತಿಯೇ ಇದ್ದಿಲ್ಲ. ಕೆಲಹೊತ್ತಿನಲ್ಲಿ ಹಡಗವು ಮುಂಬಯಿಯ ಬಂದರಕ್ಕೆ ಹೋಗಿ ನಿಂತಿತು. ರಾಮಕೃಷ್ಣಪಂತನು ಮುಂಬಯಿಯಲ್ಲಿ ತಿರುಗಾಡಹತ್ತಿದನು. ಅವನು ಈ ಪೂರ್ವದಲ್ಲಿ ಎಂದೂ ಮುಂಬಯಿಯನ್ನು ನೋಡದ್ದರಿಂದ, ಮುಂಬಯಿಯ ವಿಲಕ್ಷಣವಾದ ದರ್ಶನೀಯತ್ವವು ಅವನಿಗೆ ಬಹಳ ಅಭೂತಪೂರ್ವವಾಗಿ ತೋರಿತು. ಗಾಡಿ, ಕುದುರೆ, ಟ್ರಾಮು, ಬೈಸ್ಕಲ್, ಮೋಟಾರ, ಜನರ ಕಲಕಲಾಟ, ಉದ್ದವಾದ ಬೀದಿ, ದೊಡ್ಡ ದೊಡ್ಡ ಮನೆ ಮೊದಲಾದವುಗಳನ್ನು ನೋಡಿ, ರಾಮಕೃಷ್ಣಪಂತನು ಬಹಳ ಆಶ್ಚರ್ಯಭರಿತನಾದನು. ಅವನಿಗೆ ಮುಂಬಯಿಯಲ್ಲಿ ಇದು ಯಾವ ಬೀದಿ, ಅದು ಯಾವ ಬೀದಿಯೆಂಬುವದು

ಏನೂ ಪರೀಕ್ಷೆಯುವಿದ್ದಿಲ್ಲ. ಆದರೂ ಅವನು ಹಣೇಬರಹದ ಮೇಲೆ ಪೂರ್ಣವಾಗಿ ಕೈಯೂರಿ ಅತ್ತಿಂದ-ಇತ್ತ, ಇತ್ತಿಂದ-ಅತ್ತ ತಿರುಗಾಡುತ್ತಿದ್ದನು. ಯಾವದೊಂದು ದೊಡ್ಡ ಅಂಗಡಿಯು ಕಣ್ಣಿಗೆ ಬೀಳುವದೊಂಬೇ ತಡವು, ರಾಮಕೃಷ್ಣಪಂತನು ಆ ಅಂಗಡಿಯಲ್ಲಿ ಹೋಗಿ, ನವಕರಿಯ ಬಗ್ಗೆ ಆಲೋಚಿಸಬೇಕೆಂದು ಹಂಬಲಿಸುತ್ತಿದ್ದನು. ಆದರೆ ಅಷ್ಟರಲ್ಲಿ ಮತ್ತೊಂದು ಅಂಗಡಿಯು ದೃಷ್ಟಿಗೆ ಬಿತ್ತೆಂದರೆ, ಅವನು ಮೊದಲಿನ ಅಂಗಡಿಯನ್ನು ಬಿಟ್ಟು, ಎರಡನೇ ಅಂಗಡಿಗೆ ಹೋಗಬೇಕೆಂದು ಆಲೋಚಿಸುತ್ತಿದ್ದನು. ಈಪ್ರಕಾರ ಹೋಗಹೋಗುತ್ತ ಅವನು ಎಷ್ಟೋ ಅಂಗಡಿಗಳನ್ನೂ, ಎಷ್ಟೋ ಎರಡನೇ ಆಫೀಸುಗಳನ್ನೂ ಧಿಕ್ಕರಿಸುತ್ತ ಸ್ವಲ್ಪ ಮುಂದಕ್ಕೆ ಹೋದ ಕೂಡಲೆ ಒಂದು ದೊಡ್ಡ ವಿಮಾಕಂಪನಿಯ ಮನೆಯ ಮೇಲ್ಭಾಗಕ್ಕೆ " ನವಕರಿಯ ಅವಶ್ಯವಿದೆ " ಎಂದು ಬರೆದಿದ್ದ ಜಾಹೀರಾತಿನ ಪಟವು ಅವನ ದೃಷ್ಟಿಗೆ ಬಿದ್ದಿತು. ಅವನು ಸಿಕ್ಕಟಂಜಲ ಮನಸ್ಸಿನಿಂದ ಒಳಗೆ ಹೊಕ್ಕನು. ಒಳನೆ ಅಂತಸ್ತಿನ ಕೆಳಗೆ ಒಬ್ಬ ದ್ವಾರಪಾಲಕನು ನಿಂತಿದ್ದನು. ಆಗ ರಾಮಕೃಷ್ಣಪಂತನು, ಆ ದ್ವಾರಪಾಲಕನಿಗೆ ವಿಮಾಕಂಪನಿಯ ಯಜಮಾನನಿಗೆ ಭೆಟ್ಟಿಯಾಗುವ ತನ್ನ ಮನದಿಚ್ಛೆಯನ್ನು ಹೇಳಿದನು. ಕೂಡಲೆ ಅವನು ರಾಮಕೃಷ್ಣಪಂತನನ್ನು ಒಂದು ದಿವಾಣಖಾನೆಯಲ್ಲಿ ಕರಕೊಂಡು ಹೋಗಿ, ವಿಮಾಕಂಪನಿಯ ಸಾಹೇಬರ ಮುಂದೆ ನಿಲ್ಲಿಸಿದನು. ರಾಮಕೃಷ್ಣಪಂತನು ಅಲ್ಲಿಯ ಶೋಭೆಯನ್ನು ನೋಡಿ ಚಕಿತನಾದನು. ಅಲ್ಲಿದ್ದಂಥ ನವಕರ ಜನರು ತಂತಮ್ಮ ಕೆಲಸದಲ್ಲಿ ಪೂರ್ಣನಿರತರಾಗಿದ್ದರು. ಅವರಲ್ಲಿ ಕೆಲವರು ಘಾರ್ಸಿಯವರೂ, ಕೆಲವರು ಬ್ರಾಹ್ಮಣರೂ, ಕೆಲವರು ಯುರೋಪಿಯನ್ನರೂ ಇದ್ದರು. ಪ್ರತಿಯೊಬ್ಬರಿಗೆ ಕೂಡ್ರಲಿಕ್ಕೆ ಒಂದು ಖುರ್ಚಿಯೂ, ಇಟ್ಟುಕೊಂಡು ಬರೆಯುವದಕ್ಕೆ ಒಂದು ಟೇಬಲ್ಲೂ ಇದ್ದವು. ಸಾಹೇಬರ ಖುರ್ಚಿ-ಟೇಬಲ್ಲುಗಳಂತೂ ಬಹಳೇ ಶೋಭಾಯಮಾನವಾಗಿ ಕಾಣಿಸುತ್ತಿದ್ದವು. ಆ ಸಾಹೇಬರಾದರೂ ಬರೆಯುವ ಕೆಲಸದಲ್ಲಿ ಪೂರ್ಣವಾಗಿ ತೊಡಗಿದ್ದರು. ಎಲ್ಲ ಕಡೆಗೂ ವಿದ್ಯುಲ್ಲತೆಯ ಬೀಸಣಿಕೆಗಳು ಗರಗರ ತಿರುಗುತ್ತಿದ್ದವು. ಹೊರಗಿಂದ ಬಂದು ಎಷ್ಟೋ ಜನರು ದ್ರವ್ಯವನ್ನು ಕೊಡುತ್ತಿದ್ದರು; ಎಷ್ಟೋ ಜನರು ದ್ರವ್ಯವನ್ನು ತಕ್ಕೊಂಡು ಹೋಗುತ್ತಿದ್ದರು. ಈಪ್ರಕಾರ ಆ ವೇಳೆಯಲ್ಲಿ ಎತ್ತ ನೋಡಿದತ್ತ ಜನರ

ಕಲಕಲಾಟವು ತುಂಬಿ ಹೋಗಿತ್ತು. ಆದರೂ ಪ್ರತಿಯೊಬ್ಬರು ತಮ್ಮ ಕೆಲಸವನ್ನು ಒಳ್ಳೇ ಶಾಂತರೀತಿಯಿಂದ ನಡೆಸುತ್ತಿದ್ದರು. ಇಷ್ಟರಲ್ಲಿ ಅಲ್ಲಿದ್ದಂಥ ಟೆಲಿಫನ್ನದ ಗಂಟೆಯು ಜೋರಿನಿಂದ ಬಾರಿಸಲು, ಸಾಹೇಬರು ಟೆಲಿಫನ್ನದ ಹತ್ತರ ಹೋಗಿ ಏನೋ ಇಂಗ್ರೇಜೀ ಭಾಷೆಯಿಂದ ಮಾತಾಡಿದರು. ಅದನ್ನು ನೋಡಿಯಂತೂ ರಾಮಕೃಷ್ಣಪಂತನಿಗೆ ಅತ್ಯಾಶ್ಚರ್ಯವಾಯಿತು. ಮಾತಾಡುವದಾದ ಮೇಲೆ ಆ ಸಾಹೇಬರು ಖುರ್ಚಿಯ ಮೇಲೆ ಬಂದು ಕೂಡ್ರುತ್ತಲೇ ಅವರ ದೃಷ್ಟಿಯು ರಾಮಕೃಷ್ಣಪಂತನ ಕಡೆಗೆ ಹೊರಳಿತು. ಆ ಕೂಡಲೆ ಬಹು ನಮ್ರತೆಯಿಂದ ರಾಮಕೃಷ್ಣಪಂತನು ಸಾಹೇಬರಿಗೆ ನಮಸ್ಕಾರ ಮಾಡಿದನು. ರಾಮಕೃಷ್ಣಪಂತನು ಶರೀರದಿಂದ ಸದೃಢನಿದ್ದು, ಸುಸ್ವರೂಪಿಯಾಗಿದ್ದನು. ಅವನ ಮುದ್ರೆಯು ಚಿತ್ತಾಕರ್ಷಕವಾಗಿತ್ತು. ಅವನ ವಾಣಿಯು ಮೋಹಕವಾದದ್ದೂ, ಮಧುರವಾದದ್ದೂ ಆಗಿತ್ತು. ಸಾಹೇಬರು ರಾಮಕೃಷ್ಣಪಂತನನ್ನು ನೋಡಿ, ನಗುತ್ತ—ನೀವು ಏನು ಕಾರಣ ಇಲ್ಲಿಗೆ ಬಂದಿರುವಿರೆಂದು ಕೇಳಿದರು.

ರಾಮಕೃಷ್ಣಪಂತನು ಸಾಹೇಬರಿಗೆ ತನ್ನ ಸಂಗತಿಯನ್ನು ಸ್ವಲ್ಪದರಲ್ಲಿ ಹೇಳಿ, ನವಕರಿಯನ್ನು ಕೊಡುವದಕ್ಕಾಗಿ ವಿನಂತಿ ಮಾಡಿಕೊಂಡನು. ಸಾಹೇಬರು ಸ್ವಲ್ಪ ವಿಚಾರ ಮಾಡಿ ಅವನಿಗೆ ಹತ್ತು ರೂಪಾಯಿಯ ಶಿಪಾಯಿಯ ಕೆಲಸವನ್ನು ಕೊಟ್ಟರು. ರಾಮಕೃಷ್ಣಪಂತನು ನಿರ್ವಾಹವಿಲ್ಲದೆ ಆ ಕಾರ್ಯಕ್ಕೆ ಸಮ್ಮತಿಸಿ, ಅಂದಿನಿಂದ ಅಲ್ಲಿ ನವಕರಿ ಮಾಡಲಾರಂಭಿಸಿದನು. ರಾಮಕೃಷ್ಣಪಂತನು ಚತುರ ಬುದ್ಧಿಯವನೂ, ಸರಳ ಸ್ವಭಾವದವನೂ, ಕಾರ್ಯದಲ್ಲಿ ಆಸಕ್ತನೂ ಆಗಿದ್ದರಿಂದ, ಅವನು ತೀವ್ರವಾಗಿ ಆ ಕಂಪನಿಯ ಪ್ರತಿಯೊಬ್ಬ ನವಕರದಾರನಿಗೆ ಬೇಕಾದನು. ರಾಮಕೃಷ್ಣಪಂತನು ತನಗೆ ಸಿಗುವ ಹತ್ತು ರೂಪಾಯಿಗಳಲ್ಲಿ ನಾಲ್ಕು ರೂಪಾಯಿಗಳನ್ನು ಮನೆಗೆ ಕಳಿಸಿ, ಉಳಿದ ಆರು ರೂಪಾಯಿಗಳಿಂದ ಹಾಗೂ ಹೀಗೂ ತನ್ನ ನಿರ್ವಾಹವನ್ನು ಸಾಗಿಸಿಕೊಳ್ಳುತ್ತಿದ್ದನು. ರಾಮಕೃಷ್ಣಪಂತನಿಗೆ ಮೊದಲು ಅಲ್ಪಸ್ವಲ್ಪ ಇಂಗ್ಲೀಷು ಬರುತ್ತಿತ್ತು. ನವಕರಿಗೆ ನಿಂತಮೇಲೆ ಮತ್ತಿಷ್ಟು ಇಂಗ್ಲೀಷ ಭಾಷೆಯನ್ನು ಬೆಳೆಸಿಕೊಂಡನು. ಅವನ ಪ್ರಯತ್ನವನ್ನು ನೋಡಿ, ಸಾಹೇಬರಿಗೆ ಬಹಳ ಸಮಾಧಾನವಾಗಿ ಅವರು ರಾಮಕೃಷ್ಣಪಂತನಿಗೆ ಶಿಪಾಯಿಯ ಕೆಲ

ಸವನ್ನು ಬಿಡಿಸಿ ಇಪ್ಪತ್ತು ರೂಪಾಯಿಯ ಕಾರಕೂನ ಜಾಗೆಯನ್ನು ಕೊಟ್ಟ ರು. ಹೀಗಿರುತ್ತಿರಲು, ರಾಮಕೃಷ ರಾಯನ ಸುಗುಣಗಳಿಗೆ ಬೆರಗಾದ ಆ ಸಾಹೇಬರು, ಒಂದುದಿನ ರಾಮಕೃಷ್ಣಪಂತನನ್ನು ಹತ್ತರ ಕರೆಯಿಸಿಕೊಂಡು ಹೇಳಿದ್ದೇನಂದರೆ— ರಾಮಕೃಷ್ಣಪಂತ, ನೀನು ಇನ್ನಷ್ಟು ಇಂಗ್ಲೀಷನ್ನು ಕಲಿತರೆ, ಇದಕ್ಕಿಂತಲೂ ಹೆಚ್ಚು ಪಗಾರವನ್ನು ಕೊಡುತ್ತೇನೆಂದು ಹೇಳಿದರು. ಆಗ ರಾಮಕೃಷ್ಣಪಂತನು ತನಗಿರ್ವ ತೊಂದರೆಯನ್ನು ಹೇಳಲಾಗಿ ಸಾಹೇಬರು ಅವನಿಗೆ ಪ್ರತಿ ದಿನಸ ಪ್ರಾತಃಕಾಲಕ್ಕೆ ತನ್ನ ಮನೆಗೆ ಬರುವದಾಗಿಯೂ, ಆ ವೇಳೆಯಲ್ಲಿ ಇಂಗ್ಲೀಷ ಭಾಷೆಯನ್ನು ಹೇಳುತ್ತೇವಾಗಿಯೂ ಅಂದರು. ರಾಮಕೃಷ್ಣಪಂತನು ಆ ಪ್ರಕಾರ ಪ್ರತಿನಿತ್ಯ ಸಾಹೇಬರ ಬಳಿಗೆ ಹೋಗಿ ಇಂಗ್ಲೀಷನ್ನು ಕಲಿಯಹತ್ತಿದನು. ಸುಮಾರು ಒಂದು ವರ್ಷದಲ್ಲಿಯೇ ರಾಮಕೃಷ್ಣಪಂತನು ಎಷ್ಟೋ ಇಂಗ್ಲೀಷ ಭಾಷೆಯಲ್ಲಿ ಮುಂದುವರಿದನು. ಇಷ್ಟವಧಿಯಲ್ಲಿ ಅವನ ಮನೆತನದ ಸ್ಥಿತಿಯೂ ಸಾಧಾರಣ ಸುಧಾರಿಸಿತು. ಅವನ ಮುಪ್ಪಿನ ತಾಯಿ ತಂದೆಗಳಿಗೆ ರಾಮಕೃಷ್ಣನ ಪ್ರಯತ್ನವನ್ನು ನೋಡಿ ಆನಂದವಾಯಿತು. ರಾಮಕೃಷ್ಣಪಂತನ ತಂದೆಯು ಮುಪ್ಪಿನ ಕಾಲದ ಬೇನೆಗಳಿಂದ ಹಣ್ಣಾಗಿ, ಅವನು ಇಹಲೋಕ ಯಾತ್ರೆಯನ್ನು ಮುಗಿಸಿ, ಪರಲೋಕಕ್ಕೆ ತೆರಳಿದನು.

ತಂದೆಯ ಮರಣದ ವಾರ್ತೆಯನ್ನು ಕೇಳಿದ ಕೂಡಲೆ ರಾಮಕೃಷ್ಣಪಂತನಿಗೆ ಬಹಳ ದುಃಖವಾಯಿತು; ಆದರೂ ಸೃಷ್ಟಿಕ್ರಮಕ್ಕೆ ಮನುಷ್ಯನ ಯತ್ನವಿಲ್ಲೆಂದಾಲೋಚಿಸಿ, ಅವನು ದುಃಖವನ್ನು ತಾಳಿಕೊಂಡನು. ವಿಮಾ ಕಂಪನಿಯ ಸಾಹೇಬರಾದರೂ ರಾಮಕೃಷ್ಣಪಂತನಿಗೆ ಎರಡು ಸಮಾಧಾನದ ಮಾತುಗಳನ್ನು ಹೇಳಿ, ಶ್ರಾದ್ಧಕ್ರಿಯಾದಿ ಅಂತ್ಯೇಷ್ಠಿ ಕರ್ಮವನ್ನು ಮಾಡಲಿಕ್ಕೆ ಅವನಿಗೆ ರಜೆಯನ್ನು ಕೊಟ್ಟರು. ರಾಮಕೃಷ್ಣಪಂತನು ಮನೆಗೆ ಬಂದು, ಪಿತೃಶ್ರಾದ್ಧಾದಿ ಕರ್ಮವನ್ನು ಯಥಾಸಾಂಗವಾಗಿ ಮಾಡಿದನು. ರಾಮಕೃಷ್ಣಪಂತನ ತಾಯಿಯೂ ಮೊದಲೇ ಲಿಕಿಲಿಕಿಯಾಗಿದ್ದಳು; ಅದರಲ್ಲಿ ವೈಧವ್ಯವು ಪ್ರಾಪ್ತವಾದ್ದರಿಂದ ಮತ್ತಿಷ್ಟು ಮನೋರೋಗವನ್ನು ಹಚ್ಚಿಕೊಂಡು, ಕೊರಗುತ್ತ ಕೊರಗುತ್ತ ಪತಿಯು ಸತ್ತ ತಿಂಗಳಲ್ಲಿಯೇ ಅವಳೂ ಮೃತಪಟ್ಟಳು. "ಸಂಕಟಗಳು ಬರಲಿಕ್ಕೆ ಹತ್ತಿದರೆ ಮೇಲ್ಮೇಲೆ ಬರುತ್ತವೆ"

ಎಂಬಂತೆ ರಾಮಕೃಷ್ಣಪಂತನಿಗೆ ಒಂದರ ಮೇಲೊಂದು ಸಂಕಟಗಳೊದಗಿ ದ್ದರಿಂದ ಅವನು ಬಹಳ ದುಃಖಿತನಾದನು. ಅವನಿಗೆ ತಾಯಿಯ ವಿಯೋಗ ದಿಂದ ಜಗತ್ತೆಲ್ಲ ಶೂನ್ಯವಾಗಿ ಕಾಣಿಸಹತ್ತಿತು. ಈ ಜಗತ್ತಿನಲ್ಲಿ ತನ್ನನ್ನು ಪ್ರೀತಿಸುವಂಥ, ತನ್ನನ್ನು ಕಂಡು ಹಿರಿಹಿರಿ ಹಿಗ್ಗುವಂಥ, ತನ್ನ ಕೂಡ ಪ್ರೀತಿ ಯಿಂದ ಮಾತಾಡುವಂಥ ಸಮೀಪದ ಬಂಧುಗಳು ಒಬ್ಬರೂ ಇಲ್ಲವಾಯಿ ತೆಂದು, ಅವನು ಬಹಳ ಖೇದಬಡಹತ್ತಿದನು. ಈಶ್ವರೀ ಸೂತ್ರದಂತೆ ಯಾವತ್ತೂ ಸಂಗತಿಗಳು ಆಗಲೇ ಬೇಕೆಂದು ನೆನಿಸಿ, ರಾಮಕೃಷ್ಣಪಂತನು ಹಾಗೂ ಹೀಗೂ ಮನಸ್ಸು ಕಲ್ಲು ಮಾಡಿ, ಮುಂಬಯಿಗೆ ಬಂದು ನವಕರಿ ಯ ಮೇಲೆ ನಿಂತನು.

ಈ ವೇಳೆಯಲ್ಲಿ ರಾಮಕೃಷ್ಣಪಂತನಿಗೆ ಐವತ್ತು ರೂಪಾಯಿ ಪಗಾರ್ ವಿತ್ತು. ರಾಮಕೃಷ್ಣಪಂತನು ಇದ್ದ ವಿಮಾ ಕಂಪನಿಯಲ್ಲಿ ಹರಿಪಂತನೆಂ ಬ ಒಬ್ಬ ಬ್ರಾಹ್ಮಣ ಜಾತಿಯ ಗೃಹಸ್ಥನು ನೂರು ರೂಪಾಯಿ ಪಗಾರದ ಮೇಲಿದ್ದನು. ಅವನು ದಿವಸವಾದವನಿದ್ದು, ರಾಮಕೃಷ್ಣಪಂತನನ್ನು ಬಹಳ ವಾಗಿ ಪ್ರೀತಿಸುತ್ತಿದ್ದನು. ಹರಿಪಂತನಿಗೆ ಹನ್ನೊಂದು ಹನ್ನೆರಡು ವರ್ಷದ ಒಬ್ಬ ಮಗಳಿದ್ದಳು. ಅವಳನ್ನು ರಾಮಕೃಷ್ಣಪಂತನಿಗೆ ಕೊಟ್ಟು ಲಗ್ನ ಮಾಡಬೇಕೆಂಬ ಕುತೂಹಲದಿಂದ ಹರಿಪಂತನು ರಾಮಕೃಷ್ಣಪಂತನನ್ನು ಪ್ರೀತಿಸುತ್ತಿದ್ದನು. ಕೆಲವು ದಿವಸವಾದ ಮೇಲೆ ಹರಿಪಂತನು ರಾಮಕೃಷ್ಣ ಪಂತನ ಜಾತಕವನ್ನು ತಕ್ಕೊಂಡು, ಬಲ್ಲವರಿಂದ ಅದನ್ನು ಪರಿಶೋಧಿಸಿ, ಸರಿಬಿದ್ದದರಿಂದ ರಾಮಕೃಷ್ಣಪಂತನ ಸಮ್ಮತಿಪೂರ್ವಕ ಲಗ್ನದ ತಿಥಿಯನ್ನು ಸ್ಥಿರಪಡಿಸಿದನು; ನಂತರ ಗೊತ್ತಾದ ತಿಥಿಗೆ ಅವನು ರಾಮಕೃಷ್ಣಪಂತ ನಿಗೆ ಒಬ್ಬ ಸುಂದರ ಪತ್ನಿಯ ಲಾಭ ಮಾಡಿಕೊಟ್ಟನು. ಹರಿಪಂತನಿಗೆ ಇಂದಿರೆ ಎಂಬ ಮಗಳ ಹೊರ್ತು ಮತ್ತಾವ ಪುತ್ರ ಪುತ್ರಿಯರು ಇಲ್ಲದ್ದ ರಿಂದ, ಅವನು ಲಗ್ನವಾದಂದಿನಿಂದ ರಾಮಕೃಷ್ಣಪಂತನನ್ನು ತನ್ನ ಮನೆಯ ಲ್ಲಿಯೇ ಇಟ್ಟುಕೊಂಡನು. ಹರಿಪಂತನು ತನಗೆ ಮಾಡಿದ ಕಲ್ಯಾಣ ಕೃತ್ಯ ವನ್ನು ಕಂಡು, ರಾಮಕೃಷ್ಣಪಂತನಿಗೆ ಬಹಳೇ ಸಮಾಧಾನವಾಗಹತ್ತಿತು. ತನ್ನನ್ನು ಪ್ರೀತಿಸುವ, ತನ್ನೊಡನೆ ಮಮತೆಯಿಂದ ಮಾತು-ಕಥೆಗಳನ್ನಾಡುವ ಸಮೀಪದ ಬಂಧುಗಳನ್ನು ಈಶ್ವರನು ಪುನಃ ಬೇರದನೆ ಒದಗಿಸಿ ಕೊಟ್ಟಿದ್ದ

ಕ್ಕಾಗಿ, ರಾಮಕೃಷ್ಣಪಂತನು ಈಶ್ವರನನ್ನು ಬಹಳವಾಗಿ ಕೊಂಡಾಡಿದನು. ರಾಮಕೃಷ್ಣಪಂತನ ಇಂಗ್ಲೀಷು ಕಲಿಯುವ ಕೆಲಸವು ಯಥಾಕ್ರಮವಾಗಿ ನಡದೇ ಇತ್ತು. ಮೂರು ನಾಲ್ಕು ವರ್ಷಗಳಲ್ಲಿ ಅವನು ಇಂಗ್ಲೀಷ ಭಾಷೆಯಲ್ಲಿ ಪೂರ್ಣ ಜಾಣನಾದನು; ಅವನಿಗೆ ಸದ್ಯಕ್ಕೆ ನೂರು ರೂಪಾಯಿ ಪಗಾರವಿತ್ತು. ಸಂಸಾರಕ್ರಮಾನುಸಾರವಾಗಿ ಅವನ ಹೆಂಡತಿಯಾದ ಇಂದಿರೆಯು ಒಬ್ಬ ಹೆಣ್ಣು ಮಗಳನ್ನು ಹಡೆದಳು. ಆ ಹೆಣ್ಣುಮಗಳೇ ಈ ಕಥಾನಕದ ನಾಯಕಳಾದ ವೇಣುವು.

ರಾಮಕೃಷ್ಣಪಂತನಿದ್ದ ವಿಮಾ ಕಂಪನಿಯಲ್ಲಿ ಗೋವಿಂದರಾಯನೆಂಬ ಒಬ್ಬ ಬಹು ದಿವಸದ ನವಕರನಿದ್ದನು. ಅವನು ಆ ಕಂಪನಿಯ ನವಕರರಲ್ಲಿ ಮುಖ್ಯನಾಗಿದ್ದು, ಅವನಿಗೆ ಐದನೂರು ರೂಪಾಯಿ ಪಗಾರ ಸಿಗುತ್ತಿತ್ತು. ಮುಪ್ಪಿನಿಂದ ಅವನಿಗೆ ನವಕರಿಯು ಬೇಡಾಗಿತ್ತು; ಆದ್ದರಿಂದ ಅವನು ನವಕರಿಯನ್ನು ಬಿಟ್ಟು, ಸುಖದಿಂದ ಕಾಲಹರಣ ಮಾಡುವದಕ್ಕಾಗಿ ರಾಮಕೃಷ್ಣಪಂತನ ಹೇಳಿಕೆಯ ಪ್ರಕಾರ ಅವಂತೀಪುರಕ್ಕೆ ಬಂದು ಇರುತ್ತಿದ್ದನು. ರಾಮಕೃಷ್ಣಪಂತನು ತನ್ನ ಹೆಂಡರು ಮಕ್ಕಳನ್ನು ಅವಂತೀಪುರದ ತನ್ನ ಮನೆಯಲ್ಲಿ ಇಟ್ಟಿದ್ದನು. ರಾಮಕೃಷ್ಣಪಂತನ ಕೈಯು ಚನ್ನಾಗಿ ನಡೆಯ ಹತ್ತಿದ್ದರಿಂದ, ಅವನು ಅವಂತೀಪುರದಲ್ಲಿ ಮುಂಬಯಿಯ ಪದ್ಧತಿಯಂತೆ ಒಂದು ಪ್ರಶಸ್ತವಾದ ಮನೆಯನ್ನು ಕಟ್ಟಿಸಿದ್ದನು; ಮತ್ತು ಅಲ್ಲಿ ಎಷ್ಟೋ ಹೊಲಗಳನ್ನು ಹೊಸದಾಗಿ ಖರೀದಿಗೆ ಹಿಡಿದಿದ್ದನು. ಮನೆಯ ಮುಂದಿನ ವಾಡೆಯನ್ನು ಬಹಳ ಅಂದವಾಗಿ ಕಟ್ಟಿಸಿದ್ದನು, ಈ ವೇಳೆಯಲ್ಲಿ ರಾಮಕೃಷ್ಣಪಂತನ ಮನೆಯು ನಂದನವನದ ಅರಮನೆಯನ್ನು ಹೋಲುತ್ತಿತ್ತು.

ಗೋವಿಂದರಾವ ರಾಮಕೃಷ್ಣಪಂತರ ಸ್ನೇಹವು ಮಿತಿಮೀರಿ ಬೆಳೆದಿತ್ತು. ಇಬ್ಬರೂ ಪರಸ್ಪರ ಬಂಧುಗಳಂತೆ ವರ್ತಿಸುತ್ತಿದ್ದರು. ಇಬ್ಬರೂ ಸುಸ್ವಭಾವದವರಿದ್ದು, ಸೌಜನ್ಯಕ್ಕೆ ತವರಮನೆಯಾಗಿದ್ದರು. ಇಬ್ಬರ ಮನೆಯ ಜನರಾದರೂ ದೊಡ್ಡ ಮನಸ್ಸಿನವರೂ, ತಾಳ್ಮೆಯುಳ್ಳವರೂ ಆಗಿದ್ದರು. ಅವಂತೀಪುರದಲ್ಲಿ ಇರುತ್ತಿದ್ದ ಗೋವಿಂದರಾಯನು ರಾಮಕೃಷ್ಣಪಂತನ ಮನೆಯ ಜನರನ್ನು ಒಳ್ಳೇ ರೀತಿಯಿಂದ ಸಂರಕ್ಷಿಸುತ್ತಿದ್ದನು. ಆದ್ದರಿಂದ ಮುಂಬಯಿಯಲ್ಲಿ ಇರುತ್ತಿದ್ದ ರಾಮಕೃಷ್ಣಪಂತನಿಗೆ ತನ್ನ ಮನೆಯವರ

ಕಾಳಜಿಯೇ ಇದ್ದಿಲ್ಲ. ಕೆಲಕೆಲವು ದಿವಸ ರಾಮಕೃಷ್ಣಪಂತನ ಮನೆಯವರೆಲ್ಲ ಗೋವಿಂದರಾಯನ ಮನೆಯಲ್ಲಿ ಇರುತ್ತಿದ್ದರು. ಅವರು ಪರಕೀಯರಂತೆ ಎಂದೂ ಕಾಣಿಸುತ್ತಿದ್ದಿಲ್ಲ. ಗೋವಿಂದರಾಯನು ಅವಂತೀಪುರದಲ್ಲಿ ಒಂದು ದೊಡ್ಡ ಪ್ರದೇಶವನ್ನು ಖರೀದಿಗೆ ತೆಗೆದುಕೊಂಡು, ಅಲ್ಲಿ ಒಂದು ಭವ್ಯವಾದ ಬಂಗಲೆಯನ್ನು ಕಟ್ಟಿಸಿ, ಅದರಲ್ಲಿ ಇರುತ್ತಿದ್ದನು; ಮತ್ತು ಎಷ್ಟೋ ಹೊಲಗಳನ್ನು ಖರೀದಿಗೆ ತೆಗೆದುಕೊಂಡಿದ್ದನು. ರಾಮಕೃಷ್ಣಪಂತನಂತೆ ಗೋವಿಂದರಾಯನ ಮನೆಯಲ್ಲಿಯೂ ಸ್ವಲ್ಪ ಜನರಿದ್ದರು. ಗೋವಿಂದರಾಯನೂ, ಅವನ ಹೆಂಡತಿಯೂ, ಲಗ್ನವಾದ ರಮೆಯೆಂಬ ಹೆಸರಿನ ಒಬ್ಬ ಮಗಳೂ, ಕೃಷ್ಣರಾಯನೆಂಬ ಹೆಸರಿನ ಒಬ್ಬ ಮಗನೂ ಅಂತೂ ನಾಲ್ವರೇ ಇದ್ದರು. ಗೋವಿಂದರಾಯನ ಮಗನಾದ ಕೃಷ್ಣರಾಯನು ವಿದ್ಯಾಭ್ಯಾಸದ ಸಲುವಾಗಿ ಮುಂಬಯಿಯಲ್ಲಿ ಇರುತ್ತಿದ್ದನು. ರಮೆಯು ಮುಂಬಯಿಯ ತನ್ನ ಅತ್ತೆಯ ಮನೆಯಲ್ಲಿ ಇರುತ್ತಿದ್ದಳು. ಮನೆಯಲ್ಲಿ ಗೋವಿಂದರಾಯನೂ, ಗೋವಿಂದರಾಯನ ಪತ್ನಿಯೂ ಎಂಬ ಇಬ್ಬರೇ ಇಬ್ಬರು. ದರಿಂದ ಗೋವಿಂದರಾಯನು ರಾಮಕೃಷ್ಣಪಂತನ ಮನೆಯ ಜನರನ್ನು ತಾನೇ ತನ್ನ ಮನೆಗೆ ಕರಕೊಂಡು ಬಂದು ಇಟ್ಟುಕೊಳ್ಳುತ್ತಿದ್ದನು. ಮೇಲೆ ಹೇಳಿದ ಗೋವಿಂದರಾಯನ ಮಗನಾದ ಕೃಷ್ಣರಾಯನೇ ಈ ಕಥಾನಕದ ನಾಯಕನು.

ವೇಣೂ-ಕೃಷ್ಣರಾಯರ ವಯಸ್ಸಿನಲ್ಲಿ ಬಹಳ ಹೆಚ್ಚು ಕಡಿಮೆ ಇದ್ದಿಲ್ಲ. ಕೃಷ್ಣರಾಯನು ವೇಣುವಿಗಿಂತ ಮೂರು ವರ್ಷಕ್ಕೆ ಹಿರಿಯನು. ವೇಣೂ-ಕೃಷ್ಣರಾಯರು ಚಿಕ್ಕಂದಿನಲ್ಲಿ ಒಬ್ಬರಿಗೊಬ್ಬರು ಪ್ರೀತಿಯಿಂದ ನಡೆಯುತ್ತಿದ್ದರು. ವೇಣುವು ಅಳಲಿಕ್ಕೆ ಹತ್ತಿದರೆ ಕೃಷ್ಣರಾಯನೂ, ಕೃಷ್ಣರಾಯನು ಅಳಲಿಕ್ಕೆ ಹತ್ತಿದರೆ ವೇಣುವೂ ಅಳುತ್ತಿದ್ದರು. ಇಬ್ಬರೂ ಒಂದೇ ಸ್ಥಳದಲ್ಲಿ ಆಡುತ್ತಿದ್ದರು. ಇವರಿಬ್ಬರ ಬಾಲಕ್ರೀಡೆಯನ್ನು ನೋಡಿ, ಅವರ ತಾಯಿತಂದೆಗಳಿಗೆ ಬಹಳ ಆನಂದವಾಗುತ್ತಿತ್ತು. ವೇಣೂ ಕೃಷ್ಣರಾಯರು ದೊಡ್ಡವರಾಗಹತ್ತಿದಂತೆ ಅವರಿಗೆ ಯೋಗ್ಯ ಶಿಕ್ಷಣವೂ ದೊರೆಯಹತ್ತಿತು. ವೇಣುವು ಕೃಷ್ಣರಾಯನ ಬಳಿಯಲ್ಲಿ ಕುಳಿತುಕೊಂಡು, ಬಹಳ ಉತ್ಸುಕತೆಯಿಂದ ಅವನು ಕಲಿಯುವದನ್ನೇ ಕಲಿಯುತ್ತಿದ್ದಳು. ಉಭಯತರೂ ತೀಪ್ರ

ಗ್ರಹಣ ಬುದ್ಧಿಯವರಾದ್ದರಿಂದ ಹೇಳಿದ್ದನ್ನೆಲ್ಲ ಕೂಡಲೆ ಕಲಿತು ಬಿಡುತ್ತಿದ್ದರು. ಅವಂತೀಪುರದಲ್ಲಿ ಕಲಿಯುವದಾದ ಮೇಲೆ ಗೋವಿಂದರಾಯನು ಕೃಷ್ಣರಾಯನ ಮುಂದಿನ ಅಭ್ಯಾಸದ ಸಲುವಾಗಿ ಅವನನ್ನು ಮುಂಬಯಿಯಲ್ಲಿರುವ ರಾಮಕೃಷ್ಣಪಂತನ ಕಡೆಗೆ ಕಳಿಸಿದನು. ವೇಣುವೂ ಬಹಳ ಹಟ ಮಾಡಿದ್ದರಿಂದ, ರಾಮಕೃಷ್ಣಪಂತನು ಅವಳನ್ನು ಮುಂಬಯಿಗೆ ಕರಕೊಂಡು ಬಂದು, ಒಂದು ಕನ್ಯಾಶಾಲೆಯಲ್ಲಿ ವಿದ್ಯಾಭ್ಯಾಸಕ್ಕೆ ಇಟ್ಟನು. ವೇಣೂ ಕೃಷ್ಣರಾಯರ ಪರಸ್ಪರ ಪ್ರೇಮಾಧಿಕ್ಯವನ್ನು ಕಂಡು, ಮನೆಯೊಳಗಿನ ಹೆಂಗಸರೆಲ್ಲ ಇವರಿಬ್ಬರ ಲಗ್ನ ಮಾಡಬೇಕೆಂದು ನಿಶ್ಚಯಿಸಿದ್ದರು. ಲಗ್ನದ ವಿಷಯವು ಹೊರಟತೆಂದರೆ, ರಾಮಕೃಷ್ಣಪಂತನ ಹೆಂಡತಿಯು ಗೋವಿಂದರಾಯನ ಹೆಂಡತಿಯನ್ನು ಕುರಿತು—ನಾವು ಬಡವರು; ನೀವು ಶ್ರೀಮಂತರು. ನಮಗೂ ನಿಮಗೂ ಸಂಬಂಧವಿಲ್ಲೆಂದು ಅಂದ ಕೂಡಲೆ, ಗೋವಿಂದರಾಯನ ಹೆಂಡತಿಯು:—ಲಗ್ನದ ವಿಷಯಕ್ಕೆಲ್ಲ ಬಡತನವೂ, ಶ್ರೀಮಂತತನವೂ ಕಾರಣವಿಲ್ಲ. ವೇಣುವಿನಂಥ ಹುಡುಗಿಯು ಎಂಥ ದರಿದ್ರರ ಹೊಟ್ಟೆಯಲ್ಲಿ ಹುಟ್ಟಿದವಳಾದರೂ, ನಾವು ಅವಳನ್ನೇ ನಮ್ಮ ಕೃಷ್ಣರಾಯನಿಗೆ ಹೆಂಡತಿಯನ್ನಾಗಿ ಮಾಡುವದು! ಈ ಪ್ರಕಾರ ಹೆಂಗಸರು ತಮ್ಮತಮ್ಮೊಳಗೆ ಲಗ್ನದ ವಿಷಯವಾಗಿ ಯಾವಾಗಲೂ ಚರ್ಚೆಯನ್ನು ಮಾಡುತ್ತಿದ್ದರು. ರಾಮಕೃಷ್ಣಪಂತ ಗೋವಿಂದರಾಯರ ಅಪೇಕ್ಷೆಯೂದರೂ ತಂತಮ್ಮ ಹೆಂಡರಂತೆಯೇ ಇತ್ತು. ವೇಣೂ-ಕೃಷ್ಣರಾಯರಿಗೆ ಲಗ್ನವೆಂದರೇನೆಂಬುವದು ಗೊತ್ತಿದ್ದಿಲ್ಲ. ಅವರಿಬ್ಬರು ಕೂಡಿ ಆಡುತ್ತಿದ್ದರು, ಪ್ರಸಂಗಾತ ಇಬ್ಬರು ಹೊಡೆದಾಡುತ್ತಿದ್ದರು, ಇಬ್ಬರು ಅಳುತ್ತಿದ್ದರು, ಗಂಡ ಹೆಂಡರ ಕಲ್ಪನೆಯೇ ಅವರಿಗೆ ಇದ್ದಿಲ್ಲ. ಕ್ರಮಕ್ರಮೇಣ ಕೃಷ್ಣರಾಯನಿಗೆ ಹನ್ನೆರಡು ವರ್ಷಗಳು ತುಂಬಿದವು. ವೇಣುವಿಗೆ ಒಂಭತ್ತು ವರ್ಷಗಳು ತುಂಬಿದವು. ಆಗ ರಾಮಕೃಷ್ಣಪಂತನಿಗೆ ಅವಳ ಲಗ್ನದ ವಿಷಯವಾಗಿ ಆಲೋಚನೆಯು ಹುಟ್ಟಿತು. ಅದಕ್ಕಾಗಿ ಅವನು ಅವಂತೀಪುರಕ್ಕೆ ಬಂದು ಗೋವಿಂದರಾಯನ ಸಂಗಡ ಲಗ್ನದ ವಿಷಯವನ್ನು ತೆಗೆದನು.

ಗೋವಿಂದರಾವ:—ರಾಮಕೃಷ್ಣಪಂತ, ಲಗ್ನದ ಸಂಬಂಧವಾಗಿ ಇಷ್ಟು ಆತುರವು ಕಾರಣವಿಲ್ಲ. ಕೃಷ್ಣರಾಯನಿಗೆ ಇನ್ನೂ ಹದಿಮೂರು

ವರ್ಷ ಮೊದಲು ಆಗ್ಗಿಲ್ಲ. ಅವನ ವಿದ್ಯಾಭ್ಯಾಸವಾದರೂ ಇನ್ನೂ ಮುಗಿದಿಲ್ಲ. ಅದರಲ್ಲಿ ಈಗಿನ ಸ್ಥಿತಿಯು ಬಹಳ ಚಮತ್ಕಾರವಾದದ್ದದೆ. ಸಾಧ್ಯವಾದಷ್ಟು ತಡಮಾಡಿ ಲಗ್ನ ಮಾಡುವದು ವಿಹಿತವು. ಬಾಲವಿವಾಹದ ಭಯಂಕರ ರೂಢಿಯಿಂದ ನಮ್ಮ ದೇಶವು ಎಷ್ಟು ಅವನತಸ್ಥಿತಿಗೆ ಬಂದಿರುತ್ತದೆಂಬುವದು ನಿಮಗೂ ಗೊತ್ತದೆ.

ರಾಮಕೃಷ್ಣಪಂತ:—ಗೋವಿಂದರಾವ, ವೇಣುವಿಗೆ ಒಂಭತ್ತು ವರ್ಷ ತುಂಬಿದವು. ಜನರು "ಇಷ್ಟು ದೊಡ್ಡ ಹುಡುಗೆಯಾದರೂ ಇನ್ನೂ ಲಗ್ನ ಮಾಡಲಿಲ್ಲ" ಎಂಬದಾಗಿ ಆಡಿ ತೋರಿಸುತ್ತಾರೆ.

ಗೋವಿಂದ:— ಜನರ ನಿಂದ್ಯೆಗೆ ಹೆದರಿ, ಸಂಕಟದಲ್ಲಿ ಬೀಳುವದು ಕೇವಲ ಹುಚ್ಚತನವಾಗಿದೆ. ಜನರ ಬಾಯನ್ನು ಹಿಡಿಯುವವರು ಯಾರು? ಕೆಲವರು ಹಾಗೆ ಅನ್ನುವರು–ಕೆಲವರು ಹೀಗೆ ಅನ್ನುವರು. ಮುಖ್ಯವಾಗಿ ನಮಗೆ ಹಿತವಾಗುವಂಥ ಕೆಲಸವನ್ನು ಮಾಡಿದರಾಯಿತು. ನಮ್ಮ ಒಳಿತು ಹೀನಗಳಿಗೆ ಅನ್ಯರು ಯಾವ ರೀತಿಯಿಂದಲೂ ಜವಾಬದಾರರಿರುವದಿಲ್ಲ, ಜವಾಬದಾರಿಯಿಲ್ಲದವರ ಜಿಹ್ವಾಯಂತ್ರದ ಗತಿಯು ನಿಯಂತ್ರಿತವಾಗಿರುವದಿಲ್ಲ. ನಿಮ್ಮ ಮಗಳನ್ನು ನಿಶ್ಚಯವಾಗಿ ನನ್ನ ಮಗನಿಗೆ ಮಾಡಿಕೊಳ್ಳುತ್ತೇನೆ. ನೀವು ಬೇರೆ ಸಂಶಯವನ್ನು ಹಚ್ಚಿಕೊಳ್ಳಬೇಡಿರಿ. ತಡಮಾಡಿ ಲಗ್ನಮಾಡಬೇಕೆಂದು ನನ್ನ ಮೂಲೋದ್ದೇಶವಿರುತ್ತದೆ. ಲಗ್ನವನ್ನೇನೋ ಮಾಡಿದೆವು. ಆದರೆ ನಾಳಿನ ದಿನವೇ ದುರ್ದೆಸೆಯಿಂದ ಕೃಷ್ಣರಾಯನ ಜೀವ ಘಾತವಾದರೆ, ವೇಣುವಿನ ಜನ್ಮಸಾರ್ಥಕ್ಯವಾಗುವದಿಲ್ಲ.

ರಾಮಕೃಷ್ಣಪಂತ:— ತಡವಾಗಿ ಲಗ್ನಮಾಡುವದರಿಂದ ಅಂಥ ದುರ್ಘಟ ಪ್ರಸಂಗಗಳು ಒದಗುವದಿಲ್ಲವೆನ್ನುವದಾದರೂ ಯಾತರ ಮೇಲಿಂದ? ಮುಖ್ಯವಾಗಿ ಯಾವದಕ್ಕಾದರೂ ಈಶ್ವರೀ-ಸೂತ್ರವೇ ಕಾರಣವಾಗಿದೆ.

ಗೋವಿಂದ:— ನೀವನ್ನುವದೆಲ್ಲ ನಿಜವು. ಸ್ತ್ರೀಯರಲ್ಲಿ ಗರ್ಭಧಾರಣ ಶಕ್ತಿಯು ಬಂದಾಗ್ಗೆ ಲಗ್ನಮಾಡಿದರೆ, ಸಂತತಿಯಾಗಲಿಕ್ಕೆ ಮಾರ್ಗವಾಗುವದು. ಸಂತತಿಯಾದ ಮೇಲೆ ವೈಧವ್ಯವು ಪ್ರಾಪ್ತವಾದರೂ, ಅಷ್ಟು ಜಡವಾಗಿ ತೋರುವದಿಲ್ಲ.

ಈಪ್ರಕಾರ ಎಷ್ಟೋ ಹೊತ್ತು ರಾಮಕೃಷ್ಣಪಂತನಿಗೂ, ಗೋವಿಂದರಾಯರಿಗೂ ವಾದ-ವಿವಾದವಾಗಿ ಕಡೆಗೆ ಲಗ್ನವನ್ನು ನಿಂತು ಮಾಡಬೇಕೆಂದು ನಿಶ್ಚಯವಾಯಿತು. ವೇಣುವಿಗೆ ಹನ್ನೊಂದು ವರ್ಷ ತುಂಬಿ ಹನ್ನೆರಡರಲ್ಲಿ ಬಿದ್ದದರಿಂದ, ಅವಳು ವಿದ್ಯಾಭ್ಯಾಸವನ್ನು ಬಿಟ್ಟು ಅವಂತೀಪುರದಲ್ಲಿ ಬಂದಿದ್ದಳು. ವೇಣುವು ಮುಂಬಯಿಯಲ್ಲಿ ಇರುವತನಕ ಕೃಷ್ಣರಾಯನ ಸಹವಾಸದಲ್ಲಿದ್ದದರಿಂದ, ಈರ್ವರಲ್ಲಿ ಪರಸ್ಪರ ಪ್ರೇಮಭಾವವು ಉತ್ಪನ್ನವಾಗಿತ್ತು. ಸುಶಿಕ್ಷಣದಿಂದ ಉಭಯತರೂ ಉದಾತ್ತ-ವಿಚಾರಿಗಳಾಗಿದ್ದರು. ಅವರಿಗೆ ತಿಳಿಯಲಿಕ್ಕೆ ಹತ್ತಿದಂತೆ ಅವರಲ್ಲಿ ಒಂದುತರದ ರಹಸ್ಯವು ತಲೆದೋರಹತ್ತಿತು. ವೇಣುವು ಕೃಷ್ಣರಾಯನಿಗೆ ಯಾವದೊಂದು ಸಂಗತಿಯನ್ನು ತಿಳಿಸಬೇಕಾದರೆ, ಬಳ್ಳೇ ನಮ್ರಭಾವದಿಂದ ತಿಳಿಸುತ್ತಿದ್ದಳು. ಪೂರ್ಣದೃಷ್ಟಿಯಿಂದ ಕೃಷ್ಣರಾಯನ ಕಡೆಗೆ ನೋಡುವದು ಅನುಚಿತವೆಂದು ಭಾವಿಸಿ, ವೇಣುವು ಕಳ್ಳ ನೋಟದಿಂದ ಅವನನ್ನು ನೋಡಹತ್ತಿದಳು. ಕೃಷ್ಣರಾಯನೂ ವೇಣುವಿನೊಡನೆ ಬಳ್ಳೇ ಪ್ರೇಮದಿಂದ ನಡೆಯಹತ್ತಿದನು. ಅವನು ಈಗ ಅವಳನ್ನು ಮೊದಲಿನ ನೋಟದಿಂದ ನೋಡುತ್ತಿದ್ದಿಲ್ಲ. ಆಸ್ಥಿತಿಯಿಂದ ಇಬ್ಬರಲ್ಲಿ ಪರಸ್ಪರವಾಗಿ ಅಕಥನೀಯ-ಪ್ರೇಮವು ಬೆಳೆಯುತ್ತ ನಡೆಯಿತು. ಮತ್ತು ಅಗಣ್ಯವಾದ ಪವಿತ್ರ-ಪ್ರೇಮವು ಉತ್ಪನ್ನವಾಗಿ, ಇಬ್ಬರ ಹೃದಯ-ಪ್ರಾಂಗಣದ ಮೇಲೆ ಪ್ರಣಯ-ಕ್ರೀಡೆಯು ಪ್ರಾರಂಭವಾಯಿತು.

---

## ೪ನೆಯ ಪ್ರಕರಣ—ಅಧಿಕಾರ.

---

ಅಧಿಕಾರವು ಜಗತ್ತಿನಲ್ಲಿ ವಿಲಕ್ಷಣವಾದ ಒಂದು ವಸ್ತುವಾಗಿದೆ. ಇದು ಒಮ್ಮೊಮ್ಮೆ ಜಗತ್ತಿನ ಸರ್ವ ಅನರ್ಥಗಳಿಗೆ ಬೀಜಮಂತ್ರವಾಗಿದೆ. ಇದರಿಂದಲೇ ಜಗತ್ತಿನಲ್ಲಿ ಅನೇಕ ಘೋರಕೃತ್ಯಗಳು ಒದಗಿರುತ್ತವೆ. ಅಧಿಕಾರ ಸಾಮರ್ಥ್ಯಕ್ಕೆ ಸರಿಯಾದ ಸಾಮರ್ಥ್ಯವು ಇನ್ನೊಂದಿಲ್ಲ. ಅಧಿಕಾರವು ದೇವತೆಯಂತೆ ಅದೆ. ಈ ದೇವತೆಯು ಪ್ರಸನ್ನಳಾದವರಿಗೆ ಜಗತ್ತು ತೃಣಸಮಾನವಾಗಿ ಕಾಣುತ್ತದೆ. ಅವರಿಗೆ ಪಾಪ-ಪುಣ್ಯಗಳ ಭೀತಿಯು ಸ್ವಲಾ

ದರೂ ಇರುವದಿಲ್ಲ. ಅವರಿಗೆ ಯೋಗ್ಯಾಯೋಗ್ಯ ವಿಚಾರವೇ ಇರುವದಿಲ್ಲ. ಅವರು ಲೋಕಾಪವಾದಕ್ಕೆ ಅಂಜುವದಿಲ್ಲ. ತಾವೇ ಹೆಚ್ಚೆಂದು ಕೂಗುವ ದುರಭಿಮಾನವೇ ಅವರ ಸದ್ಗುಣವಾಗಿದೆ. ಯಾವ ರೀತಿಯಿಂದಲಾದರೂ ಜನರಿಂದ ದೊಡ್ಡವರೆನಿಸಿಕೊಳ್ಳುವದಕ್ಕಾಗಿ ಅವರು ವಿಶ್ವಪ್ರಯತ್ನವನ್ನು ಮಾಡುತ್ತಿರುತ್ತಾರೆ. ಅವರು ಭಯಂಕರವಾದ ಕೆಲಸವನ್ನು ಮಾಡಲಿಕ್ಕೂ ಹಿಂಜರಿಯುವದಿಲ್ಲ. ನಿಜವಾಗಿ ದುರಭಿಮಾನದಿಂದ ಅಂತ್ಯಕ್ಕೆ ಹಾನಿಯೇ ಆಗುತ್ತದೆ. ಈ ದುರ್ಗುಣದಿಂದ ಬುದ್ಧಿಯು ಭ್ರಷ್ಟವಾಗುತ್ತದೆ, ನೀತಿಯು ನಷ್ಟವಾಗುತ್ತದೆ. ಈ ದುರ್ಗುಣದಿಂದ ಕೋಟಿಗಟ್ಲೆ ರೂಪಾಯಿಗಳು ನಾಶವಾಗಿರುತ್ತವೆ, ದುರಭಿಮಾನದ ಜನರಿಂದ ಅನೇಕ ಸಜ್ಜನರ ಪ್ರಾಣಗಳು ಆಹುತಿಯಾಗಿರುತ್ತವೆ, ರಾಷ್ಟ್ರಗಳು ಹೀನಸ್ಥಿತಿಯನ್ನು ಹೊಂದಿರುತ್ತವೆ.

ನಮ್ಮ ಕಾದಂಬರಿಯಲ್ಲಿ ತೆಗೆದುಕೊಂಡ ಅವಂತೀಪುರವನ್ನು ಹಿಂದುಸ್ಥಾನದ ನಕಾಶದಲ್ಲಿ ಹುಡುಕಿದರೆ ಸಿಗುವಂತಿಲ್ಲ; ಸಿಗಲಿಕ್ಕೆ ಶಕ್ಯವೂ ಇಲ್ಲ; ಯಾಕಂದರೆ ಆ ಗ್ರಾಮವನ್ನು ನಾವು ನಮ್ಮ ಕಾಲ್ಪನಿಕ ಶಕ್ತಿಯಿಂದ ಸ್ಥಾಪನ ಮಾಡಿಸಿದ್ದೇವೆ. ಆದರೆ ಈ ಕಾದಂಬರಿಯಲ್ಲಿ ಇನ್ನುಳಿದ ಸಂಗತಿಗಳು ಅಕ್ಷರಶಃ ನಿಜವಿರುತ್ತವೆಂಬುವದನ್ನು ಮರೆಯ ಕೂಡದು. ಇಷ್ಟೇ ಅಲ್ಲ. ಕಾದಂಬರಿಯ ಕಥಾನಕದ ಪ್ರತಿಯೊಂದು ಹೆಸರಿನಲ್ಲಿ ಕೂಡ ಅದಲು-ಬದಲು ಮಾಡಿರುವದಿಲ್ಲ. ಪ್ರಕೃತ ಪ್ರಕರಣದ ಆರಂಭದಲ್ಲಿ ಅಧಿಕಾರ-ದುರಭಿಮಾನಗಳ ಸಲುವಾಗಿ ವಿವೇಚನ ಮಾಡಿರುತ್ತೇವೆ. ಅದು ಎಷ್ಟರಮಟ್ಟಿಗೆ ನಿಜವಿರುತ್ತದೆಂಬದನ್ನು ಈ ಪ್ರಕರಣದಲ್ಲಿ ವಾಚಕರಿಗೆ ಮನದಟ್ಟು ಮಾಡಿಕೊಡಬೇಕಾಗಿದೆ.

ಅವಂತೀಪುರವು ಜಹಾಗೀರದಾರ ಗ್ರಾಮವಾಗಿತ್ತು. ವಿಶ್ವನಾಥರಾಯನ ಪೂರ್ವಿಕರು ಪೇಶ್ವೆಯರ ಕಾಲದಲ್ಲಿ ಈ ಜಹಾಗೀರನ್ನು ಸಂಪಾದಿಸಿದ್ದರು. ಜಹಾಗೀರದಾರ ವಿಶ್ವನಾಥರಾಯನು ಒಬ್ಬ ಸ್ವತಂತ್ರ ಸಂಸ್ಥಾನಿಕನಂತಿದ್ದನು. ತನ್ನ ಇಚ್ಛೆಯ ಪ್ರಕಾರ ವಿಶ್ವನಾಥರಾಯನು ತನ್ನ ಸಂಸ್ಥಾನದ ಕಾರಭಾರವನ್ನು ಸಾಗಿಸುತ್ತಿದ್ದನು. ಬಹುತೇಕ ಜಹಾಗೀರದಾರ ಗ್ರಾಮದ ಎಲ್ಲ ಕಂದಾಯವನ್ನು ಸರಕಾರೀ ಅಧಿಕಾರಿಗಳು ವಸೂಲ ಮಾಡಿ, ಬಂದ ಹಣದಲ್ಲಿ ಕೆಲವು ಪಾಲನ್ನು ಜಹಾಗೀರದಾರರಿಗೆ ತಲುಪಿಸುತ್ತಿದ್ದರು. ಆದರೆ

ಅವಂತೀಪುರದ ಕಂದಾಯವನ್ನು ವಸೂಲ ಮಾಡುವ ಅಧಿಕಾರವು ವಿಶ್ವನಾಥರಾಯನ ಕಡೆಗೇ ಇತ್ತು. ಸರಕಾರಕ್ಕೆ ಚೌಥಾಯಿ ಮೊದಲಾದ ಹಕ್ಕು ಬಿಟ್ಟುಕೊಟ್ಟರೆ ಆಯಿತು. ಸರಕಾರವು ಯಾವ ರೀತಿಯಿಂದಲೂ ಜಹಾಗೀರದಾರನ ಕಾರಭಾರದಲ್ಲಿ ಕೈಹಾಕುತ್ತಿದ್ದಿಲ್ಲ. ಅದರಿಂದ ವಿಶ್ವನಾಥರಾಯನಿಗೆ ಯಾರ ಅಂಜಿಕೆಯೂ ಇದ್ದಿಲ್ಲ. ಅವನು ಬಡ ಜನರನ್ನು ಬಲಾತ್ಕಾರದಿಂದ ನಡೆಸಿಕೊಳ್ಳುತ್ತಿದ್ದನು. ಮೊದಲು ಅವಂತೀಪುರದಲ್ಲಿ ಜಮೀನದಾರರ ಸಂಖ್ಯೆಯು ಕಡಿಮೆಯಿದ್ದದರಿಂದ, ಅಲ್ಲಿಯ ಜನರು ಸುಖ-ಸಂಪತ್ತುಗಳಲ್ಲಿ ಮಿಗಿಲಾಗಿದ್ದರು; ಆದರೆ ವಿಶ್ವನಾಥರಾಯನ ಕೈಯಲ್ಲಿ ಅಧಿಕಾರ ಸೂತ್ರವು ಬಂದ ಕೂಡಲೆ ಅವನು ಖಾಲಸಾ ಗ್ರಾಮದಂತೆ ಅವಂತೀಪುರದಲ್ಲಿ ಜಮೀನದಾರರನ್ನು ಹೆಚ್ಚಿಸುವ ಪ್ರಯತ್ನ ಮಾಡಹತ್ತಿದನು. ಇದರಿಂದ ಪ್ರಜೆಗಳಿಗೆ ಬಹಳ ಅಸಂತೋಷವಾಯಿತು. ಅವರು ಕಂದಾಯವನ್ನು ಕೊಡಲಿಕ್ಕೆ ಅಸಮ್ಮತಿ ತೋರಿಸಿದರೂ, ವಿಶ್ವನಾಥರಾಯನು ಅಧಿಕಾರ ಪ್ರಾಬಲ್ಯದಿಂದ ಎಲ್ಲ ಕಂಧಾಯವನ್ನು ವಸೂಲು ಮಾಡಿದನು. ಅದರಿಂದ ಪ್ರಜೆಗಳೆಲ್ಲ ಅಸಂತುಷ್ಟರಾಗಿ ಸರಕಾರಕ್ಕೆ ತಮ್ಮ ಮನೋಭಿಪ್ರಾಯವನ್ನು ಅರಿಕೆ ಮಾಡಿಕೊಂಡರು. ಆದರೆ ಸರಕಾರದಿಂದ ಯಾವತರದ ವ್ಯವಸ್ಥೆಯಾಗಲಿಕ್ಕೂ ಮಾರ್ಗವಿದ್ದಿಲ್ಲ. ಯಾಕಂದರೆ ವಿಶ್ವನಾಥರಾಯನು ಸ್ವತಂತ್ರ ಸಂಸ್ಥಾನಿಕನು! ಇದಲ್ಲದೆ ವಿಶ್ವನಾಥರಾಯನು ಎಷ್ಟೋ ದುಡ್ಡು ಕೊಟ್ಟು ಹೋಟ್ಸು ಹಾಕಿಸಿಕೊಂಡು ಆನರರೀ ಮ್ಯಾಜಿಸ್ಟ್ರೇಟ ಅಧಿಕಾರವನ್ನು ಸಂಪಾದಿಸಿಕೊಂಡಿದ್ದನು. ನ್ಯಾಯದೇವತೆಯು ಅವನ ಮನೆಯಲ್ಲಿ ಮಾರ ತೆಗೆದುಕೊಂಡ ಗುಲಾಮತಿಯಂತೆ ಇದ್ದಳು. ಅವಳು ಒಮ್ಮೊಮ್ಮೆ ಧನಸಂಪಾದನವನ್ನೂ ಮಾಡಿಕೊಡುತ್ತಿದ್ದಳು. ವಿಶ್ವನಾಥರಾಯನ ಕೈಯಲ್ಲಿ ಸಿಕ್ಕ ಆನರರೀ ಮ್ಯಾಜಿಸ್ಟ್ರೇಟ ಅಧಿಕಾರವು ಮಂಗನ ಕೈಯಲ್ಲಿ ಸಿಕ್ಕ ಮಾಣಿಕ್ಯದಂತಿತ್ತು.

ಗ್ರಾಮದ ಜನರು ವಿಶ್ವನಾಥರಾಯನ ಅಧಿಕಾರಕ್ಕೆ ಗಡಗಡ ನಡುಗುತ್ತಿದ್ದರು. ಅವನ ಆಜ್ಞೆಯನ್ನು ಯಾರೂ ಉಲ್ಲಂಘನೆ ಮಾಡುತ್ತಿದ್ದಿಲ್ಲ. ಅವನ ವಿರೋಧವಾಗಿ ಮಾತಾಡಲಿಕ್ಕೆ ಯಾರಿಗೂ ಧೈರ್ಯವಿದ್ದಿಲ್ಲ. ಅವನಿಗೆ ಆಗದ ಕಾರ್ಯವನ್ನು ಮಾಡಲಿಕ್ಕೆ ಯಾರಿಗೂ ಸಾಮರ್ಥ್ಯವಿದ್ದಿಲ್ಲ. ವಿಶ್ವನಾಥರಾಯನ ನಿಲುವಿಕೆ ಎತ್ತರವಾದದ್ದು; ಮೈಕಟ್ಟು ದಪ್ಪವಾದದ್ದು; ಮೈಬ

ಣ್ಣವು ಅಚ್ಚ ಕಪ್ಪುಬಣ್ಣದ್ದು; ಕಣ್ಣುಗಳು ದೊಡ್ಡವಾಗಿದ್ದು, ಸಿಟ್ಟಿನಲ್ಲಿ ಬೆಂಕಿಗಿಂತ ಕೆಂಪಾಗುತ್ತಿದ್ದವು. ಅವನ ಆಚರಣೆಯು ಆಶ್ಚರ್ಯಕಾರಕ ವಾದದ್ದಿತ್ತು. ಪ್ರತಿನಿತ್ಯ ಎದ್ದ ಕೂಡಲೆ ಪ್ರಾತರ್ವಿಧಿಯನ್ನು ತೀರಿಸಿಕೊಂಡ ವನೇ ಗ್ರಾಮದಲ್ಲಿ ಪ್ರಸಿದ್ಧವಾಗಿದ್ದ ಅಲಕೇಶ್ವರ ದೇವಾಲಯಕ್ಕೆ ಹೋಗಿ ಶ್ರೀಶಂಕರನ ಭಜನೆಯನ್ನು ಮಾಡುತ್ತಿದ್ದನು. ವಿಶ್ವನಾಥರಾಯನ ಮನೆಯಲ್ಲಿ ಅವನ ಹೆಂಡತಿಯಾದ ರಾಧಾಬಾಯಿಯೂ, ಅವನ ಮಗನಾದ ಧೋಂಡೀ ರಾಜನೂ, ಸೊಸೆಯಾದ ಯಮುನೆಯೂ. ರಾಧಾಬಾಯಿಯ ತಮ್ಮನಾದ ಮಾಧವರಾಯನೂ ಅಂತೂ ವಿಶ್ವನಾಥರಾಯನ ಸಹಿತ ಐವರಿದ್ದರು. ಈ ಸರ್ವ ಜನರ ಸ್ವಭಾವ ಮೊದಲಾದವುಗಳು ಪ್ರಸಂಗಾನುಸಾರ ವಾಚಕರ ನಿದರ್ಶನಕ್ಕೆ ಬಂದೇ ಬರುತ್ತವೆ.

ಮಾಧವರಾಯನು ಮೊದಲು ಬಹಳ ಹೀನಸ್ಥಿತಿಯವನು. ಇದಲ್ಲದೆ ಅವನ ಮನೆತನದ ಸಲುವಾಗಿ ಜನರ ಮತವು ಬಹಳ ನೀಚತರದ್ದಿತ್ತು. ಮಾಧವರಾಯನು ರಾಧಾಬಾಯಿಯ ಬೆನ್ನಹಿಂದೆ ಹುಟ್ಟಿದ ತಮ್ಮನು. ಇವ ರೀರ್ವರ ತಂದೆಯು ಇವರ ಬಾಲ್ಯದಲ್ಲಿಯೇ ತೀರಿಕೊಂಡಿದ್ದನು. ಆದ್ದರಿಂದ ಇವರ ತಾಯಿಯು ದುರ್ವ್ಯಾಪಾರಗಳಿಂದ ಧನಸಂಗ್ರಹ ಮಾಡಿಕೊಂಡು, ಇವರ ಪಾಲನ ಮಾಡಿದ್ದಳು. ರಾಧಾಬಾಯಿಯು ತನ್ನ ತಾಯಿಯಂತೆ ಸುಂ ದರಿಯಿದ್ದಳು. ಮಾಧವರಾಯನ ರಚನೆಯ ವೇಳೆಯತ ಬ್ರಹ್ಮನು ಪರಿಶ್ರಮ ಮಾಡದ್ದರಿಂದ, ಅವನು ಅಸಡ್ಡಾಳವಾದ ಕಬ್ಬಿಣದ ಗೊಂಬೆಯಂತೆ ಕಾಣಿ ಸುತ್ತಿದ್ದನು. ರಾಧಾಬಾಯಿಯು ಲಗ್ನ ವಯಸ್ಕಳಾದ ಕೂಡಲೆ ಎಷ್ಟೋ ಮು ಮುಕ್ಷುಗಳು ಅವಳನ್ನು ಲಗ್ನಮಾಡಿಕೊಳ್ಳಬೇಕೆಂದು, ಅವಳ ತಾಯಿ ಯ ಕಡೆಗೆ ದುಡ್ಡಿನ ಚೀಲವನ್ನು ಹೊತ್ತುಕೊಂಡು ಬರಹತ್ತಿದರು. ಇಷ್ಟ ರಲ್ಲಿ ಜಹಾಗೀರದಾರ ವಿಶ್ವನಾಥರಾಯನ ಪ್ರಥಮ-ಪತ್ನಿಯು ಮೃತಪಟ್ಟದ್ದ ರಿಂದ, ಅವನ ಮನಸ್ಸು ರಾಧಾಬಾಯಿಯ ಕಡೆಗೆ ಹೊರಳಿತು. ವಿಶ್ವನಾಥ ರಾಯನ ಪ್ರಯತ್ನವು ಎಂದೂ ಶೂನ್ಯವಾಗುವ ಸಂಭವವಿಲ್ಲದ್ದರಿಂದ ಅವನು ಮೊದಲಿನ ಹೆಂಡತಿಯನ್ನು ಅಗಲಿದ ಹದಿಮೂರೇ ದಿನದಲ್ಲಿ ಪುನಃ ಸಪತ್ನಿಕ ನಾದನು. ರಾಧಾಬಾಯಿಯು ಒಮ್ಮೆಲೇ ಜಹಾಗೀರದಾರಿಣಿಯಾದಳು. ಮಾ ಧವರಾಯನು ತನ್ನ ತಾಯಿಯೊಡನೆ ಬಂದು ವಿಶ್ವನಾಥರಾಯನ ಮನೆಯಲ್ಲಿ

ಇರಹತ್ತಿದನು. ಅವರೆ ರಾಧಾಬಾಯಿಯ ತಾಯಿಗೆ ಮಗಳ ಸುಖ-ವೈಭವ ಗಳನ್ನು ನೋಡುವ ಸುಯೋಗವು ಒದಗಲಿಲ್ಲ. ರಾಧಾಬಾಯಿಯ ಲಗ್ನವಾದ ಸ್ವಲ್ಪ ದಿನದಲ್ಲಿಯೇ ರಾಧಾಬಾಯಿಯ ತಾಯಿಯು ಯಮಪುರಿಗೆ ಹೋದಳು.

ಮಾಧವರಾಯನ ಆಕೃತಿಯು ಬಹಳ ವಿಲಕ್ಷಣವಾದದ್ದಿತ್ತು. ಇದ್ದಲಿ ಯಂತೆ ಅವನ ಮೈಬಣ್ಣವಿದ್ದು, ಅದು ಮಿರಿಮಿರಿ ಮಿಂಚುತ್ತಿತ್ತು. ನಗು ವಾಗ ಅವನ ಹಲ್ಲುಗಳು ಕಾರ್ಮೋಡದ ಮಿಂಚಿನಂತೆ ಥಳಥಳಿಸುತ್ತಿದ್ದವು. ಅವನ ಹಲ್ಲುಗಳು ಬಳ್ಳೇ ದೊಡ್ಡವಾಗಿದ್ದು, ಅವುಗಳಲ್ಲಿ ಕೆಲವು ಹಲ್ಲುಗಳು ವೇಷಗಾರರು ಹಾಸ್ಯಕ್ಕಾಗಿ ಹಚ್ಚಿಕೊಂಡ ಹಲ್ಲುಗಳಂತೆ ಮುಂದೆ ಹಾಯ್ದಿದ್ದವು ಅವನ ತುಟಿಗಳು ನೇರಲ ಹಣ್ಣಿನಂತೆ ಕಪ್ಪಾಗಿದ್ದರಿಂದ ಹಾಸ್ಯಗಾರರ ಹಾಸ್ಯ ಕ್ಕೆ ಮತ್ತಿಷ್ಟು ಅನುಕೂಲವಾಗಿತ್ತು. ಮಾಧವರಾಯನ ವಿದ್ಯಾಭ್ಯಾಸವು ಅಕ ಟೋದಿಂದ ವಿಕಟೋ ಪರ್ಯಂತರವಾಗಿತ್ತು. ಐವತ್ತೊಂದು ಅಕ್ಷರಗಳ ವರ್ಣಮಾಲೆಯೊಂದನ್ನು ಬಿಟ್ಟು, ಮಿಕ್ಕ ಎಲ್ಲ ಅಕ್ಷರಗಳನ್ನು ಅವನು ಕಲಿ ತಿದ್ದನು. ಗಣಿತ-ವಿದ್ಯೆಯಲ್ಲಂತೂ ಅವನ ತಲೆಯು ಬಹಳ ಮುಂದಿತ್ತು. ಮಾತ್ರ ಯಾವತ್ತೂ ಸಂಖ್ಯೆಗಳು ಶೂನ್ಯರೂಪದಿಂದ ಇರಲಿಕ್ಕೆ ಬೇಕು. ಧೈರ್ಯವಿದ್ದವರು ಮಾಧವರಾಯನಿಗೆ ಅಕ್ಷರಶತ್ರುವೆಂದು ಕರೆಯುತ್ತಿದ್ದರು. ಮಿಕ್ಕವರೆಲ್ಲ ಮಾಧವರಾಯನನ್ನು ಬೃಹಸ್ಪತಿಯೆಂದು ಕರೆಯಬೇಕಾಗು ತ್ತಿತ್ತು. ಮಾಧವರಾಯನೆಂದರೆ ವಿಶ್ವನಾಥರಾಯನ ಹೆಂಡತಿಯ ತಮ್ಮನು, ಅಂದಮೇಲೆ ಅವನನ್ನು ಮನ್ನಿಸದಿರುವದು ದುರಾಪಸ್ತವಾಗಿತ್ತು. ಅವಂತೀ ಪುರದಲ್ಲಿ ವಿಶ್ವನಾಥರಾಯನಿಗೆ ಇದ್ದಷ್ಟು ಮಾನವು ಮಾಧವರಾಯನಿಗೂ ಇತ್ತು. ಯಾರು ಏನು ಮಾಡುತ್ತಾರೆ! ಅಧಿಕಾರ ಸಾಮರ್ಥ್ಯದ ಮುಂದೆ ಬುದ್ಧಿ ಸಾಮರ್ಥ್ಯದ ಆಟವು ನಡೆಯುವದಿಲ್ಲ!!

ರಾಮಕೃಷ್ಣಪಂತನು ಮುಂಬಯಿಯಿಂದ ಬಂದಿದ್ದಾನೆಂಬುವ ವಾರ್ತೆ ಯನ್ನು ಕೇಳಿ, ಒಂದು ದಿವಸ ವಿಶ್ವನಾಥರಾಯನು ಅವನ ಮನೆಗೆ ಬಂದನು. ರಾಮಕೃಷ್ಣಪಂತನು ಜಹಾಗೀರದಾರ ಸಾಹೇಬರೇ ಸ್ವತಃ ತನ್ನ ಮನೆಗೆ ಬರುವದನ್ನು ಕಂಡು, ಅವರ ಎದುರಿಗೆ ಹೋಗಿ ನಮಸ್ಕಾರ ಮಾಡಿ, ವಿನ ಯದಿಂದ ಮನೆಯೊಳಗೆ ಕರಕೊಂಡು ಬಂದು, ಪ್ರಶಸ್ತವಾದ ಗಾದಿಯ ಮೇಲೆ ಅವರನ್ನು ಕುಳ್ಳಿರಿಸಿದನು. ರಾಮಕೃಷ್ಣಪಂತನ ಮನೆಯಲ್ಲಿ ಎಲ್ರ

ಯಡಕಿಯ ಸಂಗ್ರಹವಿದ್ದಿಲ್ಲ. ಆಗ ಅವನು ಅಲ್ಲಿಯಷ್ಟು-ಇಲ್ಲಿಯಷ್ಟು ಇಸು ಕೊಂಡು ಬಂದು, ಅದನ್ನು ತಬಕದಲ್ಲಿ ಸಿದ್ಧಪಡಿಸಿ, ತಬಕವನ್ನು ವಿಶ್ವನಾಥರಾಯನ ಮುಂದೆ ಇಟ್ಟನು. ದೊಡ್ಡವರ ಮನೆಯಲ್ಲಿ ಚಹವನ್ನು ಕುಡಿಯುವ ಪರಿಪಾಠವಿರುತ್ತದೆಂದು ನೆನಿಸಿ, ರಾಮಕೃಷ್ಣಪಂತನು ತ್ವರೆಯಿಂದ ಚಹವನ್ನು ಸಿದ್ಧಮಾಡಿಕೊಂಡು ಬಂದು ಜಹಾಗೀರದಾರರ ಮುಂದೆ ಇಟ್ಟನು. ಆ ಚಹದ ಕಡೆಗೆ ನೋಡಿ ತಿರಸ್ಕಾರದಿಂದ ವಿಶ್ವನಾಥರಾಯನು:— ರಾಮಕೃಷ್ಣಪಂತ, ಆ ಚಹವನ್ನು ನಮ್ಮ ಮುಂದೆ ಇಡಬೇಡಿರಿ, ನೀವು ಮುಂಬಯಿಯ ಜನರೆಂದರೆ ಚಹದ ನಿಸ್ಸೀಮ ಭಕ್ತರು! ಆದರೆ ನಾವು ಅದನ್ನು ಕುಡಿಯುವದು ಹಾಗಿರಲಿ; ಅದರ ವಾಸನೆಯು ಕೂಡ ನಮಗೆ ಸೇರದು. ಎಂದಂದನು.

ವಿಶ್ವನಾಥರಾಯನ ಬೆಂಕಿಯಂಥ ಮಾತಿಗೆ ರಾಮಕೃಷ್ಣಪಂತನು ಏನೂ ಮಾತಾಡಲಿಲ್ಲ. ತಂದ ಚಹವನ್ನು ಬೇಗನೆ ಒಳಗೆ ಒಯ್ದಿಟ್ಟನು. ನಂತರ ವಿಶ್ವನಾಥರಾಯನಿಗೆ ಎಲೆಯಡಿಕೆಯನ್ನು ಮೆಲ್ಲಲಿಕ್ಕೆ ಹೇಳಿದನು. ಎಲೆಯಡಿಕೆಯು ಹಾಕಿಕೊಳ್ಳುವ ಕೆಲಸವಾದ ಮೇಲೆ ವಿಶ್ವನಾಥರಾಯನು, ರಾಮಕೃಷ್ಣಪಂತನ ಏರಿಕೆಯ ಸ್ಥಿತಿಯ ಬಗ್ಗೆ ಸಮಾಧಾನವನ್ನು ವ್ಯಕ್ತಪಡಿಸಿ, ಅದರೊಡನೆ ಸ್ವಲ್ಪ ಸ್ತುತಿಯನ್ನೂ ಮಾಡಿದನು. ಗೋವಿಂದರಾಯನ ಸಂಬಂಧವಾಗಿ ಕೆಲಹೊತ್ತು ವಾದ-ವಿವಾದವಾದ ಮೇಲೆ ವಿಶ್ವನಾಥರಾಯನು ನುಡಿದದ್ದೇನಂದರೆ— ರಾಮಕೃಷ್ಣಪಂತ, ನಮಗೆ ವೇಣುವಿನ ಟಿಪ್ಪಣಿಯು ಬೇಕಾಗಿದೆ. ಇನ್ನು ನೀವು ವೇಣುವನ್ನು ಈ ಸ್ಥಿತಿಯಿಂದ ಇಡುವದು ಭೂಷಣವಲ್ಲ. ನಿಮ್ಮ ವೇಣುವಿಗೆ ಸರಿಯಾದ ವರನನ್ನು ನಾನು ಆರಿಸಿಟ್ಟದ್ದೇನೆ. ಎಂದಂದನು.

ವಿಶ್ವನಾಥರಾಯನು ಯಾಕೆ ತನ್ನ ಮನೆಗೆ ಬಂದಿದ್ದಾನೆಂಬುವ ಬಗ್ಗೆ ರಾಮಕೃಷ್ಣಪಂತನಿಗೆ ಒಂದು ದೊಡ್ಡ ಆಲೋಚನೆಯು ಬಿದ್ದಿತ್ತು. ಆದರೆ ಮೇಲಿನ ಪ್ರಸ್ತಾವನೆಯ ಮೇಲಿಂದ ಅವನು ಬಂದ ಉದ್ದೇಶವನ್ನು ತಟ್ಟನೆ ಕಂಡು ಹಿಡಿದನು. ನಂತರ ಕೆಳಗೆ ಬರೆದಂತೆ ರಾಮಕೃಷ್ಣಪಂತ-ವಿಶ್ವನಾಥರಾಯರ ಸಂಭಾಷಣವು ನಡೆಯಿತು.

ರಾಮಕೃಷ್ಣಪಂತ:—(ನಮ್ರವಾಗಿ) ಟಿಪ್ಪಣಿಯನ್ನು ಕೊಡುವ ಭಾಗವು ಉಳಿದಿಲ್ಲ. ಯಾಕಂದರೆ, ಈ ಮೊದಲೇ ಗೋವಿಂದರಾಯರ ಕಡೆಗೆ ವೇಣುವಿನ ಟಿಪ್ಪಣಿಯನ್ನು ಕೊಟ್ಟದೆ. ಮತ್ತು ಲಗ್ನದ ನಿಶ್ಚಯವೂ ಆಗಿರುತ್ತದೆ. ಅನುಕೂಲಪ್ರಕಾರ ಲಗ್ನವನ್ನು ಮಾಡುವದೊಂದು ಉಳಿದಿರುತ್ತದೆ.'

ವಿಶ್ವನಾಥ:—ರಾಮಕೃಷ್ಣಪಂತ, ಇತ್ತ ಕಡೆಗೆ ನಿಮ್ಮ ಆಚಾರ-ವಿಚಾರಗಳೇ ಬದಲಾಗಿರುತ್ತವೆಂದು ಜನರನ್ನುವದು ಸುಳ್ಳಲ್ಲ. ಗೋವಿಂದ ರಾಯನು ಯಾರು—ನೀವು ಯಾರು? ನಿಮ್ಮ ಸೀಮೆಯಾವದು—ಅವನ ಸೀಮೆ ಯಾವದು? ಕಳ್ಳಲ್ಲ—ಬಳ್ಳಿಯಲ್ಲ, ಹತ್ತಿದವನಲ್ಲ—ಹೊಂದಿದವನಲ್ಲ, ಆಗುವವನಲ್ಲ—ಹೋಗುವವನಲ್ಲ. ಕುಲವು ಗೊತ್ತಿಲ್ಲ—ಗೋತ್ರವು ಗೊತ್ತಿಲ್ಲ. ಹೀಗಿದ್ದು ನೀವು ಗೋವಿಂದರಾಯನ ಮಗನಿಗೆ ನಿಮ್ಮ ಮಗಳನ್ನು ಕೊಟ್ಟು ಬಿಟ್ಟಿರುತ್ತೇನೆಂಬನ್ನುವದು ಹುಚ್ಚುತನದ ಮಾತಾಗಿದೆ. ಲಗ್ನವೆಂದರೆ ಆಯುಷ್ಯದ ಹೆಗ್ಗಟ್ಟರುತ್ತದೆ. ಆ ಸಂಬಂಧವಾಗಿ ಬಹಳ ವಿಚಾರಮಾಡಲಿಕ್ಕೆ ಬೇಕು. ನಾನು ಹುಡುಕಿಟ್ಟ ವರವು ನಮ್ಮ ಮನೆಯೊಳಗಿನದೇ ಅದೆ. ಮಗಳ ಜನ್ಮದ ಕಲ್ಯಾಣ ಮಾಡುವದು ತಂದೆಯ ಪವಿತ್ರ ಕರ್ತವ್ಯಕರ್ಮವಾಗಿದೆ.

ರಾಮಕೃಷ್ಣಪಂತ:—(ಶಾಂತವೃತ್ತಿಯಿಂದ) ಈಗ ಎರಡು ವರ್ಷದ ಪೂರ್ವದಲ್ಲಿ ಧೋಂಡೀರಾಜನ ಲಗ್ನವಾದಂತೆ ನನ್ನ ಧ್ಯಾನದಲ್ಲಿ ಅದೆ. ಹೀಗಿದ್ದು ವೇಣುವಿನ ಸಲುವಾಗಿ ಆಯ್ದಿಟ್ಟ ವರವಾದರೂ ಯಾವದು?

ವಿಶ್ವನಾಥ:—(ಗಂಭೀರವಾಗಿ) ನನ್ನ ಹೆಂಡತಿಯ ತಮ್ಮನಾದ ಮಾಧವರಾಯನೇ ಹುಡುಕಿಟ್ಟ ವರನು. ಅವನಿಗೆ ನಾನು ಕೊಡುತ್ತೇನೆ—ನಾನು ಕೊಡುತ್ತೇನೆ, ಎಂದು ಜನರು ಮನೆಗೆ ಬಂದು ಅಂಗಲಾಚಿ ಬೇಡಿಕೊಳ್ಳುತ್ತಾರೆ; ಆದರೆ ನಿಮ್ಮ ಮಗಳ ಕಲ್ಯಾಣ ಮಾಡಬೇಕೆಂದು ನನ್ನ ಮನಸ್ಸಿನಲ್ಲಿ ಇದ್ದದರಿಂದ ನಾನು ನಿಮ್ಮ ಕಡೆಗೆ ಬಂದೆನು.

ವಿಶ್ವನಾಥರಾಯನ ಮಾತನ್ನು ಕೇಳಿ, ರಾಮಕೃಷ್ಣಪಂತನ ಹೃದಯದಲ್ಲಿ ಒಮ್ಮೆಲೇ ಸಂತಾಪ, ಖೇದ, ಆಶ್ಚರ್ಯ, ಹಾಸ್ಯ ಮೊದಲಾದ ವಿಕಾರಗಳು ಹುಟ್ಟಿದವು. ಯಾಕಂದರೆ, ಮಾಧವರಾಯನ ಸ್ಥಿತಿ-ಗತಿಗಳನ್ನು ಅವ

ನು ಪೂರ್ಣವಾಗಿ ಅರಿತಿದ್ದನು. ಆದರೆ ಅವನು ಶಾಂತವೃತ್ತಿಯಿಂದ ಕೆಳಗೆ ಬರೆದಂತೆ ಮಾತಾಡಿದನು.

ರಾಮಕೃಷ್ಣಪಂತ:— ಕಾಕಾಸಾಹೇಬ, ವಚನಗೊಡುವ ತನಕ ನಮ್ಮಾಟವು. ವಚನವನ್ನು ಕೊಟ್ಟ ಮೇಲೆ ಬೇಕಾದಷ್ಟು ಲಾಭವಾದರೂ ಆ ಕಡೆಗೆ ದುರ್ಲಕ್ಷ ಮಾಡುವದು ಆರ್ಯವರ್ತನವಾಗಿದೆ! ಮಾಧವರಾಯ ನು ವಯಸ್ಸಾದವನು. ನನ್ನ ಮಗಳು ತೀರ ಅಲ್ಪ ವಯಸ್ಕಳು. ಕಾರಣ ಮಾಧವರಾಯನಿಗೆ ವಯಸ್ಸಾದ ಕನ್ಯೆಯನ್ನು ಹುಡುಕಿ ಮಾಡುವದು ಸ್ತುತ್ಯ ವಾದದ್ದು.

ವಿಶ್ವನಾಥ:—(ಸ್ವಲ್ಪ ಸಿಟ್ಟಿನಿಂದ) ವಯಸ್ಸಿನ ನೆವವನ್ನು ಹೇಳಲಿಕ್ಕೆ ಕಾರಣವಿಲ್ಲ. ನೀವು ನಿಮ್ಮ ಮಗಳನ್ನು ಕೊಡುವ ಅಪೇಕ್ಷೆಯುಳ್ಳವರಾಗಿ ದ್ದರೆ, ಆಗಲೆಂದನ್ನಿರಿ; ಇಲ್ಲವಾದರೆ ಕೊಡುವದಿಲ್ಲವಾಗಿ ಹೇಳಿರಿ. "ಬಂದ ದಾರಿಗೆ ಸುಂಕವಿಲ್ಲ" ಎಂಬಂತೆ ಹೇಗೆ ಬಂದೆನು ಹಾಗೆ ಹೋಗುತ್ತೇನೆ.

ರಾಮಕೃಷ್ಣಪಂತನ ಸರಳ ಪ್ರತ್ಯುತ್ತರವನ್ನು ಕೇಳಿ, ವಿಶ್ವನಾಥರಾಯ ನು ಒಂದು ತುಟಿ ಎರಡು ಮಾಡಲಿಲ್ಲ. ಅವನು ಮನೆಗೆ ಹೋಗುವದಕ್ಕೆ ಹೊರಟನು. ಶಿಷ್ಟಾಚಾರಪ್ರಕಾರ ರಾಮಕೃಷ್ಣಪಂತನು ಜಹಾಗೀರದಾರ ರನ್ನು ಬಾಗಿಲದ ವರೆಗೆ ಕಳಿಸಿದನು. ಮನೆಯ ಬಾಗಿಲನ್ನು ದಾಟಿದಾಗ್ಗೆ ವಿಶ್ವನಾಥರಾಯನು:—ಕೃಷ್ಣರಾಯನ ಸಂಗಡ ವೇಣುವಿನ ಲಗ್ನವು ಹೇಗೆ ಆಗುತ್ತದೆ, ನೋಡೋಣವೆಂದೆನ್ನುತ್ತ ಹೊರಟು ಹೋದನು.

ರಾಮಕೃಷ್ಣಪಂತನಿಗೆ ವಿಶ್ವನಾಥರಾಯನ ಮಾತಿನಿಂದ ದುಃಖವಾಗ ದಿದ್ದರೂ, ಮನಸ್ಸು ಚಂಚಲವಾದ್ದರಿಂದ ಕೂಡಲೆ ಅವನು ಗೋಪಿಂದರಾ ಯನ ಬಳಿಗೆ ಹೋಗಿ, ನಡೆದ ಯಾವತ್ತೂ ಸಂಗತಿಯನ್ನು ಅವನಿಗೆ ಹೇಳಿ ದನು. ಮತ್ತು ಲಗ್ನವನ್ನು ಆದಷ್ಟು ಬೇಗನೇ ಮಾಡುವದು ಹಿತವಾದದ್ದೆಂ ದು ಹೇಳಿದನು. ಎಷ್ಟೋ ಹೊತ್ತು ತರ್ಕವಿತರ್ಕವಾಗಿ ಕಡೆಗೆ ಚೈತ್ರ ಅಥ ವಾ ವೈಶಾಖ ಮಾಸದಲ್ಲಿ ಒಂದು ಸುಮುಹೂರ್ತವನ್ನು ತೆಗೆದು ಅಂದು ಲಗ್ನ ವನ್ನು ನೆರವೇರಿಸಬೇಕೆಂದು ನಿಶ್ಚಯವಾಯಿತು.

ಈ ಮಾತು ಜರುಗಿ ಸ್ವಲ್ಪ ದಿವಸವಾದ ಮೇಲೆ ಆಪ್ತಸ್ವಕೀಯರನ್ನು ಕರೆಯಿಸುವ ಯೋಚನೆ ಮಾಡುವದಕ್ಕೂ, ಲಗ್ನದ ತಿಥಿಯನ್ನು ನಿರ್ಣಯಿಸ್ಸ

ವದಕ್ಕೂ ಗೋವಿಂದರಾಯನು, ರಾಮಕೃಷ್ಣಪಂತನನ್ನೂ, ತನ್ನ ಕೆಲವರು ಮಿತ್ರರನ್ನೂ ಮುಂಬಯಿಯಿಂದ ಕರೆಸಿಕೊಂಡನು. ನೆರೆದ ಜನರು ವೈಶಾಖಶುದ್ಧ ಪಂಚಮಿಯ ದಿವಸ ಬಾರಾ ಮುಹೂರ್ತವನ್ನು ಮಾಡಬೇಕೆಂದು ನಿಶ್ಚಯಿಸಿದರು. ಮನೆಯ ಹೆಂಗಸರಿಗೂ ಆತಿಥಿಯು ಅನುಕೂಲವಾಗಿ ತೋರಿತು. ಲಗ್ನದ ತಿಥಿಯು ನಿರ್ಣಯವಾಗುವದೊಂದೇ ತಡವು; ಉಭಯ ಪಕ್ಷದವರೂ ಬಳ್ಳೇ ತ್ವರೆಯಿಂದ ಲಗ್ನದ ಸಿದ್ಧತೆಯನ್ನು ಮಾಡಹತ್ತಿದರು. ಇಂದಿಗೆ ವೈಶಾಖಶುದ್ಧ ಪಂಚಮಿಯು ಸಮೀಪ-ಸಮೀಪವೆಂದರೆ ನಾಲ್ಕು ತಿಂಗಳಿತ್ತು. ಇನ್ನೂ ನಾಲ್ಕು ತಿಂಗಳ ಅವಧಿಯು ಲಗ್ನದ ತಿಥಿಯನ್ನು ನಿರ್ಣಯಿಸಿದ್ದರ ಉದ್ದೇಶವೇನಿದ್ದೀತೆಂಬ ಬಗ್ಗೆ ವಾಚಕರ ಮನಸ್ಸಿನಲ್ಲಿ ವಿಚಾರ-ತರಂಗಗಳು ಹುಟ್ಟಿರಬಹುದು. ಇದಕ್ಕೆ ಅನೇಕ ಕಾರಣಗಳಿದ್ದವು. (೧) ಲಗ್ನಕ್ಕೆ ಬರುವ ಜನರಲ್ಲಿ ಕೆಲವರು ಸರಕಾರೀ ನವಕರರಿದ್ದು, ಅವರು ಎರಡು ಮೂರು ತಿಂಗಳು ಪೂರ್ವದಲ್ಲಿಯೇ ರಜೆಯ ಬಗ್ಗೆ ಪ್ರಯತ್ನ ಮಾಡಬೇಕಾಗಿತ್ತು. (೨) ಎರಡೂ ಕಡೆಯ ಲಗ್ನದ ಸಿದ್ಧತೆಯನ್ನು ಮಾಡುವವರು ಸ್ವಲ್ಪ ಜನರಿದ್ದರು. (೩) ಮುಖ್ಯ ಕಾರಣ ಕೃಷ್ಣರಾಯನಿಗೆ ವೈಶಾಖದ ಹೊರ್ತು ಕಾಲೇಜದಿಂದ ಬರಲಿಕ್ಕೆ ಅನುಕೂಲವಿದ್ದಿಲ್ಲ. ಈ ಮೊದಲಾದ ಕಾರಣಗಳಿಂದ ವೈಶಾಖಶುದ್ಧ ಪಂಚಮಿ ತಿಥಿಯನ್ನು ನಿರ್ಣಯಿಸಿತ್ತು. ಈ ವೇಳೆಯಲ್ಲಿ ಗೋವಿಂದರಾವ-ರಾಮಕೃಷ್ಣಪಂತರ ಮನೆಯಲ್ಲಿ ಉತ್ಸಾಹದ ಸಾಮ್ರಾಜ್ಯವು ಪಸರಿಸಿತ್ತು. ಎಲ್ಲ ಕಡೆಗೆ ಆನಂದವೇ ಆನಂದವಾಗಿತ್ತು. ಸರ್ವರ ಮುಖಕಮಲಗಳು ಯಾವಾಗಲೂ ಅರಳಿಕೊಂಡೇ ಇರುತ್ತಿದ್ದವು. ರಾಮಕೃಷ್ಣಪಂತನ ಹೆಂಡತಿಯೂ, ಗೋವಿಂದರಾಯನ ಹೆಂಡತಿಯೂ ಪರಸ್ಪರ ಸಹಾಯ ಮಾಡುತ್ತ ಲಗ್ನದ ಸಿದ್ಧತೆಯನ್ನು ನಡೆಸಿದ್ದರು. ಅವರು ಲಗ್ನಕಾಲದಲ್ಲಿ "ಯಾವದೊಂದು ಬಡವೆಯ ಸಲುವಾಗಿ ಹಟ ಹಿಡಿದು ಕೊಡ್ರುವದಿಲ್ಲ. ಒಂದು ಹೆಚ್ಚೇನು-ಒಂದು ಕಡಿಮೇನು ಸುಧಾರಿಸಿಕೊಂಡು ಹೋಗುವದು ಉತ್ತಮವಾದದ್ದು" ಎಂಬದಾಗಿ ಪೂರ್ವಾಲೋಚನೆ ಮಾಡುತ್ತಿದ್ದರು. ಗಂಡಸರು ಒತ್ತಟ್ಟಿಗೆ ನೆರೆದರೆಂದರೆ "ಮನಸ್ಸಿಗೆ ಬಂದಂತೆ ದುಡ್ಡು ಖರ್ಚು ಮಾಡಬಾರದು, ಸುಮ್ಮನೆ ನಾಚು ಬೆಂಡುಬಾಜಿಗೆ ದ್ರವ್ಯವನ್ನು ಹಾಳು ಮಾಡಬಾರದು. ಅನಾಥ ಬಾಲಿಕಾ

ಶ್ರಮ ಮೊದಲಾದ ಸಂಸ್ಥೆಗಳಿಗೆ ಎಷ್ಟೋ ದುಡ್ಡಿನ ಸಹಾಯ ಮಾಡಬ[illegible] ಎಂಬವಾಗಿ ಆಲೋಚಿಸುತ್ತಿದ್ದರು. ಯಾವಾಗಲೂ ಆ ಉಭಯತರ ವ[illegible] ಯಲ್ಲಿ ಲಗ್ನದ ಮಾತೇ ಮಾತಾಗಿತ್ತು.

ವೇಣುವು ಕೂಡ ಲಗ್ನದ ಗಡಬಡಿಯಲ್ಲಿ ಮುಳುಗಿದ್ದಳು. ಸಣ್ಣ ಹುಡುಗರಂತೆ ಲಗ್ನವೆಂದರೆ ಒಂದು ಪ್ರಕಾರದ ವಿನೋದವೆಂದು ವೇಣುವಿಗೆ ತೋರುತ್ತಿದ್ದಿಲ್ಲ. ಸಣ್ಣ ಹುಡುಗರಿಗೇಕೆ? ಎಷ್ಟೋ ದೊಡ್ಡ ದೊಡ್ಡ ಜನ ರಿಗೆ ಲಗ್ನವೆಂದರೆ ಒಂದು ಪ್ರಕಾರದ ವಿನೋದವೆಂಬ ಕಲ್ಪನೆಯಿರುತ್ತದೆ. ಲಗ್ನದಲ್ಲಿ ತರತರದ ವಾದ್ಯಗಳು ಮೊಳಗುತ್ತಿರುತ್ತವೆ, ಸುಂದರವಾದ ಮಂಟಪವು ವಿರಾಜಮಾನವಾಗಿರುತ್ತದೆ, ಆಕಾಶ ಮಂಡಲದಲ್ಲಿಯ ನಕ್ಷತ್ರ ಗಳಂತೆ ಲಗ್ನಮಂಟಪದಲ್ಲಿಯು ದೀವಿಗೆಗಳು ಲಕಲಕ ಹೊಳೆಯುತ್ತಿರುತ್ತವೆ ಜನರು ದಿನಕ್ಕಿಂತ ಅಮೌಲ್ಯವಾದ ವಸ್ತ್ರಾಲಂಕಾರಗಳನ್ನು ಹಾಕಿಕೊಂಡು ಮೆರೆಯುತ್ತಿರುತ್ತಾರೆ, ಪಂಚಪಕ್ವಾನ್ನದ ವಾಸನೆಯು ಎಲ್ಲ ಕಡೆಗೂ ಪಸರಿ ಸಿರುತ್ತದೆ, ಊಟದ ಪಂಕ್ತಿಗಳು ಒಂದರಹಿಂದೊಂದು ನಡೆದೇ ಇರುತ್ತವೆ. ವಿವಾಹ ಮಂಟಪದಲ್ಲಿ ಸುಂದರ ವಾರಾಂಗನೆಯರ ಚಿತ್ತಾಕರ್ಷಕವಾದ ಮಧುರ ಸ್ವರದ ಗಾಯನವು ಕೇಳುವವರ ಕರ್ಣಾನಂದವನ್ನು ಮಾಡುತ್ತಿರು ತ್ತದೆ. ಇಂಥ ಆನಂದದಾಯಕ ಸಂಗತಿಗಳಿಂದ ಒಡಗೂಡಿದ್ದೇ ವಿವಾಹವು, ಅದರ ಹೆಸರು ಲಗ್ನ, ಹೀಗೆ ಎಷ್ಟೋ ಜನರ ಭಾವನೆಯಿರುತ್ತದೆ. ಆದರೆ ವೇಣುವಿನ ಕಲ್ಪನೆಯು ಬೇರೆ ಪ್ರಕಾರದ್ದಿತ್ತು. ಅವಳ ವಿಚಾರವು ತೀರ ಭಿನ್ನವಾಗಿತ್ತು. ಅತ್ತೆ-ಮಾವ-ಗಂಡರ ಸಂಗಡ ತನ್ನ ಕರ್ತವ್ಯಕರ್ಮವು ಯಾವದು, ಪತಿಯೆಂದರೆ ದೇವರು ಎಂಬ ಭಾವನೆಯು ಹುಟ್ಟಬೇಕಾದರೆ, ಸ್ತ್ರೀಯರಿಗೆ ಯಾವ ಜ್ಞಾನವಿರಬೇಕು, ಅತ್ತೆ-ಮಾವಂದಿರ ಸೇವೆಯನ್ನು ಮಾಡುವದರ ಉದ್ದೇಶವೇನು, ಮತ್ತು ಅವರ ಅಪ್ಪಣೆಯನ್ನು ಶಿರಸಾವಹಿಸಿ ಮಾನ್ಯ ಮಾಡುವ ಕಾರಣವೇನು, ಸಣ್ಣ ಸಣ್ಣ ಹುಡುಗರ ವಿಷಯವಾಗಿ ಹಡೆದ ತಾಯಿಯ ಜವಾಬದಾರಿಯು ಎಷ್ಟರಮಟ್ಟಿಗೆ ಇರುತ್ತದೆ, ಆ ಸಂ ಬಂಧವಾದ ಜ್ಞಾನವಿರುವದು ಸ್ತ್ರೀಯರಿಗೆ ಎಷ್ಟು ಭೂಷಣವಾಗಿದೆ, ಮನೆಯ ಲ್ಲಿ ಭಾವ, ಮೈದುನ, ನಾದಿನಿ, ನೆಗೆಣ್ಣಿ ಮೊದಲಾದವರಿದ್ದರೆ ಅವರ ಕೂಡ ಹೇಗೆ ನಡಕೊಳ್ಳಬೇಕು ಎಂಬೀ ಮೊದಲಾದ ವಿಚಾರಗಳು ಅವಳ ಕಣ್ಣ

ವದಕ್ಕೂ ಕಟ್ಟದಂತೆ ಇದ್ದವು. ಈ ವಿಚಾರಗಳ ಜೊತೆಗೆ ಅವಳ ಅಂತಃ ಕರಣದಲ್ಲಿ ಬೇರೆ ವಿಚಾರಗಳಿಗೆ ಆಸ್ಪದವಿದ್ದಿಲ್ಲ. ಆ ವಿಚಾರಗಳಲ್ಲಿ ಮು ಳುಗಿದಳೆಂದರೆ ಒಮ್ಮೊಮ್ಮೆ ಅವಳು, ತನಗೆ ಸ್ತ್ರೀಧರ್ಮದ ಜ್ಞಾನವಿಲ್ಲವೆಂ ದೂ, ತನಗೆ ಸ್ತ್ರೀಯರ ನಿಜವಾದ ಕರ್ತವ್ಯಕರ್ಮದ ಪರಿಚಯವಿಲ್ಲವೆಂದೂ, ತಾನು ಸಂಸಾರ ರಥವನ್ನು ನಡೆಯಿಸಲಿಕ್ಕೆ ಪೂರ್ಣ ಅಸಮರ್ಥಳಾಗಿದ್ದೇ ನೆಂದೂ ನೆನಿಸಿ, ವ್ಯಸನಪಡುತ್ತಿದ್ದಳು. ವಿವಾಹವೆಂದರೆ ವಿನೋದವಲ್ಲ; ಕಠಿಣವಾದ ಪವಿತ್ರ ಕರ್ತವ್ಯಕರ್ಮವೆಂಬುವದು ಅವಳಿಗೆ ಪೂರ್ಣ ಮನವ ರಿಕೆಯಾಗಿತ್ತು.

ವೇಣುವಿನ ಲಗ್ನ-ತಿಥಿಯ ವಾರ್ತೆಯು ಜಹಾಗೀರದಾರ ಸಾಹೇಬರ ಕಿವಿಗೆ ಮುಟ್ಟಿದ ಕೂಡಲೆ ಅವನ ಅಂಗಾಲಿನ ಉರಿಯು ನಡುನೆತ್ತಿಗೆ ಬಂದು ಹತ್ತಿತು. ಈಗ ಸ್ವಸ್ಥವಾಗಿ ಕೂಡ್ರುವದು ಯೋಗ್ಯವಲ್ಲ, ಏನಾದರೂ ಪ್ರಯತ್ನ ಮಾಡಲಿಕ್ಕೆ ಬೇಕೆಂದಾಲೋಚಿಸಿ, ವಿಶ್ವನಾಥರಾಯನು ತನ್ನ ಉದ್ಯೋಗದಲ್ಲಿ ತೊಡಗಿದನು. ಮತ್ತು ಅವನು ರಾಮಕೃಷ್ಣಪಂತನಿಗೆ "ವೇಣುವನ್ನು ಮಾಧವರಾಯನಿಗೆ ಕೊಟ್ಟರೆ ನೆಟ್ಟಗಾಗುತ್ತದೆ, ಇಲ್ಲವಾದರೆ ನಾನು ನನ್ನ ಇಚ್ಛಾನುಸಾರವಾಗಿ ವ್ಯವಸ್ಥೆ ಮಾಡುತ್ತೇನೆ" ಎಂಬದಾಗಿ ಹೇಳಿ ಕಳಿಸಿದನು. ಅದಕ್ಕೆ ರಾಮಕೃಷ್ಣಪಂತನು ಪ್ರತ್ಯುತ್ತರವಾಗಿ "ಇಂಥ ಅವಿಚಾರದ ನಿರೋಪವನ್ನು ಕಳಿಸುವದು ನಿಮ್ಮಂಥವರಿಗೆ ಶೋಭಿಸುವ ದಿಲ್ಲ" ಎಂಬದಾಗಿ ವಿಶ್ವನಾಥರಾಯನಿಗೆ ತಿಳಿಸಿದನು. ಆಗಂತೂ ದುರಭಿ ಮಾನದ ಜಹಾಗೀರದಾರನಿಗೆ ಮಿತಿಮೀರಿ ಸಂತಾಪವಾಯಿತು. "ಈ ಅವಂತೀಪುರದಲ್ಲಿ ನನ್ನ ಅಪ್ಪಣೆಯನ್ನು ಯಾರೂ ಮೀರುವದಿಲ್ಲ; ಆದರೆ ರಾಮಕೃಷ್ಣಪಂತನು ನನ್ನ ಆಜ್ಞೆಯನ್ನು ಮೀರಿ, ತಿರುಗಿ ಮೈಸೊಕ್ಕಿನ ಮಾ ತನ್ನಾಡಿ ಕಳಿಸಿರುತ್ತಾನೆ. ಒಳ್ಳೇದು! ನನ್ನ ಕೈಯಲ್ಲಿ ಇಷ್ಟು ಅಧಿಕಾರ-ಸಾಮರ್ಥ್ಯವಿದ್ದಾದರೂ ಅದರ ಉಪಯೋಗವೇನು? ವೇಣುವಿನ ಲಗ್ನವನ್ನು ಮಾಡುವ ರಾಮಕೃಷ್ಣಪಂತನ ಸಾಮರ್ಥ್ಯವಾದರೂ ಎಷ್ಟಿರುತ್ತದೆ!! ನೋ ಡುತ್ತೇನೆ" ಎಂಬದಾಗಿ ವಿಶ್ವನಾಥರಾಯನು ಮನದಲ್ಲಿ ಆಲೋಚಿಸಿ, ಕಾಳ ಸರ್ಪದಂತೆ ಶ್ವಾಸವನ್ನು ಬಿಡುತ್ತ ಮನೆಯಿಂದ ಹೊರಗೆ ಹೊರಟನು. ಹೊರಗೆ ಹೋಗಿ ಯಾವ ವ್ಯವಸ್ಥೆಯನ್ನು ಮಾಡಬೇಕೆಂಬ ಬಗ್ಗೆ ಅವನು

ಬಹಳ ಆಲೋಚನೆ ಮಾಡಲಿಲ್ಲ. ಓಣಿಯಲ್ಲಿ ಹೋಗುತ್ತಲೇ ಅವನು ಮ
ಸ್ಸಿನಲ್ಲಿ ಆಲೋಚಿಸಿದ್ದೇನಂದರೆ:—ಬ್ರಾಹ್ಮಣರ ಹತ್ತರ ಹೋಗಿ ರಾಮ
ಷ್ಣಪಂತನ ಸಂಬಂಧವಾಗಿ ಇಲ್ಲದ್ದನ್ನು ಹೇಳಿ, ಅವನನ್ನು ಜಾತಿಯಿಂದ
ಹೊರಗೆ ಹಾಕಿಸಬೇಕೆಂದು ಆಲೋಚಿಸಿದನು.

ಈ ಪ್ರಕಾರವಾಗಿ ಆಲೋಚಿಸಿ ವಿಶ್ವನಾಥರಾಯನು ಎಲ್ಲ ಬ್ರಾಹ್ಮಣ
ರನ್ನು ಒಂದು ಸ್ಥಳದಲ್ಲಿ ಕೂಡಿಸಿದನು. ಅವರಲ್ಲಿ ಕೆಲವರು ಭಿಕ್ಷುಕರೂ,
ಕೆಲವರು ಶಾಸ್ತ್ರಿಗಳೂ, ಕೆಲವರು ಪೌರಾಣಿಕರೂ, ಕೆಲವರು ಗೃಹಸ್ಥರೂ,
ಕೆಲವರು ಜಹಾಗೀರದಾರ ಸಾಹೇಬರ ನವಕರದಾರರೂ ಇದ್ದರು. ಅವ
ರಲ್ಲಿ ಕೆಲವರಿಗೆ ತಮ್ಮನ್ನು ಕರೆಯಿಸಿದ ಕಾರಣವೇ ಗುರ್ತಿದ್ದಿಲ್ಲ. ಕೆಲವರಿಗೆ
ಸಭೆಯಲ್ಲಿ ನಡೆಯುವ ವಿಷಯವೇ ಗೊತ್ತಿದ್ದಿಲ್ಲ. ಕೂಡಿದ ಜನರಲ್ಲಿ ಪ್ರಮು
ಖ ಜನರು ಮಾತ್ರ ಮೆತ್ತನ್ನ ಹಾಸಿಗೆಯ ಮೇಲೆ ತಕ್ಕೆ-ಲೋಡುಗಳಿಗೆ ಆತು
ಕೊಂಡು ಕುಳಿತಿದ್ದರು. ಉಳಿದವರೆಲ್ಲ ಬರೇ ನೆಲದ ಮೇಲೆ ಕುಳಿತಿದ್ದರು.
ಅಧ್ಯಕ್ಷಸ್ಥಾನದಲ್ಲಿ ವಯೋವೃದ್ಧರಾದ ನರಹರಿಶಾಸ್ತ್ರಿಗಳು ವಿರಾಜಮಾನರಾಗಿ
ದ್ದರು. ಅವರ ಎದುರಿಗೆ ತಾಂಬೂಲ ಸಾಹಿತ್ಯದ ತಬಕವು ಇಟ್ಟಿತ್ತು.
ಅವರು ತಾಂಬೂಲವನ್ನು ಹಾಕಿಕೊಳ್ಳುತ್ತ ನುಡಿದರೇನಂದರೆ:—ಸಭ್ಯಗೃಹ
ಸ್ಥರೇ, ಇತ್ತಕಡೆಗೆ ಪ್ಲೇಗ-ಕಾಲರಾ ರೋಗಗಳ ಪೀಡೆಯಿಂದ ಅಸಂಖ್ಯ ಜನ
ರು ಸಾವಿಗೆ ತುತ್ತಾಗಲಾರಂಭಿಸಿರುತ್ತಾರೆ. ಮಳೆಯು ಸಕಾಲದಲ್ಲಿ ಆಗದ್ದ
ರಿಂದ ಧಾನ್ಯಾದಿಗಳು ಬೆಳೆಯುವದಿಲ್ಲ. ಅಂತೂ-ಇಂತೂ ಜನರಿಗೆ ಯಾವ
ತರದಿಂದಲೂ ಸುಖವಿಲ್ಲ. ಇದಕ್ಕೆ ಜಗತ್ತಿನಲ್ಲಿ ನಡೆಯುವ ಅಪರಿಮಿತವಾದ
ಅನಾಚರಣೆಯೇ ಕಾರಣವಾಗಿದೆ. ದೇಶದಲ್ಲಿ ಪಾಪವು ಹೆಚ್ಚಾಗಿ, ಪುಣ್ಯವು
ಹೇಳ ಹೆಸರಿಲ್ಲದೆ ಹೋಗಿದೆ. ಜಗತ್ತಿನಲ್ಲಿ ಮನಸ್ಸಿಗೆ ಬಂದಂತೆ ನಡೆಯುವ
ಜನರೇ ಹೆಚ್ಚಾಗಿದ್ದಾರೆ. ಇದಕ್ಕೆ ತಾವಾದರೂ ಏನು ಮಾಡೀರಿ, ಆದರೂ
"ಯತ್ನಾಂತೆ ಪರಮೇಶ್ವರಃ" ಎಂಬಂತೆ, ಮಾಡುವಷ್ಟು ಪ್ರಯತ್ನವನ್ನು
ಮಾಡಲಿಕ್ಕೆ ಬೇಕು. ಕಿವಿಗೆ ಕೇಳದ, ಕಣ್ಣಿಗೆ ಕಾಣಿಸದ ಸಂಗತಿಯ ಬಗ್ಗೆ
ಏನೂ ಪ್ರಯತ್ನ ಮಾಡಲಿಕ್ಕೆ ಬರುವದಿಲ್ಲ. ಆದರೆ ಕಿವಿಗೆ ಕೇಳಿದ, ಕಣ್ಣಿಗೆ
ಕಂಡ ಸಂಗತಿಯ ಬಗ್ಗೆ ಯೋಗ್ಯ ವ್ಯವಸ್ಥೆಯನ್ನು ಮಾಡುವದು ನಿಮ್ಮ
ಕರ್ತವ್ಯಕರ್ಮವಾಗಿದೆ. ಧರ್ಮೋದ್ಧಾರಕರೂ, ಪಾಪಪರಾಙ್ಮುಖರೂ ಆದ

ವದಕ್ಕೂ -ಕಟ್ಟಾಧರಾಯರ ಕಿವಿಗೆ ಬಿದ್ದ ಒಂದು ಅನಿಷ್ಟಕಾರಕ ಸಂಗತಿಯ ಬಗ್ಗೆ ಮಿತ್ರಗಣದವರೆಲ್ಲರು ವಿಚಾರ ಮಾಡಿ, ಜಹಾಗೀರದಾರ ಸಾಹೇಬರ ಅಭೀಷ್ಟವನ್ನು ಖುಶುಗಿದ ಪೂರ್ತಿ ಮಾಡಲಿಕ್ಕೆ ಬೇಕು. ಇಲ್ಲಿಯ ರಾಮಕೃಷ್ಣಪಂತನು ಬ್ರಾಹ್ಮಣ ದ್ರ ಜಾತಿಯವನೇನೋ ನಿಜವೆಂಬುವದು ತಮ್ಮೆಲ್ಲರಿಗೆ ಗೊತ್ತಿದ್ದ ಸಂಗತಿಯು; ಆದರೆ ಅವನು ಮುಂಬಯಿಯಲ್ಲಿ ಇರುವಾಗ್ಗೆ ವಿಜಾತಿಯ ಸ್ತ್ರೀಯನ್ನು ಲಗ್ನ ವಾಗಿದ್ದಾನೆ. ಆ ಸ್ತ್ರೀಯ ಹೊಟ್ಟೆಯಲ್ಲಿ ಹುಟ್ಟಿ ಬೆಳೆದ ಹುಡಿಗೆಯು ವೇಣೂ ಎಂಬ ಹೆಸರಿನಿಂದ ಪ್ರಸಿದ್ಧಳಾಗಿದ್ದಾಳೆ. ಅವಳನ್ನು ಗೋವಿಂದರಾಯನ ಮಗನಾದ ಕೃಷ್ಣರಾಯನಿಗೆ ಕೊಟ್ಟು ಲಗ್ನದ ತಿಥಿಯು ನಿಶ್ಚಯಿಸಲ್ಪಟ್ಟಿದೆ. ಗೋವಿಂದರಾಯನ ಸಂಬಂಧವಾಗಿ ಅಲ್ಲಿ ವಿಚಾರ ಮಾಡಲಾಗಿ ಅವನೂ ಜಾತಿಹೀನನಾಗಿರುತ್ತಾನೆಂದು ತಿಳಿದು ಬಂದಿರುತ್ತದೆ. ಇಂಥ ಅಮಂಗಲ ವಾದ ಕಾರ್ಯವನ್ನು ಕಣ್ಣಿನಿಂದ ಹೇಗೆ ನೋಡಬೇಕು, ಏನು ಮಾಡಬೇಕು, ಇರಲಿ, ಈ ಸಂಬಂಧವಾಗಿ ತಕ್ಕ ಶಾಸನ ಮಾಡುವ ಅಧಿಕಾರವು ನಿಮ್ಮ ಕೈಯಲ್ಲಿ ಇಲ್ಲದಿದ್ದರೂ, ಮಠಸಂಬಂಧವಾದ ಅಧಿಕಾರವಾದರೂ ನಿಮ್ಮ ಕೈಯಲ್ಲಿ ಇರುತ್ತದೆ. ಆ ಉಭಯತರ ಕೂಡ ಆಗತಕ್ಕ ಊಟ ಮೊದಲಾದದ್ದನ್ನು ಬಿಟ್ಟು ಬಿಡಬೇಕು. ಬ್ರಾಹ್ಮಣರಲ್ಲಿ ಯಾರೂ ಅವರ ಕೂಡ ಯಾವ ತರದ ವ್ಯವಹಾರಗಳನ್ನು ಮಾಡಬಾರದು. ಸಾರ್ವಜನಿಕ ಬ್ರಾಹ್ಮಣರಿಗಾಗಿ ಕಟ್ಟಿಸಿದ ಬಾವಿಯಲ್ಲಿ ಅವರು ನೀರನ್ನು ಒಯ್ಯಬಾರದು ಎಂಬದಾಗಿ ನಾವು ಆಲೋಚಿಸಿರುತ್ತೇವೆ. ಇದಕ್ಕೆ ಯಾರಾದರೂ ಅಸಮ್ಮತಿಯಿದ್ದರೆ ಈಗಲೇ ಹೇಳಬೇಕು; ಎಂದೆನ್ನಲು, ಕೂಡಿದ ಬ್ರಾಹ್ಮಣರು:—ಶಾಸ್ತ್ರಿಗಳು ನಿಶ್ಚಯಿಸಿದ ಆಲೋಚನೆಯು ನಮ್ಮೆಲ್ಲರಿಗೂ ಒಪ್ಪಿಗೆಯದೆಂದು ಅಂದರು. ಈ ಮುಖ್ಯ ವಿಧಿಯು ಮುಗಿದ ಮೇಲೆ ಎಲ್ಲರೂ ತಾಂಬೂಲವನ್ನು ಹಾಕಿಕೊಂಡರು; ಕೆಲವರು ನಸ್ಯವನ್ನು ಸೇವಿಸಿದರು. ಈ ಪ್ರಕಾರವಾಗಿ ಸರ್ವರಿಗೂ ಸಂಭಾವನೆಯಾಗಲು, ಆ ಮಹಾ ಸಭೆಯು ವಿಸರ್ಜನವಾಯಿತು.

ಅವಂತೀಪುರವು ಚಲೋ ಗ್ರಾಮಗಳ ಮಾಲೆಯಲ್ಲಿ ಸೇರುವಂತಿತ್ತು. ಗ್ರಾಮವು ಸಾಧಾರಣ ದೊಡ್ಡದಿದ್ದು, ಅದರಲ್ಲಿ ಬ್ರಾಹ್ಮಣರ ವಸ್ತಿಯು ಹೆಚ್ಚಿ

ಗಿತ್ತು. ಅಲ್ಲಿ ವ್ಯಾಪಾರೋದ್ಯೋಗಗಳಾದರೂ [illegible]ಣಾ ಒಳ್ಳೇ [illegible]ದ ಸಾಗುತ್ತಿದ್ದವು. ಆ ಗ್ರಾಮವು ಸಮುದ್ರಕ್ಕೆ [illegible]ಹೊಂದಿದ್ದರಿಂದ, ಅ[illegible] ಒಂದು ತರದ ರಮಣೀಯತ್ವವು ಪ್ರಾಪ್ತವಾಗಿತ್ತು. ಗ್ರಾಮದಲ್ಲಿ ಒಂದು ಮಹಾರಾಷ್ಟ್ರ ಶಾಲೆಯೂ, ಒಂದು ಅಂಚೇಕಚ್ಚೇರಿಯೂ, ಒಂದು ತಾರಾಫೀಸೂ ಇದ್ದವು. ದಿವಾಣೀಕೋರ್ಟು, ಮಾಮಲೇದಾರ ಕಚೇರಿಯು ಅವಂತೀಪುರದಲ್ಲಿದ್ದಿಲ್ಲ. ಅವು ಸಮೀಪದಲ್ಲಿಯೇ ತಾಲೂಕ ಶಹರಿನಲ್ಲಿದ್ದವು. ಆ ಗ್ರಾಮದಲ್ಲಿ ಈಗ ಮಾಡಿ ಈಗ ಉಣ್ಣುವ ಜನರು ಪ್ರಾಯಶಃ ಕಡಿಮೆಯಿದ್ದು, ಪೂರ್ವಾರ್ಜಿತ ದ್ರವ್ಯದಿಂದ ಹೊಟ್ಟೆ ಹೊರಕೊಳ್ಳುವ ಜನರೇ ಬಹಳವಾಗಿದ್ದರು. ಇಂಥ ನಿರುದ್ಯೋಗದ ಜನರಿಗೆ, ಒಬ್ಬರದನ್ನು ಒಯ್ದು ಒಬ್ಬರಿಗೆ ಹೇಳಿ ಅವರಲ್ಲಿ ಕಲಹವನ್ನು ಹಚ್ಚುವದೂ, "ಬಲಾಜಪೃಥ್ವೀ" ಎಂಬಂತೆ ಬಲವಿದ್ದ ಕಡೆಗೆ ಹೇಳಿ ನ್ಯಾಯವನ್ನು ತೀರಿಸುವದೂ ಅವರ ಪವಿತ್ರ ಕರ್ತವ್ಯ ಕರ್ಮವಾಗಿತ್ತು. ಇಂಥ ನೀಚಕೃತ್ಯದಲ್ಲಿಯೇ ಅವರ ಆಯುಷ್ಯವು ಹಾಳಾಗಿ ಹೋಗುತ್ತಿತ್ತು. ಅವರು ಉಣ್ಣುವಾಗಲೂ ಮಲಗಿದಾಗಲೂ ಮಾತ್ರ ಬಿಟ್ಟು ಉಳಿದ ಎಲ್ಲ ವೇಳೆಯನ್ನು ಒಬ್ಬರನ್ನು ಕೆಡಿಸುವಲ್ಲಿಯೇ ಖರ್ಚು ಮಾಡುತ್ತಿದ್ದದರಿಂದ, ಆನರರೀ ಮ್ಯಾಜಿಸ್ಟ್ರೇಟ ಸಾಹೇಬರಿಗೆ ನ್ಯಾಯವನ್ನು ತೀರಿಸುವ ಪಾಳಿಯೇ ಬರುತ್ತಿದ್ದಿಲ್ಲ. ಇಂಥ ಜನರಿಗೆ ಜಹಾಗೀರದಾರ ಸಾಹೇಬರು ಸಾಕಿದ ನಾಯಿಯೆಂದು ಹೆಸರಿಟ್ಟರೆ, ಅದು ಅವರಿಗೆ ಒಳ್ಳೇ ಒಪ್ಪುವಂತಿತ್ತು. ಮೇಲೆ ಹೇಳಿದಂತೆ ಸಭೆಯು ವಿಸರ್ಜನವಾದ ಮೇಲೆ ಜಹಾಗೀರದಾರ ಸಾಹೇಬರ ನಾಯಿಗಳು ಕೆರೆ ಬಾವಿಗಳ ಹತ್ತರ ಕೂತು ಪಹರೆಯನ್ನು ಮಾಡಹತ್ತಿದವು; ಮನೆಮನೆಗೆ ಹೋಗಿ ಸಭೆಯಲ್ಲಿ ನಡೆದ ಸಂಗತಿಗಳನ್ನು ಯಥಾಸಾಂಗವಾಗಿ ಹೇಳಹತ್ತಿದವು. ಸಭೆಯಲ್ಲಿ ನಿರ್ಣಯಿಸಲ್ಪಟ್ಟ ಸಂಗತಿಯು ಗೋವಿಂದರಾವ-ರಾಮಕೃಷ್ಣ ಪಂತರ ಕಿವಿಗೆ ಬಿದ್ದ ಕೂಡಲೆ ಅವರು ಪೂರ್ಣವಾಗಿ ಚಕಿತರಾದರು. ತಮ್ಮ ಮೇಲೆ ಹೊತ್ತ ದೋಷಾರೋಪದ ಕಾರಣವು ಅವರಿಗೆ ಸಂಪೂರ್ಣ ಗೊತ್ತಿತ್ತು. ಆದರೆ ಅಷ್ಟರಿಂದಲೇ ಈ ಗ್ರಾಮದ ಪುಂಡ ಜನರು ತಮ್ಮ ಮೇಲೆ ಇಂಥ ಅಪವಾದಗಳನ್ನು ಹೊರಿಸ್ಯಾರೆಂದೂ, ಜಾತಿಬಾಹಿರರನ್ನಾಗಿ ಮಾಡ್ಯಾರೆಂದೂ, ಮನಸ್ಸಿಗೆ ಬಂದಂತೆ ಮಾತಾಡಿ ಮಾನಚ್ಯುತಿಯನ್ನು ಮಾಡ್ಯಾರೆಂದೂ ಅವರು ಅರಿತಿದ್ದಿಲ್ಲ. ವಾಸ್ತವಿಕವಾಗಿ

[illegible]ಕೃಷ್ಣಪಂತ-ಗೋವಿಂದರಾಯರು ನಿಷ್ಕಲಂಕರೂ, ನಿಷ್ಪಾಪಿಗಳೂ, [illegible]ಪರಾಧಿಗಳೂ ಆಗಿದ್ದರು. ಆದರೆ ಮಾಡುತ್ತಾರೇನು, ಪುಂಡ ಜನರ [illegible]ಮುಂದೆ ಅವರ ಆಟವು ನಡೆಯುವಂತಿದ್ದಿಲ್ಲ. ನಿಷ್ಕಾರಣ ಪ್ರಾಪ್ತವಾಗಿದ್ದ ಅಪವಾದಕ್ಕೆ ಅವರು ಭಯಭೀತರೂ, ನಿರುತ್ಸಾಹಿಗಳೂ ಆಗಲಿಲ್ಲ. ಸಜ್ಜನರನ್ನು ಪೀಡಿಸುವದು ನೀಚ ಸತ್ತಾಧಾರಿಗಳ ಹುಟ್ಟುಗುಣವಾಗಿರುತ್ತದೆ. ವಿಶ್ವನಾಥರಾಯನು ತನ್ನ ಅಭೀಷ್ಟವು ಸಿದ್ಧಿಸಿದಕ್ಕಾಗಿ ಮನೋರಾಜ್ಯದ ಉಚ್ಚ ಸಿಂಹಾಸನವನ್ನು ಏರಿದ್ದನು. ರಾಮಕೃಷ್ಣಪಂತ-ಗೋವಿಂದರಾಯರು ಯಾರಿಗೇನೂ ಅಪಾಯ ಮಾಡಿದ್ದಿಲ್ಲ-ಮಾಡುವಂಥವರಿದ್ದಿಲ್ಲ, ಯಾರಿಗೇನೂ ಅಹಿತವನ್ನು ಬಯಸಿದ್ದಿಲ್ಲ-ಬಯಸುವಂಥವರಿದ್ದಿಲ್ಲ, ಉಭಯತರೂ ಶುದ್ಧ ಮನಸ್ಸಿನವರಿದ್ದರು. ಆದರೆ ರಾಮಕೃಷ್ಣಪಂತನು ಕೆಲವು ಅಪರಾಧಗಳನ್ನು ಮಾಡಿದನೆಂದು ಹೇಳಬಹುದು. ಅವನು ತನ್ನ ಸುಸ್ವರೂಪಿಯಾದ ಮಗಳನ್ನು ಶುದ್ಧ ಕಾಗೆಯ ಬಣ್ಣದ ಮಾಧವರಾಯನಿಗೆ ಕೊಡದೇ ಇದ್ದದ್ದು ಒಂದನೇ ತಪ್ಪು; ಅಥವಾ ವೇಣುವು ಹುಟ್ಟಿದ ಕೂಡಲೆ ಗೋಣು ಮುರಿದು ಚಲ್ಲದೇ ಇದ್ದದ್ದು ಎರಡನೇ ತಪ್ಪು; ಅಥವಾ ಈಗಾದರೂ ವೇಣುವನ್ನು ಸಮುದ್ರದಲ್ಲಿ ದೂಡಿ, ಹಾಲು ಕುಡಿಯದೇ ಇದ್ದದ್ದು ಮೂರನೇ ತಪ್ಪು. ಇವೇ ಅವನ ಅಪರಾಧಗಳು. ಈ ತರದ ವಿಚಾರಗಳು ರಾಮಕೃಷ್ಣಪಂತನ ಮನಸ್ಸಿನಲ್ಲಿ ಹುಟ್ಟುತ್ತಲೇ ಅವನು ಪ್ರಕಟವಾಗಿ ಅನ್ನುತ್ತಿದ್ದನೇನಂದರೆ:—ಈ ಜಗತ್ತೆಲ್ಲ ಒಮ್ಮೆಲೆ ಸಮುದ್ರಗರ್ಭದಲ್ಲಿ ಸೇರಿದರೆ, ಒಳ್ಳೇದು ಆದೀತು! ಏನಿದು ನಮ್ಮ ಸಮಾಜ! ಏನಿದು ನಮ್ಮ ಸಮಾಜದ ವ್ಯವಸ್ಥೆ!! ಏನಿದು ನಮ್ಮ ಸಮಾಜದ ಧರ್ಮಬಂಧನೆಯು! ಎಂದನ್ನುತ್ತಿದ್ದನು. ವಾಚಕರೇ, ಇಂಥ ರಾಕ್ಷಸೀ ಕೃತ್ಯವನ್ನು ಮಾಡುವ ವಿಶ್ವನಾಥರಾವ ಮೊದಲಾದ ಜನರಿಗೆ ಯಾವ ಉಪಮೆಯನ್ನು ಕೊಟ್ಟರೆ ನೆಟ್ಟಗಾದೀತು? ಅವರಿಗೆ ಸರಿಯಾದ ಉಪಮಾ ವಸ್ತುವೇ ಜಗತ್ತಿನಲ್ಲಿ ಸಿಗಲಿಕ್ಕಿಲ್ಲೆಂದು ನಮ್ಮ ಅಭಿಪ್ರಾಯವದೆ.

ಮೊಥಲು ಒಂದೆರಡು ದಿವಸ ರಾಮಕೃಷ್ಣಪಂತ-ಗೋವಿಂದರಾಯರಿಗೆ ಬಹಳ ಸಂತಾಪವಾಯಿತು. ಬರಬರುತ್ತ ಅವರು ಒದಗಿದ ದುಃಖವನ್ನು ದೂರೀಕರಿಸುತ್ತ ಮೊದಲಿನಂತೆ ಲಗ್ನದ ಸಿದ್ಧತೆಯನ್ನು ನಡೆಸಿದ್ದರು. ರಾಮಕೃಷ್ಣಪಂತನು ಲಗ್ನದ ಸಲುವಾಗಿ ವೈಶಾಖದ ಅಂತ್ಯದವರೆಗೆ ರಜೆ

ಯನ್ನು ತಕ್ಕೊಂಡಿದ್ದನು. ಮೇಲಿನ ಸಂಗತಿಯು ನಡೆದು ಇನ್ನೂ ಸ್ವಲ್ಪ ದಿವಸ ಮೊದಲು ಆಗಿದ್ದಿಲ್ಲ. ಒಮ್ಮಿಂದೊಮ್ಮೆಲೇ ರಾಮಕೃಷ್ಣಪಂತನಿಗೆ ಮುಂಬಯಿಯ ವಿಮಾ ಕಂಪನಿಯ ಸಾಹೇಬರಿಗೆ ಬಹಳ ಅಜಾರಿಯಾಗಿರುವದರಿಂದ ತೀವ್ರ ಹೊರಟು ಬರುವದಾಗಿ ತಾರು ಬಂದಿತು. ರಾಮಕೃಷ್ಣಪಂತನು ಸಾಹೇಬರ ಪ್ರೀತಿಗೆ ಪಾತ್ರನಾಗಿದ್ದನು. ರಾಮಕೃಷ್ಣಪಂತನಾದರೂ ಸಾಹೇಬರ ಸಂಗಡ ಒಳ್ಳೇ ವಿನಯದಿಂದ ನಡೆದುಕೊಳ್ಳುತ್ತಿದ್ದನು. ತಾರು ಕೈಯಲ್ಲಿ ಬಿದ್ದ ಕೂಡಲೆ ಆದಷ್ಟು ತೀವ್ರವಾಗಿ ರಾಮಕೃಷ್ಣಪಂತನು ಮುಂಬಯಿಗೆ ಹೊರಟು ಬಂದು, ಸಾಹೇಬರ ವಾಸಸ್ಥಳವನ್ನು ಹೊಕ್ಕನು. ಸಾಹೇಬರು ತೀರ ಹಣ್ಣಾಗಿದ್ದು, ಘಳಿಗೆಗೋ–ಅರ್ಧ ಘಳಿಗೆಗೋ ಅನ್ನುವ ಹಾಗೆ ಕಾಣಿಸುತ್ತಿದ್ದರು. ಸಾಹೇಬರಿಗೆ ಭಯಂಕರವಾದ ಪ್ಲೇಗರೋಗವು ಮುಸುಕಿತ್ತು. ಸಾಹೇಬರಿಗೆ ಇನ್ನೂ ಸ್ಮೃತಿಯು ತಪ್ಪಿದ್ದಿಲ್ಲ. ರಾಮಕೃಷ್ಣಪಂತನನ್ನು ನೋಡಿದ ಕೂಡಲೆ, ಸಾಹೇಬರಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಅವರು ಪೂರ್ವದಲ್ಲಿಯೇ ತಮ್ಮ ಮೃತ್ಯುಪತ್ರವನ್ನು ಬರೆದಿಟ್ಟಿದ್ದರು. ಸಾಹೇಬರು ಮೃತ್ಯುಪತ್ರವನ್ನು ರಾಮಕೃಷ್ಣಪಂತನ ಕಡೆಗೆ ಕೊಟ್ಟು, ಅದರಲ್ಲಿದ್ದಂತೆ ವ್ಯವಸ್ಥೆ ಮಾಡಲಿಕ್ಕೆ ತಿಳಿಸಿದರು. ರಾಮಕೃಷ್ಣಪಂತನು ಸಾಹೇಬರಿಗೆ ಒಂದೆರಡು ಸಮಾಧಾನೋಕ್ತಿಗಳನ್ನು ಹೇಳಿ, ಆ ಮೃತ್ಯುಪತ್ರವನ್ನು ತನ್ನ ಕಡೆಗೆ ಇಟ್ಟುಕೊಂಡನು. ಸಾಹೇಬರು ವೇದಾಂತಮಾರ್ಗಿಗಳಾಗಿದ್ದರು. ಅವರು ಈವರೆಗೆ ಬ್ರಹ್ಮಚರ್ಯಾವಸ್ಥೆಯಲ್ಲಿಯೇ ಇದ್ದರು. ಅವರ ಅಜಾರಿಯ ಕಾಲದಲ್ಲಿ ಅವರ ಸೇವೆಯನ್ನು ಮಾಡುವದಕ್ಕೆ ಅನೇಕರು ಸಿದ್ಧರಿದ್ದರೂ, ರಾಮಕೃಷ್ಣಪಂತನು ಬರುವತನಕ ಸಾಹೇಬರಿಗೆ ಸಮಾಧಾನವಿದ್ದಿಲ್ಲ. ರಾಮಕೃಷ್ಣಪಂತನು ಬಂದದ್ದು ಸಾಹೇಬರಿಗೆ ತನ್ನ ಬೆನ್ನಿಗೆಬಿದ್ದ ಬಂಧುವು ಬಂದಂತಾಯಿತು. ಸಾಹೇಬರ ವ್ಯಾಧಿ-ನಿವಾರಣೆಗಾಗಿ ರಾಮಕೃಷ್ಣಪಂತನು ಮಿತಿಮೀರಿ ಪ್ರಯತ್ನ ಮಾಡಿದನು. ಸುಪ್ರಸಿದ್ಧರಾದ ಇಬ್ಬರು ಯುರೋಪಿಯನ್ ಡಾಕ್ಟರರನ್ನು ಕರೆಯಿಸಿಕೊಂಡು ಔಷಧೋಪಚಾರವನ್ನು ನಡೆಯಿಸಿದನು. ಪ್ಲೇಗುರೋಗವೆಂದು ಸ್ವಲ್ಪವಾದರೂ ಹೆದರದೆ. ಸಾಹೇಬರ ಶುಶ್ರೂಷೆಯಲ್ಲಿಯೇ ಒಂದು ರಾತ್ರಿಯನ್ನು ಕಳೆದನು. ಮರು ದಿನ ಪ್ರಾತಃಕಾಲಕ್ಕೆ ರಾಮಕೃಷ್ಣಪಂತನು ದೇಶೀಯ ಜನರಿಗಪ್ಪು ತೋ

ಆನಂದಭಡಿಸುತ್ತಿದ್ದನು. ವೇಣುವಿನ ಅವಸ್ಥೆಯು ಮಾತ್ರ ಎಲ್ಲರಿಗಿಂತಲೂ ದುಃಖಮಯವಾಗಿತ್ತು. ಅವಳ ನೇತ್ರಗಳಿಂದ ಯಾವಾಗಲೂ ಕಣ್ಣೀರಿನ ಹನಿಗಳು ಸುರಿಯುತ್ತಿದ್ದವು. ಜಾತಿಬಾಹಿರಳಾದಂದಿನಿಂದ ಪ್ರಾಯಃ ಅವಳು ಲಗ್ನದ ಅಪೇಕ್ಷೆಯನ್ನು ದೂರಮಾಡಿದ್ದಳು. ರಾಮಕೃಷ್ಣಪಂತನ ಮರಣದಿಂದ ಪರರಿಗೆ ಅಹಿತವನ್ನು ಬಯಸುವ ವಿಶ್ವನಾಥರಾಯನಿಗೆ ಆಗಬಾರದಷ್ಟು ಸಂತೋಷವಾಗಿತ್ತು. ಅವನು ಮೀಸೆಯನ್ನು ಹುರಿಮಾಡುತ್ತ ಮಾಧವರಾಯನನ್ನು ಕುರಿತು ಅನ್ನುತ್ತಿದ್ದನೇನಂದರೆ:— ಯಾವಳು ನಿನ್ನ ಮನಸ್ಸನ್ನು ಪೂರ್ಣವಾಗಿ ಎಳಕೊಂಡಿದ್ದಳೋ, ಯಾವಳ ಮೇಲೆ ನಿನ್ನ ಪಂಚಪ್ರಾಣವಿತ್ತೋ, ಯಾವಳಿಂದ ಅತ್ತೆ-ಅತ್ತೆಯೆಂದು ಕರೆಯಿಸಿಕೊಳ್ಳಬೇಕೆಂದು ನನ್ನ ಪತ್ನಿಯ ಮನೋಭಿಲಾಷೆಯಿತ್ತೋ ಆ ವೇಣುವನ್ನೇ ನಿನಗೆ ಲಗ್ನ ಮಾಡುತ್ತೇನೆ. ಇನ್ನು ಮೇಲೆ ತಡವಿಲ್ಲವೆಂದು ಅನ್ನುತ್ತಿದ್ದನು. ವಿಶ್ವನಾಥರಾಯನ ಹೃದಯಾನಂದಕರವಾದ ಮಾತನ್ನು ಕೇಳಿ, ಮಾಧವರಾಯನಿಗೆ ತ್ರಿಭುವನದಲ್ಲಿ ಹಿಡಿಸಲಾರದಷ್ಟು ಸಂತೋಷವಾಗುತ್ತಿತ್ತು. ಅನುಪಮೇಯ ಸುಂದರಿಯಾದ ವೇಣುವಿನಿಂದ ಲಭಿಸುವ ಸೌಖ್ಯಲಾಭದ ಮಂಡಿಗೆಯನ್ನು ತಿನ್ನುತ್ತ ತಿನ್ನುತ್ತ ಮಾಧವರಾಯನಿಗೆ ಸ್ವರ್ಗವು ಎರಡೇ ಎರಡು ಬೊಟ್ಟು ಉಳಿದಿತ್ತು. ವಿಶ್ವನಾಥರಾಯನು ತಿರುಗಿ ಮತ್ತೊಮ್ಮೆ ಬ್ರಾಹ್ಮಣರನ್ನು ಕೂಡಿಸಿ:— ಗೋವಿಂದರಾಯನು ಬ್ರಾಹ್ಮಣನೇ ನಿಜ; ಅವನ ಸಂಬಂಧವಾಗಿ ಹಿಂದೆ ಹೊರಟ ಅಪವಾದವು ಯಥಾರ್ಥವಾದದ್ದಲ್ಲ. ಎಂದು ಹೇಳಿದನು. ಈ ಯೋಗದಿಂದ ರಾಮಕೃಷ್ಣಪಂತನ ಮನೆಯವರಿಗೂ, ಗೋವಿಂದರಾಯನಿಗೂ ವೈಮನಸ್ಸನ್ನು ಮಾಡಬೇಕೆಂಬುವದೇ ವಿಶ್ವನಾಥರಾಯನ ಮೂಲಮಂತ್ರವಿತ್ತು. ವೇಣುವಿನ ತಾಯಿಯು ಯಾವತ್ತೂ ಸಂಗತಿಯ ಬಗ್ಗೆ ಯೋಗ್ಯವಿಚಾರ ಮಾಡಿ, ಈಗಿನ ಪರಿಸ್ಥಿತಿಗೆ ಅನುಸಾರವಾಗಿ ನಡೆಯಬೇಕೆಂದು ನಿಶ್ಚಯಿಸಿದಳು. ಒಂದು ದಿವಸ ಅವಳು ಪ್ರಿಯ ಪುತ್ರಿಯಾದ ವೇಣುವನ್ನು ತನ್ನ ಹತ್ತರ ಕುಳ್ಳಿರಿಸಿಕೊಂಡು, ಅವಳಿಗೆ ಎರಡು ಹಿತೋಕ್ತಿಗಳನ್ನು ಕೆಳಗೆ ಬರೆದಂತೆ ಹೇಳಿದಳು.

ಗತಭಾಗ್ಯಪುತ್ರಿಯೇ, ನಿನಗೆ ಎರಡು ಹಿತಕರವಾದ ಮಾತುಗಳನ್ನು ಹೇಳುತ್ತೇನೆ. [illegible] ನೀನು ಲಾಲಿಸಿ [illegible] ನಿನ್ನ ಮತ್ತು

ನಮ್ಮೆಲ್ಲರ ಕಲ್ಯಾಣವಾಗುವದರಲ್ಲಿ ಸಂದೇಹವಿಲ್ಲ. ನೀನು ಈಗ ಬಲ್ಲೇ ಉಪವರಶೀಲೆಯಾಗಿರುವದೂ ನಿಜವು, ನಿನ್ನನ್ನು ಈಗ ಲಗ್ನಮಾಡಿ ಸಂತೋಷಪಡುವದೂ ನಮ್ಮ ಕರ್ತವ್ಯಕರ್ಮವು. ಆದರೆ ಏನು ಮಾಡಬೇಕು. ಲಗ್ನ ಮಾಡಿಕೊಡಲಿಕ್ಕೆ ಧನದ ಕೊರತೆಯಿಲ್ಲ-ವರನ ಕೊರತೆಯಿಲ್ಲ. ಸಮಾಜ-ಬಹಿಷ್ಕೃತರಾಗಿರುವದೇ ನಿನ್ನ ವಿವಾಹಕ್ಕೆ ಅಡ್ಡಿಯಾಗಿದೆ. ಇಂಥ ನಿರಾಶ್ರಯಕಾಲದಲ್ಲಿ ನಿನ್ನ ಲಗ್ನೋತ್ಸವವನ್ನು ಜರುಗಿಸುವದು ಹೇಗೆ? ಟೊಂಕ ಕಟ್ಟಿಕೊಂಡು ನಿಂತು ಲಗ್ನಕಾರ್ಯವನ್ನು ನೆರವೇರಿಸುವವರು ಯಾರು? ಗೋವಿಂದರಾಯರ ಕಿವಿಗೂ ಸರ್ವಸಂಗತಿಯು ಕೇಳಿದ್ದೇ ಅದೆ. ಅವರು ಸಮಾಜದ ಭೀತಿಗೆ ಹೆದರದೆ, ಸಮಾಜದ ವಿರುದ್ಧವಾಗಿ ನಮ್ಮ ಮನೋಬಯಕೆಯನ್ನು ಈಡೇರಿಸುವದಾದರೂ ಯಾತರ ಮೇಲಿಂದ? ಏನೇ ಇರಲಿ. ನಿನ್ನ ಲಗ್ನದ ಸಲುವಾಗಿ ನನಗೊಂದು ಕಠಿಣ ಪ್ರಶ್ನೆಯೇ ಬಿದ್ದದೆ. ನಾನು ಹಲವು ರೀತಿಯಿಂದ ವಿಚಾರ ಮಾಡಿ, ಕಡೆಗೆ ನಿನ್ನನ್ನು ಯಾವಜ್ಜನ್ಮ ಅವಿವಾಹಿತಳನ್ನಾಗಿಯೇ ಇಡಬೇಕೆಂದು ಆಲೋಚಿಸಿರುತ್ತೇನೆ. ಹಾಗೆ ಮಾಡಿದರೆ ಈಗ ನಾವು ಅನುಭೋಗಿಸುವ ದುಃಖಕ್ಕಿಂತಲೂ ಕಠಿಣವಾದ ದುಃಖವನ್ನು ಅನುಭೋಗಿಸುವದು ನಮ್ಮ ಭಾಗಕ್ಕೆ ಬರುವದಿಲ್ಲ. ಕೃಷ್ಣರಾಯನು ನಿನ್ನ ಹೃದಯ-ಮಂದಿರದಲ್ಲಿ ವಾಸಮಾಡಿಕೊಂಡಿರುವದೇನೋ ನಿಜವು; ಮತ್ತು ನಿನ್ನ ಸಲುವಾಗಿ ಸಮಾಜದ ತೊಂದರೆಗಳನ್ನು ಅನುಭವಿಸುವದಕ್ಕಾಗಲಿ-ಪರಿಹರಿಸುವದಕ್ಕಾಗಲಿ ಸಿದ್ಧನಿರುವದೂ-ಸಾಮರ್ಥ್ಯವುಳ್ಳವನಿರುವದೂ ನಿಜವು. ಆದರೆ ಆಪ್ರಕಾರದ ವರ್ತನವು ನಿಮ್ಮೀರ್ವರಿಗೂ ದುಃಖದಾಯಕವಾದದ್ದೇ ಸರಿ. ನಾವು ನಿನಗೆ ಶಿಕ್ಷಣದ ಲಾಭವನ್ನು ಮಾಡಿಕೊಟ್ಟದ್ದೇವೆ. ಸಂಸಾರವು ಎಷ್ಟು ತಾಪದಾಯಕವೆಂಬದನ್ನು ತಿಳಿಸಿ ಹೇಳಿದ್ದೇವೆ; ನೀನೂ ಆಬಗ್ಗೆ ಎಷ್ಟೋ ಗ್ರಂಥಗಳನ್ನು ಓದಿ ಮನನ ಮಾಡಿಕೊಂಡಿರುವಿ. ನಿನ್ನ ರೂಪ-ವಿದ್ಯಾ-ಬುದ್ಧಿಗಳಿಗೆ ಸರಿಯಾದ ಪತಿಯನ್ನು ದೊರಕಿಸಿ ಕೊಡುವದು ನಮ್ಮ ಕರ್ತವ್ಯಕರ್ಮವಾಗಿದೆ. ಆದರೆ ಜಾತಿಬಾಹಿರರಾದ ನಾವು ಈಪ್ರಶ್ನೆಯನ್ನೇ ಯಾರ ಹತ್ತರ ತೆಗೆಯಲಿಕ್ಕೆ ಬರುವಂತಿಲ್ಲ. ಒಂದುವೇಳೆ ನಿನ್ನನ್ನು ಕುರೂಪಿಯಾದ ಮಾಧವರಾಯನಿಗೆ ಕೊಟ್ಟದ್ದಾದರೆ, ದುಃಖಪರಂಪರೆಯು ಘಟಿತವಾಗಿ ಸುಖಪರಂಪರೆಯು ಪ್ರಾಪ್ತವಾಗುತ್ತದೆ, ಆದರೆ ರೂಪಸಂಪನ್ನ

ಳೂ, ವಿದ್ಯಾಸಂಪನ್ನಳೂ, ಬುದ್ಧಿಸಂಪನ್ನಳೂ, ಗುಣಸಂಪನ್ನಳೂ ಆದ ನಿನ್ನನ್ನು ನಿನ್ನ ರೂಪ-ವಿದ್ಯಾ-ಗುಣಗಳಿಗೆ ತೀರ ವಿರುದ್ಧವಾಗಿರುವ ಆ ಮೂಢ ವಗೆ ಕೊಡುವದಕ್ಕಿಂತ ನಿನ್ನನ್ನು ಅವಿವಾಹಿತಳನ್ನಾಗಿಯೇ ಇಡುವದು ನನಗೆ ಯೋಗ್ಯವಾಗಿ ಕಾಣಿಸುತ್ತದೆ,

ಪುತ್ರಿಕಾ-ರತ್ನವೇ, ಅವಿವಾಹಿತವಾಗಿರುವದು ಕಠಿಣ; ಅದಕ್ಕಿಂತಲೂ ಬ್ರಹ್ಮಚರ್ಯವ್ರತದಲ್ಲಿರುವದಂತೂ ಬಹು ಕಠಿಣ. ಸತತ ಕೌಮಾರ್ಯಾವಸ್ಥೆಯಲ್ಲಿ ಇರುವ ವ್ರತಕ್ಕಿಂತಲೂ ಭಯಂಕರವಾದ ವ್ರತವು ಜಗತ್ತಿನಲ್ಲಿ ಮತ್ತೊಂದಿಲ್ಲ. ಇಂಥ ಕಠಿಣವಾದ ವ್ರತದಲ್ಲಿಯೇ ಆಯುಷ್ಯವನ್ನು ಕಳೆಯುತ್ತೇನೆಂದು ನಿನ್ನ ನಿಜವಾದ ಮನೋಭಿಲಾಷೆಯಿದ್ದರೆ, ನಮ್ಮ ಮೇಲೆ ಸಮಾಜದಿಂದ ದುಃಸಹವಾದಂಥ ಸಂಕಟಗಳೂ ಒದಗಿದರೂ ಅಡ್ಡಿಯಿಲ್ಲ. ನನ್ನ ಜೀವವು ಶರೀರದಲ್ಲಿರುವತನಕ ನಿನ್ನ ರೋಮ ಮಾತ್ರಕ್ಕೆ ಧಕ್ಕಿಯಾಗದಂತೆ ಸಂರಕ್ಷಿಸುತ್ತೇನೆ. ಶ್ರೀಪಾದನಿಗೆ ತಕ್ಕ ವಯಸ್ಸಾದ ಕೂಡಲೆ ಶಾಲೆಗೆ ಹಾಕಿ ಅವನನ್ನು ಸುಶಿಕ್ಷಣವಂತನನ್ನು ಮಾಡೋಣ. ಅವನ ಹೃದಯ-ಪಟಲದ ಮೇಲೆ ಈ ಸಂಗತಿಯು ಬಿಂಬಿಸುವಂತೆ ಉಪದೇಶಿಸೋಣ. ಅಂದರೆ ನನ್ನ ತರುವಾಯ ಅವನು ನಿನ್ನನ್ನು ನನ್ನಂತೆಯೇ ಸಂರಕ್ಷಿಸಿ ಉದ್ಧರಿಸುವಲ್ಲಿ ಸಂಶಯವಿಲ್ಲ. ಒಂದು ವೇಳೆ ನೀನು ಬ್ರಹ್ಮಚರ್ಯವ್ರತದಿಂದ ಇರಲಿಕ್ಕೆ ಅಸಮ್ಮತಿಸುತ್ತಿದ್ದರೆ ಹಾಗೆಯೇ ಹೇಳು. ಅಂದರೆ ನಾನು ಗೋವಿಂದರಾಯನ ಬಳಿಯಲ್ಲಿ ಕೃಷ್ಣರಾಯನ ಸಂಬಂಧವಾಗಿ ಆಲೋಚನೆ ಮಾಡುತ್ತೇನೆ. ಆದರೆ ನೀನೂ ಇತ್ತೀಚೆಗೆ ನಡೆದ ಸಂಗತಿಯನ್ನು ಕೇಳಿರಬಹುದು. ಗೋವಿಂದರಾಯನು ನಿಜವಾಗಿ ದೋಷಿಯಲ್ಲ; ನಮ್ಮ ಕೂಡ ಬಳಿಕೆಯನ್ನು ಮಾಡುತ್ತಿದ್ದದರಿಂದ ಅವನು ಅಪಂಕ್ತನಾಗಿದ್ದನು, ಎಂದು ಹೇಳಿ ವಿಶ್ವನಾಥಯನು ಮತ್ತೆ ಗೋವಿಂದರಾಯರ ಮನೆಯಲ್ಲಿ ಬ್ರಾಹ್ಮಣರ ಭೋಜನೋಪಚಾರಗಳು ನಡೆಯಲಿಕ್ಕೆ ಪ್ರತಿಬಂಧವಿಲ್ಲೆಂದು ನಿಶ್ಚಯಿಸಿರುವನಂತೆ. ಅಂದ ಮೇಲೆ ಕೃಷ್ಣರಾಯನಾದರೂ ಈ ಸಮಾಜದ ವಿರುದ್ಧವಾಗಿ ನಡೆಯುತ್ತಾನೆಂಬುವದು ಯಾವ ಆಧಾರದ ಮೇಲಿಂದ? ಅವನು ಒಂದು ವೇಳೆ ಸಮಾಜದ ವಿರುದ್ಧವಾಗಿ ನಡೆದರೂ ನಡೆದಾನೆಂದು ಅನ್ನಬಹುದು; ಆದರೆ ತಂದೆಯ ಆಜ್ಞೆಯನ್ನು ಮುರಿಯುತ್ತಾನೆನ್ನುವದಂತೂ ಅಸಂಭವ್ಯವೇ ಸರಿ. ನಿನ್ನ

ಸಂಗಡ ಲಗ್ನವಾಗಿ ಅವನು ಜಾತಿಬಾಹಿರನಾದಾನೆಂದು ನನಗೆ ತೋರುವದಿಲ್ಲ. ಇವೆಲ್ಲವುಗಳಿಗಿಂತ ನೀನು ಅವಿವಾಹಿತಳಾಗಿದ್ದರೆ ಯಾವ ತೊಂದರೆಯೂ ಸಂಭವಿಸುವದಿಲ್ಲ.

ವೇಣುವು ಜಾತ್ಯಾ ಸುವಿಚಾರಿಯೂ, ದೂರದೃಷ್ಟಿಯುಳ್ಳವಳೂ ಇದ್ದಳು. ಸಮಾಜದ ವಕ್ರದೃಷ್ಟಿಯಾದಂದಿನಿಂದ ಅವಳು ಆ ಸಂಬಂಧವಾಗಿ ಬಂದೇಸವನೆ ವಿಚಾರ ಮಾಡುತ್ತಿದ್ದಳು. ತಾಯಿಯು ಅಪೇಕ್ಷೆಯಂತೆ ಮೊದಲೇಅವಳು, ತಾನು ಅವಿವಾಹಿತಳಾಗಿ ಇರಬೇಕೆಂದು ನೆನಿಸಿದ್ದಳು. ಇಂದು ವೇಣುವಿನ ತಾಯಿಯು ವೇಣುವನ್ನು ತನ್ನ ಹತ್ತರ ಕುಳ್ಳಿರಿಸಿಕೊಂಡು, ಬಳ್ಳೇ ಕಳಕಳಿಯಿಂದ ತನ್ನ ಅಭಿಲಾಷೆಯನ್ನು ತಿಳಿಸಿದ್ದಳು. ಹೆತ್ತಮ್ಮನ ಉಪದೇಶ ವಚನಗಳಲ್ಲಿ ಕೃತ್ರಿಮ ರೀತಿಯಿರುವದು ಅಸಂಭಾವ್ಯವಾದ್ದರಿಂದ, ವೇಣುವು ಜನನಿಯ ಬೋಧವಚನಗಳನ್ನು ಅಂತಃಕರಣಪೂರ್ವಕವಾಗಿ ಕೇಳುತ್ತಿದ್ದಳು. ಜನನಿಯ ಎಷ್ಟೋ ಮಾತುಗಳಿಂದ ಅವಳಿಗೆ ದುಃಖವೆನಿಸಿತು. ಮೆಲ್ಲಮೆಲ್ಲನೆ ಅವಳ ನೇತ್ರಗಳಿಂದ ದುಃಖಾಶ್ರುಗಳು ಉದುರಲಾರಂಭಿಸಿದವು. ವೇಣುವಿನ ಜನನಿಯ ಉಪದೇಶದ ಶ್ರಮವು ನಿಷ್ಫಲವಾಗಲಿಲ್ಲ. ವೇಣುವಿನ ಹೃದಯಮಂಡಲದ ಮೇಲೆ ಆ ಉಪದೇಶವಚನಗಳು ಬಿಂಬಿಸಲಿಕ್ಕೆ ಏನೂ ತಡವಾಗಲಿಲ್ಲ. ಜನನಿಯ ಸಂಭಾಷಣವು ಸರಿ ಸಮಾಪ್ತಿಯಾಗುತ್ತಲೇ ವೇಣುವು ಕಣ್ಣೀರನ್ನು ಒರೆಸಿಕೊಳ್ಳುತ್ತ ನುಡಿದಳೇನಂದರೆ:—ದಯಾಸಿಂಧು ಮಾತೆಯೇ, ನಿನ್ನ ಹೇಳಿಕೆಯ ಹೊರಗೆ ನಾನೆಂದೂ ಮನವಿಡುವದಿಲ್ಲ. ಬೇಡ! ಆ ಹಾಳಾದ ಲಗ್ನದ ಹೆಸರನ್ನು ಕೂಡ ಇನ್ನೊಮ್ಮೆ ತೆಗೆಯಬೇಡ!! ನಾನು ಯಾವಜ್ಜನ್ಮವಾಗಿ ನಿನ್ನ ಅಪ್ಪಣೆಯಂತೆ ಅವಿವಾಹಿತಳಾಗಿಯೇ ಇರುವೆನು!!! ಆ ಸಂಬಂಧವಾಗಿ ನೀನು ಎಳ್ಳಷ್ಟಾದರೂ ಚಿಂತೆ ಮಾಡಬೇಡ.

ಮೇಲಿನ ಸಂಗತಿಯು ನಡೆದ ಎಷ್ಟೋ ದಿವಸವಾದ ಮೇಲೆ ಕೃಷ್ಣರಾಯನು ಓದುತ್ತಿದ್ದ ಕಾಲೇಜವು ಬೇಸಿಗೆಯ ಸೂಟಿಯ ನಿಮಿತ್ತ ಮುಚ್ಚಲ್ಪಟ್ಟಿತು. ಕಾರಣ ಕೃಷ್ಣರಾಯನು ಅವಂತೀಪುರಕ್ಕೆ ಬಂದನು. ಮುಂಬಯಿಯಿಂದ ಹೊರಡುವ ಪೂರ್ವದಲ್ಲಿ ಅವನು ವೇಣುವಿಗೆ 'ನಾನು ನಾಡದು ಬರುತ್ತೇನೆ'ಂದು ಪತ್ರವನ್ನು ಬರೆದಿದ್ದನು. ಅವನು ಬಂದ ಮೇಲೆ ಅವನಿಗೆ

ತನ್ನ ಮನೋಗತವನ್ನು ತಿಳಿಸುವದಕ್ಕಾಗಿ ವೇಣುವು ಒಂದು ಪತ್ರ ಬರೆದು, ಅದನ್ನು ಕೃಷ್ಣರಾಯನಿಗೆ ಕೊಟ್ಟಿದ್ದಳು. ಆ ಪತ್ರವೇ ಎರಡನೆಯ ಪ್ರಕರಣದಲ್ಲಿ ಸವಿಸ್ತಾರವಾಗಿ ವರ್ಣಿಸಿದ ಹನುಮಂತನ ಬಾಲದಷ್ಟು ಉದ್ದವಾದ ವೇಣುವಿನ ಪತ್ರವು!

## ೫ ನೆಯ ಪ್ರಕರಣ—ಪ್ರೇಮ.

ಪ್ರೇಮವು ಒಂದು ವಿಲಕ್ಷಣವಾದ ವಸ್ತುವಾಗಿದೆ. ಈ ವಸ್ತುವು ಕಣ್ಣಿಗೆ ಕಾಣಿಸುವದಿಲ್ಲ; ಆದರೆ ಸರ್ವಪ್ರಕಾರದ ಸುಖಕ್ಕೆ ಇದು ಮೂಲ ಕಾರಣೀಭೂತವಾದ್ದರಿಂದ, ಅದರ ಪರಿಣಾಮವು ಕಣ್ಣಿಗೆ ಸ್ಪಷ್ಟವಾಗಿ ಕಾಣಿಸುತ್ತದೆ. ಪ್ರೇಮದ ಇರುವಿಕೆಯು ಸರ್ವತ್ರ ಪಸರಿಸಿರುತ್ತದೆ. ಪ್ರೇಮ ರಹಿತವಾದ ಸ್ಥಳವು ಜಗತ್ತಿನಲ್ಲಿ ಒಂದೂ ಸಿಗುವದಿಲ್ಲ. ಪ್ರತ್ಯೇಕ ಪ್ರಾಣಿ ಮಾತ್ರ ಹೃದಯದಲ್ಲಿ ಹೆಚ್ಚು ಕಡಿಮೆ ಪ್ರಮಾಣದಿಂದ ಪ್ರೇಮವು ಈಶ್ವರನಿಂದ ನಿರ್ಮಾಣ ಮಾಡಲ್ಪಟ್ಟದ್ದದೆ. ಪ್ರತಿಯೊಂದು ವಸ್ತುವಿನ ಮೇಲೆ ಹೆಚ್ಚು ಕಡಿಮೆ ಪ್ರಮಾಣದಿಂದ ಎಲ್ಲರ ಪ್ರೇಮವೂ ಇರುತ್ತದೆ. ಮಾಯೆ, ಮಮತೆ, ಪ್ರಣಯ, ಪ್ರೇಮ, ಪ್ರೀತಿ ಮೊದಲಾದ ಮನೋವಿಕಾರಗಳನ್ನು ಈಶ್ವರನು ಕೇವಲ ಜಗತ್ತಿನ ಹಿತಕ್ಕಾಗಿಯೇ ಮನುಷ್ಯಪ್ರಾಣಿಗೆ ದಯಪಾಲಿಸಿದ್ದಾನೆ. ಈ ಮನೋವಿಕಾರಗಳನ್ನು ಯಾವಾಗ್ಗೆ ದೇವರು ಮನೋರಾಜ್ಯದಿಂದ ಕಿತ್ತು ಹಾಕುವನೋ, ಆವಾಗ್ಗೆ ಬಂದರಕ್ಷಣದಲ್ಲಿ ಈ ಸರ್ವ ಜಗತ್ತು ರಾಕ್ಷಸೀವಾಸಕ್ಕೆ ಸಮರ್ಥವಾಗಬಹುದು. ಜನರು ನರಭಕ್ಷ್ಯರಾಗಬಹುದು, ಎಲ್ಲ ಕಡೆಗೆ ದೊಡ್ಡ ಹಾಹಾಕಾರವೇ ಆಗಬಹುದು. ಈ ಪ್ರಪಂಚದಲ್ಲಿ ಪ್ರೇಮದ ಹೊರ್ತು ಉಪಯುಕ್ತವಾದ ಎರಡನೆಯದೇನೂ ಇಲ್ಲ. ಪ್ರೇಮವು ಜಗತ್ತಿನ ಪ್ರಾಣವಾಗಿರುವದು. ಪ್ರೇಮ-ಪ್ರಣಯ-ಪ್ರೀತಿಗಳಿಲ್ಲದ ಹೃದಯವು ಜೀವಯುಕ್ತವಾಗಿದ್ದರೂ, ಮೃತಪ್ರಾಯವಾದದ್ದೇ ಸರಿ. ಮಾಯೆ, ಮಮತೆ, ಆತ್ಮೀಯತೆ ಮುಂತಾದ ಮನೋವಿಕಾರಗಳು ಒಂದು ವೇಳೆ ಇಲ್ಲವಾದರೆ ಜಗತ್ತಿನಲ್ಲಿ ಸುರಕ್ಷಿತತನವೇ ಇರಲಿಕ್ಕಿಲ್ಲ.

ವಾಚಕರೇ, ಕಂದಮೂಲಾದಿಗಳನ್ನು ತಿಂದು ಜೀವಿಸಿ, ಭಗವೀವಸ್ತ್ರವನ್ನು ಧಾರಣ ಮಾಡಿಕೊಂಡು, ಸಂಸಾರ ವಿಷಯದಲ್ಲಿ ವಿಮುಖನಾಗಿ, ತಪಶ್ಚರ್ಯದ ಸಲುವಾಗಿ ನಿರ್ಮಾನುಷಾರಣ್ಯದಲ್ಲಿ ವಾಸಮಾಡುವಂಥ ತಪಸ್ವಿಯು ಕೂಡ ಪ್ರೇಮಶೂನ್ಯನಾಗಿರುವದಿಲ್ಲ. ಸಂಸಾರದ ಮೇಲೆ ಬೇಕಾದಷ್ಟು ತಿರಸ್ಕಾರವಿದ್ದರೂ, ಪ್ರೇಮದಿಂದ ದೂರವಾಗಿರುವದು ದುರಾಪಾಸ್ತವೇ ಸರಿ. ಪ್ರೇಮದ ಸಂಚಾರವಿಲ್ಲದ ಹೃದಯವು ಪಾಷಾಣಕ್ಕಿಂತಲೂ ಕಠಿಣವಾದದ್ದೆಂದು ಹೇಳಬಹುದು. ಮನುಷ್ಯನ ಹೃದಯಕ್ಕೆ ಪ್ರೇಮವು ಒಂದು ಆಭರಣವಾಗಿದೆ. ಸದ್ಗುಣದ ಅಭಿವೃದ್ಧಿಗೆ ಪ್ರೇಮವು ಮೂಲಸಾಧನೀಭೂತವಾಗಿದೆ. ಜಗತ್ತಿನಲ್ಲಿ ಕೀರ್ತಿಯನ್ನು ಪಡೆದು ಗತಿಸಿರುವ ಸಾಧು-ಸಂತ-ಕವಿ-ಲೇಖಕರ ಹೃದಯವೆಲ್ಲ ಪ್ರೇಮಮಯವಾಗಿತ್ತೆಂದು ನಿರ್ಬಾಧವಾಗಿ ಹೇಳಬಹುದು. ಜಗತ್ತಿನ ಕಾರ್ಯಗಳೆಲ್ಲ ಪ್ರೇಮದಿಂದಲೇ ನಡೆಯುತ್ತವೆಂದು ನಿರ್ಭಯವಾಗಿ ಹೇಳಬಹುದು. ಮನುಷ್ಯಪ್ರಾಣಿ ಒಂದಕ್ಕೇಕೆ? ಯಾವತ್ತೂ ಜೀವಕೋಟಿಗೆ ಈಶ್ವರನು ಆ ಪ್ರೇಮವನ್ನು ಕೊಟ್ಟಿದ್ದಾನೆ. ಭಯಂಕರ ಕ್ರೂರ ಪಶುಗಳಿಗೂ ಸಹ ಈಶ್ವರನು ಆ ಗುಣವನ್ನು ಕೊಟ್ಟಿದ್ದಾನೆ. ನಾವು ಕ್ರೂರ ಮೃಗದ ಸಹವಾಸವನ್ನು ಮಾಡಿದರೆ, ಅದು ನಮ್ಮಲ್ಲಿಯೇ ಆಡುತ್ತದೆ. ನಮ್ಮ ಸಹವಾಸದಿಂದ ಅದಕ್ಕೆ ಬಹಳ ವಿನೋದವೆನಿಸುತ್ತದೆ. ಅದರ ಸಹವಾಸದಿಂದ ನಮಗೂ ಅತ್ಯಾನಂದವಾಗುತ್ತದೆ.

ಹರಿಯ ಧ್ಯಾನದಿಂದ ಮಹಾ ಭಗವದ್ಭಕ್ತ ಪ್ರಹ್ಲಾದನಿಗೆ ಈ ಜಗತ್ತು ತುಚ್ಛೀಕಾರವಾಗಿ ಕಾಣಿಸಲಿಲ್ಲೇ? ಅವನು ಈಶ್ವರೀಭಕ್ತಿಯ ಸಲುವಾಗಿ ಈಶ್ವರೀ ಪ್ರೇಮದ ಸಲುವಾಗಿ ತಂದೆಯೊಡನೆ ವೈರತ್ವವನ್ನು ಸಂಪಾದಿಸಿಕೊಂಡನು. ಕೇವಲ ಆ ನಿಸ್ಸೀಮ ಪ್ರೇಮದಿಂದಲೇ ಅವನಿಗೆ ಅವನ ಹೆತ್ತಮ್ಮನು ವಿಷವನ್ನು ಕುಡಿಸಿದಳು. ಸ್ವತಃ ತಂದೆಯೇ ಅವನನ್ನು ಅಗ್ನಿಕುಂಡನಲ್ಲಿ ಚೆಲ್ಲಿಸಿದನು. ಆದರೂ ಅವನು ಈಶ್ವರನ ಮೇಲಿನ ತನ್ನ ಸದ್ಭಾವವನ್ನು ಬಿಡಲಿಲ್ಲ. ಈ ಪ್ರಕಾರವಾದ ಏಕನಿಷ್ಠ ಪ್ರೇಮವೇ ಆ ಪ್ರಹ್ಲಾದನ ಹೃದಯಮಂದಿರದಲ್ಲಿ ಮೂರ್ತಿಮಂತವಾಗದಿದ್ದರೆ ಅವನು ಇವತ್ತಿನ ವರೆಗೆ ಸರ್ವ ಭುವನಕ್ಕೂ ವಂದ್ಯನಾಗುತ್ತಿದ್ದನೇನು? ಜಗತ್ತಿನಲ್ಲಿ ಪ್ರೀತಿಯ ವಸ್ತುವು ಪ್ರಾಣಕ್ಕಿಂತಲೂ ಮಹತ್ವದ್ದಾಗಿ ತೋರುತ್ತದೆ. ಒಮ್ಮೊಮ್ಮೆ ಅದರ

ಪ್ರಸ್ತಿಯ ಸಲುವಾಗಿ ಪ್ರಾಣದ ಮೋಹವನ್ನೇ ತೊರೆದು ಬಿಡಬೇಕಾಗು ತ್ತದೆ. ಮೇಲಿನ ವಿವೇಚನದಿಂದ ಪ್ರೇಮವು ಎಷ್ಟು ವಿಲಕ್ಷಣವಾದದ್ದೆಂಬು ವದು ಸಹಜವಾಗಿ ಕಲ್ಪನೆಯಲ್ಲಿ ಬರುವಂತಿದೆ. ವೇಣೂ-ಕೃಷ್ಣರಾಯರ ಸಹವಾಸವು ಬಾಲ್ಯನಲ್ಲಿಯೇ ತೊಡಕಿತ್ತು, ಇಬ್ಬರು ಒಂದೇ ಸ್ಥಳದಲ್ಲಿ ಆಡಿ ದ್ದರು, ತಿಂಬುಂಬುವದು ಒಂದೇ ಸ್ಥಳದಲ್ಲಿ ಆಗಿತ್ತು, ಇಬ್ಬರಿಗೂ ಶಿಕ್ಷಣವು ಒಂದೇ ಸ್ಥಳದಲ್ಲಿ ದೊರೆತಿತ್ತು. ಇಬ್ಬರಲ್ಲಿಯ ಪರಸ್ಪರ ಪ್ರೇಮದ ಬಗ್ಗೆ ಕಲ್ಪನೆಯನ್ನು ಮಾಡಿಕೊಡುವದು ದುರಾಪಾಸ್ತವೇ ಸರಿ. ಕಲ್ಪನೆ ಮಾಡಿ ಕೊಡುವಷ್ಟು ಅತುಲ ಲೇಖನಸಾಮರ್ಥ್ಯವು ನಮ್ಮಲ್ಲಿಲ್ಲವೆಂದು ನಾವು ಪ್ರಾಂ ಜಲ ಮನಸ್ಸಿನಿಂದ ಒಪ್ಪಿಕೊಳ್ಳುತ್ತೇವೆ.

ಕಾಲೇಜದ ಸೂಟಿಯ ನಿಮಿತ್ತ ಕೃಷ್ಣರಾಯನು ಮುಂಬಯಿಯಿಂದ ಹೊರಟು ಹಾದಿಯಲ್ಲಿ ಬರುತ್ತಿರುವಾಗ್ಗೆ ಅವನ ಮನಸ್ಸಿನಲ್ಲಿ ತರತರದ ಕಲ್ಪನಾತರಂಗಗಳು ಉತ್ಪನ್ನವಾಗಿದ್ದವು. ನನ್ನನ್ನು ನೋಡಿದ ಕೂಡಲೆ ವೇಣುವು "ಚಂದ್ರನನ್ನು ಕಂಡು ಕುಮುದಿನಿಯು ಆನಂದಬಡುವಂತೆ" ಆನಂದಬಟ್ಟಾಳು; ಆಗ ನಾನು ಅವಳನ್ನು ತರತರದ ವಿನೋದೋಕ್ತಿಗಳಿಂ ದ ಸಂತುಷ್ಟ ಸಬೇಕು, ಅವಳೊಡನೆ ಕಲ್ಯಾಣಕಾರಕವಾದ ಮಾತನ್ನಾಡುತ್ತ ಕುಳಿತುಕೊಳ್ಳಬೇಕು, ಬಹಿಷ್ಕಾರದ ಸಲುವಾಗಿ ಅವಳಿಗೆ ಅನೇಕ ಧೈರ್ಯ ವಚನಗಳನ್ನು ಹೇಳಬೇಕು ಎಂಬೀ ಕಲ್ಪನಾತರಂಗಗಳು ಅವನ ಮನೋ ಸಾಗರದಲ್ಲಿ ದಡಬಡಿಸುತ್ತಿದ್ದವು. ಅವಂತೀಪುರಕ್ಕೆ ಬರುವದೊಂದೇ ತಡ ವು; ಕೃಷ್ಣರಾಯನು ಮನೆಯಲ್ಲಿ ತನ್ನ ಗಂಟುಗದಡಿಗಳನ್ನು ಚಲ್ಲಿ, ಸಾಂಪ್ರ ದಾಯದಂತೆ ಮನೆಯ ಜನರಿಗೆ ತನ್ನ ಕ್ಷೇಮಸಮಾಚಾರವನ್ನು ಹೇಳದೆ, ನೆಟ್ಟಗೆ ವೇಣುವಿನ ಮನೆಗೆ ಬಂದನು. ಆದರೆ ಅಲ್ಲಿಗೆ ಹೋದ ಕೂಡಲೆ ಒಂದು ವಿಲಕ್ಷಣವಾದ ದರ್ಶನೀಯತ್ವವು ಅವನ ದೃಷ್ಟಿಗೆ ಬಿದ್ದಿತು. ಪತ್ರ ವು ಸಿಕ್ಕ ಕೂಡಲೆ ಅವನಿಗೆ ಅವಳ ಕೋಣೆಯಲ್ಲಿ ಬಹಳ ಹೊತ್ತು ಕೂಡ್ರು ವಂತಾಗಲಿಲ್ಲ. ಬೇಗನೆ ಅವನು ತನ್ನ ಮನೆಗೆ ಬಂದು, ಆ ಪತ್ರವನ್ನು ಓದಿ ನೋಡಿದನು. ಪತ್ರದಲ್ಲಿಯ ಚಮತ್ಕಾರಿಕ ಸಂಗತಿಯನ್ನು ನೋಡಿ, ಅವನ ಕೋಮಲ ಹೃದಯವು ವಿದೀರ್ಣವಾಗಿ ಹೋಯಿತು. ದುಷ್ಟ ಸಮಾ ಜದ ಸಂಬಂಧವಾಗಿ ಅವನಿಗೆ ಬಹಳ ಸಂತಾಪವಾಯಿತು. ವೇಣುವಿನ

ಕೃತನಿಶ್ಚಯದ ಬಗ್ಗೆ ಅವನಿಗೆ ಬಹಳ ಸಂತೋಷಾಶ್ಚರ್ಯವಾಯಿತು. ಇಡೀ ಹನ್ನೆರಡು ತಾಸು ರಾತ್ರಿಯನ್ನು ಆ ಪತ್ರದ ವಿಷಯದಲ್ಲಿಯೇ ಕಳೆದನು. ದುಃಖಾಗ್ನಿಯ ಜ್ವಾಲೆಯಿಂದ ಅವನ ಹೃದಯವು ಸುಟ್ಟು ಸುರೆಹೊಯ್ದು ಹೋಯಿತು. ವೇಣುವಿನ ಹೊರ್ತು ಕೃಷ್ಣರಾಯನ ಲಗ್ನವೇ ಆಗುತ್ತಿದ್ದಿಲ್ಲ ವೆಂದು ಅನ್ನಲಿಕ್ಕೆ ಬರುವಂತಿದ್ದಿಲ್ಲ. ವೇಣುವಿಗಿಂತಲೂ ಸುಶಿಕ್ಷಿತ ಸುಂದರ ಳಾದ ಸ್ತ್ರೀಯು ದೊರೆಯಲಿಕ್ಕೆ ತಿಲಾಂಶವಾದರೂ ಸಂದೇಹವಿದ್ದಿಲ್ಲ. ಆದರೆ ವೇಣುವಿನ ಮೇಲಿನ ಪ್ರೇಮರಜ್ಜುವಿನಿಂದ ಅವನು ಪೂರ್ಣ ಬಂಧಿಸಲ್ಪಟ್ಟ ದ್ದರಿಂದ, ವೇಣುವಿನ ಹೊರತು ಅವನಿಗೆ ಸರ್ವ ಜಗತ್ತು ಶೂನ್ಯರೂಪವಾಗಿ ಕಾಣಿಸುತ್ತಿತ್ತು ಅವಳ ಹೊರ್ತು ಮತ್ತೇನೂ ಅವನಿಗೆ ತಿಳಿಯುತ್ತಿದ್ದಿಲ್ಲ ಅವಳ ಹೊರ್ತು ಮತ್ತೇನೂ ಅವನ ಕಣ್ಣಿಗೆ ಕಾಣಿಸುತ್ತಿದ್ದಿಲ್ಲ. ವೇಣುವಿ ನ ಪ್ರಥಮನಿಶ್ಚಯವನ್ನು ಹೇಗೆ ನಿವಾರಿಸಬೇಕು, ಅವಳಿಗೆ ದುಷ್ಟ-ಸಮಾಜದ ಭೀತಿಯಿದ್ದರೆ ಆಭೀತಿಯನ್ನು ನಿವಾರಿಸಲಿಕ್ಕೆ ನಾನೊಬ್ಬನೇ ಸಾಕೆಂಬುವ ಕಲ್ಪನೆಯನ್ನು ಅವಳಿಗೆ ಹೇಗೆ ಮಾಡಿಕೊಡಬೇಕು, ಬ್ರಹ್ಮಚರ್ಯವ್ರತವು ಬಹಳ ಕಠಿಣವಾದದ್ದೆಂಬುವದನ್ನು ಅವಳ ಮನಸ್ಸಿನಲ್ಲಿ ಹೇಗೆ ಸ್ಥಾಪಿತ ಮಾಡಬೇಕು, ಅವಳ ವಿಚಾರವನ್ನು ಬದಲಾಯಿಸಲಿಕ್ಕೆ ಏನೇನು ಪ್ರಯತ್ನ ಮಾಡಬೇಕು, ಎಂಬೀ ವಿಚಾರಗಳಿಂದ ಅವನ ಮನಸ್ಸು "ಗಾಳಿಯೊಳಗಿನ ದೀವಿಗೆಯಂತೆ" ಚಂಚಲವಾಗಿತ್ತು. ಬೆಳತನಕ ಅವನ ಕಣ್ಣಿಗೆ ಕಣ್ಣು ಹತ್ತಲಿಲ್ಲ. ಕಡೆಗೆ ಇನ್ನೊಂದು ಬಾರೆ ವೇಣುವಿನ ಬಳಿಗೆ ಹೋಗಿ, ಪ್ರಯ ತ್ನ ಮಾಡಬೇಕೆಂದು ಅವನು ನಿಶ್ಚಯಿಸಿದನು. ಅವನು ಯಾವಾಗ್ಗೆ ಬೆಳಗಾ ದೀತೋ, ಯಾವಾಗ್ಗೆ ವೇಣುವಿನ ಮುಖಕಮಲವನ್ನು ನೋಡೇನೋ ಎಂಬ ಉತ್ಕಟಾಪೇಕ್ಷೆಯಿಂದ ಮಲಗಿದ್ದನು.

ಇತ್ತ ಕೃಷ್ಣರಾಯನ ಸ್ಥಿತಿಗಿಂತಲೂ ವೇಣುವಿನ ಸ್ಥಿತಿಯು ಬಹಳೇ ಚಮತ್ಕಾರವಾಗಿತ್ತು. ಪೂರ್ಣರಾತ್ರಿ ಅವಳಿಗೆ ನಿದ್ರೆಯು ಬರಲಿಲ್ಲ ವೇಣು ವು ಕೃಷ್ಣರಾಯನನ್ನು ನೋಡುವ ತನಕ ಅವಳ ಮನಸ್ಸು ಚಂಚಲವಾಗಿ ದ್ದಿಲ್ಲ. ಆದರೆ ಕೃಷ್ಣರಾಯನ ಮನೋಹರ ಮೂರ್ತಿಯು ದೃಷ್ಟಿಗೆ ಬಿದ್ದ ಕೂಡಲೆ ಅವಳ ವಿಚಾರವು ತೀರ ಭಿನ್ನವಾಯಿತು. ಒಳ್ಳೇ ಆವೇಶದಿಂದ ಬರೆದ ಪತ್ರವನ್ನು ಅವಳು ಕೃಷ್ಣರಾಯನ ಕೈಯಲ್ಲಿ ಕೊಡಲಿಕ್ಕೆ ಹಿಂಜರಿ

ದಳು. ಪತ್ರದಲ್ಲಿ ಸಂಸಾರದ ವಿಷಯವಾಗಿ ನಿರಭಿಲಾಷೆಯನ್ನು ತೋರಿಸಿ ಬರೆದ ಅವಳು ಕೃಷ್ಣರಾಯನ ಮುಖದರ್ಶನವಾದ ಕೂಡಲೆ ಮನಸ್ಸು ಚಂಚಲ ಮಾಡಿದಳು. ವಾಚಕರೇ, ನೋಡಿದಿರಾ! ಮನುಷ್ಯನ ಮನಸ್ಸಿನ ಹೊಯಿದಾಟವನ್ನು!! ಬ್ರಹ್ಮಚರ್ಯವ್ರತದಿಂದ ಇರಬೇಕೆಂದು ಬಾಯಿಂದ ಅಂದಂತೆ ನಡೆಯುವದು ಬಹು ಕಠಿಣವಾದದ್ದೆಂಬುವದು ಆ ಮೂಢಮತಿಯಾದ ವೇಣುವಿಗೆ ಏನು ಅರಿಕೆ? ಹೃದಯದಲ್ಲಿ ಬೇರುಗೊಂಡ ಪ್ರೇಮವನ್ನು ತೆಗೆದುಹಾಕುವದು ಬಹಳ ಕಠಿಣವೆಂಬುವದಾದರೂ ಅವಳಿಗೆ ಏನು ಗೊತ್ತು? ಕೃಷ್ಣರಾಯನು ದೃಷ್ಟಿಗೆ ಬೀಳುವ ತನಕ ಅವಳು ದೊಡ್ಡ ಒಡ್ಡನ್ನು ಕಟ್ಟಿ ಪ್ರೇಮಪ್ರವಾಹವನ್ನು ತಡೆದು ನಿಲ್ಲಿಸಿದ್ದಳು. ಪ್ರೇಮಪ್ರವಾಹದ ಪ್ರಚಂಡ ಶಕ್ತಿಯನ್ನಾದರೂ ಅನನುಭವಿಯಾದ ಅವಳೇನು ಬಲ್ಲವಳು! ವಜ್ರದಂತೆ ಗಟ್ಟಿಮುಟ್ಟಾದ ದೊಡ ದೊಡ್ಡ ಒಡ್ಡುಗಳನ್ನು ಸಮೂಲ ನಾಶ ಮಾಡಿ, ತನಗೆ ಬೇಕಾದ ಮಾರ್ಗವನ್ನು ಮಾಡಿಕೊಂಡು ಹೋಗುವ ಪ್ರೇಮಪ್ರವಾಹದ ಉಚ್ಚ ಕಲ್ಪನೆಯಾದರೂ ಆ ಮುಗ್ಧ ವೇಣುವಿಗೆ ಹೇಗೆ ಉದ್ಭವವಾಗಬೇಕು. ಕೃಷ್ಣರಾಯನು ದೃಷ್ಟಿಗೆ ಬಿದ್ದ ಕೂಡಲೆ ಅವಳ ಅವಿವಾಹಿತಳಾಗಿರಬೇಕೆಂಬ ಕೃತನಿಶ್ಚಯವು ಮಣ್ಣುಗೂಡಲಾರಂಭಿಸಿತು. ಬರೆದಿಟ್ಟ ಪತ್ರವು ಕೃಷ್ಣರಾಯನ ದೃಷ್ಟಿಗೆ ಬೀಳದಿದ್ದರೆ, ಅವಳು ಎಂದೂ ಆ ಪತ್ರವನ್ನು ಅವನಿಗ ಕೊಡುತ್ತಿದ್ದಿಲ್ಲ; ಆದರೆ ಪತ್ರವು ದೃಷ್ಟಿಗೆ ಬಿದ್ದದರಿಂದ ಅವಳು ನಿರುಪಾಯಳಾಗಿ, ಮನಸ್ಸಿನಲ್ಲಿ ಹಳಹಳಿ ಮಾಡುತ್ತ, ಕೃಷ್ಣರಾಯನಿಗೆ ಪತ್ರವನ್ನು ಕೊಡುವ ಭಾಗವು ಬಿದ್ದಿತು. ತಾನು ಜಾತಿಚ್ಯುತಳಾದ್ದರಿಂದ ಕೃಷ್ಣರಾಯನು ತನ್ನ ಬಳಿಗೆ ಬರಲಿಕ್ಕಿಲ್ಲವೆಂದೂ, ಬಂದರೆ ತಿರಸ್ಕಾರದ ಮಾತುಗಳಿಂದ ಅವನ ಮನಸ್ಸನ್ನು ನೋಯಿಸಿ ಕಳಿಸಬೇಕೆಂದೂ ಅವಳು ಪೂರ್ವಾಲೋಚನೆಯನ್ನು ಮಾಡಿದ್ದಳು. ಉದಾತ್ತ ಮನಸ್ಸಿನ ಕೃಷ್ಣರಾಯನಿಗೆ ಆ ವೇಣುವಿನ ಮನೋಭಾವನೆಯ ಬಗ್ಗೆ ಏನೂ ಕಲ್ಪನೆಯಿದ್ದಿಲ್ಲ. ಅವನು ಮೊದಲಿನಂತೆ ವೇಣುವಿನೊಂದಿಗೆ ಪ್ರೀತಿಯ ಮಾತುಗಳನ್ನಾಡುತ್ತಿದ್ದನು. ವೇಣುವು ಕೃಷ್ಣರಾಯನ ಸರಳ ಸ್ವಭಾವಕ್ಕೆ ಬಹಳೇ ಚಕಿತಳಾದಳು. ಅವಳ ತಾಯಿಯಿಂದ ಕಟ್ಟಲ್ಪಟ್ಟ ದುರ್ಧರವಾದ ಮಂದಿರವು ಮೆಲ್ಲಮೆಲ್ಲನೆ ಶಿಥಿಲವಾಗಹತ್ತಿತು. ಆ ಮಂದಿರವು ಹೊತ್ತುಕೊಂಡು

ಬೀಳಬಾರದೆಂದು ಅವಳೂ ಭಗೀರಥ ಪ್ರಯತ್ನವನ್ನು ಮಾಡುತ್ತಿದ್ದಳು. ಆದರೆ ಅದೆಲ್ಲ ಮರುಭೂಮಿಯಲ್ಲಿ ಬೆಳೆಯನ್ನು ತಕ್ಕೊಳ್ಳಲಿಕ್ಕೆ ಪ್ರಯತ್ನಿಸಿದಂತಾಗುತ್ತಿತ್ತು. ಅವಳು ಆ ರಾತ್ರಿಯನ್ನು ಮೇಲಿನ ವಿಚಾರ ವಿಸ್ತಾರಂದಲ್ಲಿಯೇ ಮುಗಿಸಿದಳು.

ಆ ಕಷ್ಟಕಾರಕ ರಾತ್ರಿಯು ಮುಗಿದು ಬೆಳಗಾಯಿತು. ಕೃಷ್ಣರಾಯನು ಜೇಗ ಜೇಗ ಪ್ರಾತರ್ವಿಧಿಯನ್ನು ತೀರಿಸಿಕೊಂಡು, ಸ್ವಲ್ಪ ಉಪಹಾರವನ್ನು ಮಾಡಿಕೊಂಡು, ವೇಣುವಿನ ಕಡೆಗೆ ಹೊರಟು ಹೋದನು. ವಾಚಕರೇ, ನಡೆಯಿರಿ, ನಾವೂ ಕೃಷ್ಣರಾಯನ ಬೆನ್ನ ಹಿಂದೆಯೇ ಹೋಗಿ, ಅಲ್ಲಿ ಏನೇನು ನಡಿಯುತ್ತದೆ ನೋಡೋಣ.

ವೇಣುವಿನ ಪೂರ್ವದ ಕೋಣೆಯಲ್ಲಿಯೇ ಪಲ್ಲಂಗದ ಮೇಲೆ ವೇಣೂ ಕೃಷ್ಣರಾಯರು ಕುಳಿತಿದ್ದರು. ವೇಣುವಿನ ಹಸ್ತವನ್ನು ಕೃಷ್ಣರಾಯನು ತನ್ನ ಹಸ್ತದಿಂದ ಹಿಡಿದುಕೊಂಡಿದ್ದನು. ವೇಣುವು ಕೃಷ್ಣರಾಯನ ಹಸ್ತ ಯುಗ್ಮದ ಮೇಲೆ ಲಜ್ಜೆಯಿಂದ ತನ್ನ ಮುಖ-ಕಮಲವನ್ನು ಒಗೆದಿದ್ದಳು. ವೇಣುವಿನ ಕಣ್ಣುಗಳು ಕಣ್ಣೀರಿನಿಂದ ತುಂಬಿದ್ದವು. ಇಂಥ ಸ್ಥಿತಿಯಲ್ಲಿ ಪ್ರೇಮಲ ಸ್ವರದಿಂದ ಕೃಷ್ಣರಾಯನು ಅಂದದ್ದೇನಂದರೆ:—ವೇಣೂ, ನನಗೆ ಸುಖವಾಗಿ ನಿನಗೆ ದುಃಖವಾಗುವಂಥ ಅಪರಾಧವು ನನ್ನಿಂದ ಎಂದಾದರೂ ಮಾಡಲ್ಪಟ್ಟಿರುವದೇ? ಸಮಾಜವು ನಡೆದು ಹೋಗುವ ಮಾರ್ಗದಲ್ಲಿ ನಾನೂ ನಡೆದು ಹೋಗಲಿಕ್ಕೆ ನಾನೇನು ಅಜ್ಞಾನಿಯೇ? ಈ ಪ್ರಕಾರ ನಿನ್ನ ಮನೋನಯವಿದ್ದರೆ ಯಾರು ಮಾಡುವದಾದರೂ ಏನು?

ವೇಣು:—(ಶಾಂತಸ್ವರದಿಂದ) ಕೃಷ್ಣರಾವ, ನಿಮ್ಮ ಅಪೇಕ್ಷೆಯಂತೆ ವೇಣುವು ನಿಮ್ಮವಳಾದರೆ, ಸುಖವಾದೀತೆಂದು ನನಗೆ ತೋರುವದಿಲ್ಲ. ನಿಮಗೆ ಸುಖವಾಗಿ ತೋರುವ ಮಾರ್ಗವು ನನಗೆ ಖೇದಕಾರಕವಾಗಿ ತೋರುತ್ತದೆ. ಈ ಬಗ್ಗೆ ನಿಮ್ಮಂಥ ಸುಜ್ಞ ಶಿರೋಮಣಿಗಳಿಗೆ ವಿವರಿಸಿ ಹೇಳಬೇಕಾಗಿಲ್ಲ.

ಕೃಷ್ಣರಾವ:—ವೇಣೂ ನಿನ್ನೊಡನೆ ಲಗ್ನವಾದರೆ ನನಗೇನೋ ವಿಪತ್ಪ್ರಾಪ್ತವಾಗುತ್ತದೆ. ಒಂದು ವೇಳೆ ನಿನ್ನೊಡನೆ ಲಗ್ನವಾಗದೆ, ಬೇರೊಬ್ಬ ಸ್ತ್ರೀಯನ್ನು ನಾನು ಲಗ್ನವಾದರೆ ನನಗೆ ರಾಜಪದವಿಯು ಸಿಕ್ಕರೂ ಸಿಗಬಹುದು.

ವೇಣು :—(ಅಧೋದೃಷ್ಟಿಯಿಂದ) ಕೃಷ್ಣರಾವ ಹಾಗೆ ನನ್ನ ಮಾತಿನ ಅಭಿಪ್ರಾಯವಲ್ಲ. ನನ್ನನ್ನು ನೀವು ಲಗ್ನವಾದರೆ, ನಿಶ್ಚಯವಾಗಿ ನಿಮಗೆ ದುಃಖಪ್ರಾಪ್ತಿಯಾಗುವದು! ಎಂಬುವದೇ ನನ್ನ ಮಾತಿನ ಅಭಿಪ್ರಾಯವು. ವಿವಾಹವು ಸುಖದ ಸಾಧನವೇ ಹೊರ್ತು ದುಃಖದ ಸಾಧನವಲ್ಲ. ಯಾವ ವಿವಾಹದಿಂದ ನಿಮಗೆ ದುಃಖವು ಸಂಭವಿಸುವದೋ, ಆ ವಿವಾಹದ ಹೆಸರನ್ನು ಕೂಡ ನನ್ನ ಮುಂದೆ ತೆಗೆಯಬೇಡಿರಿ.

ಕೃಷ್ಣರಾವ :—(ವೇಣುವಿನ ಕೈಯನ್ನು ಬಿಟ್ಟು) ವೇಣು, ನಿನ್ನ ಮಾತುಗಳಿಂದ ನನ್ನ ಆಶೆಯೂ, ನನ್ನ ವಿಶ್ವಾಸವೂ ನಿರರ್ಥಕವಾದವು! ನೀನು ಇಷ್ಟು ಸ್ನೇಹಶೂನ್ಯಳಿದ್ದೀ ಎಂಬುವದು ನನಗೆ ಸ್ವಲ್ಪ ಕಲ್ಪನೆಯಲ್ಲಿ ಯಾದರೂ ಬರಲಿಲ್ಲ.

ವೇಣುವು ಏನೂ ಮಾತಾಡಲಿಲ್ಲ. ಅವಳು ಕೆಳಗೆ ಮೋರೆಯನ್ನು ಮಾಡಿ, ಸ್ತಬ್ಧವಾಗಿ ಕುಳಿತುಕೊಂಡಳು. ವೇಣುವಿನಿಂದ ಉತ್ತರವು ದೊರೆ ಯದ್ದನ್ನು ಕಂಡು ಕೃಷ್ಣರಾಯನು:—ವೇಣೂ, ಸುಖದ ವಿಷಯಕ್ಕೂ, ದುಃಖದ ವಿಷಯಕ್ಕೂ ನಿನ್ನ ಕಲ್ಪನೆಯೇ ಬೇರೆ ಇರುತ್ತದೆ. ನೀನು ಬೇರೆ ಕಲ್ಪನೆಯನ್ನು ಮಾಡದಿದ್ದರೆ, ನಿಶ್ಚಯವಾಗಿ ನೀನು ನನ್ನ ಮಾತಿಗೆ ಸೈ ಹಾಕು ತ್ತಿದ್ದಿ. ನಿನ್ನ ಇಚ್ಛೆಯ ವಿರೋಧವಾದ ಕಾರ್ಯವನ್ನು ಮಾಡಬೇಕೆಂದು ನಾನು ಎಂದೂ ನೆನೆಸುವದಿಲ್ಲ. ಮುಖ್ಯವಾಗಿ ನಿನಗೆ ಅಹಿತವಾಗ ಬಾರದೆಂದು ನಾನೀ ವಿಶ್ವಪ್ರಯತ್ನವನ್ನು ಮಾಡುತ್ತೇನೆ.

ವೇಣು :—ಕೃಷ್ಣರಾವ, ನಿಮ್ಮ ವಿಶ್ವಪ್ರಯತ್ನದಿಂದ ನನಗೆ ಕಲ್ಯಾಣ ವಾದೀತೆಂದು ನನಗೆ ತೋರುವದಿಲ್ಲ. ನಾನು ಆಲೋಚಿಸಿದ ಸಂಗತಿಯಿಂದ ಲೇ ನನಗೆ ಹಿತವಾಗುವದೇ ಹೊರತು ನಿಮ್ಮ ಆಲೋಚನೆಯಿಂದ ನನಗೆ ಹಿತವಿಲ್ಲ.

ವೇಣುವಿನ ವಚನಶ್ರವಣದಿಂದ ಕೃಷ್ಣರಾಯನಿಗೆ ಸ್ವಲ್ಪ ನಗೆಯು ಬಂದಿತು. ಆದರೂ ಅವನು ಆ ನಗೆಯನ್ನು ಬಹಿರಂಗದಲ್ಲಿ ಸ್ಪಷ್ಟಮಾಡದೆ ವೇಣುವನ್ನು ಕುರಿತು ಅಂದದ್ದೇನೆಂದರೆ:—ವೇಣೂ, ನಿನ್ನ ಕಲ್ಪನೆಯು ಬಹು ಭ್ರಾಂತಿಕಾರಕವಾದದ್ದು! ಕುಕಲ್ಪನೆಗಳಿಗಾಶ್ರಯಗೊಟ್ಟು ಮನಬಂ

ದಂತೆ ದೃಢನಿಶ್ಚಯವನ್ನು ಮಾಡುವದು ಮರುಳುತನದ ಮಾತಾಗಿದೆ!! ನಿನ್ನ ನ್ನು ಲಗ್ನವಾಗಿ ನಿನ್ನನ್ನು ದುಃಖಸಾಗರದಲ್ಲಿ ಚೆಲ್ಲಿ, ನಾನೂ ದುಃಖಸಾಗರ ದಲ್ಲಿ ಮುಳುಗಲಿಕ್ಕೆ ನಾನೇನು ಮೂರ್ಖನಲ್ಲ. ವಿವಾಹದ ಪರಿಣಾಮವು ಸುಖಕರವಾಗುವದೆಂದು ನನಗೆ ಪೂರ್ಣ ನಂಬುಗೆಯಿದ್ದದರಿಂದಲೇ ನಾನು ನಿನಗೆ ಇಷ್ಟು ಬೋಧ ಮಾಡುವೆನು.

ವೇಣು:—(ನಿರಾಶೆಯಿಂದ) ಕೃಷ್ಣರಾವ, ನಿಮಗೆ ಇನ್ನೂ ದುಷ್ಟ ಸಮಾಜದ ಕಲ್ಪನೆಯಿಲ್ಲ. ವಿವಾಹದಿಂದ ಸುಖವಾಗುವದೆಂದನ್ನುವ ಮಾತಿ ಗೆ ನಾನೆಂದೂ ಒಪ್ಪಲಾರೆನು. ಕಾರಣ ತಾವು ಇನ್ನೊಂದು ಬಾರೆ ಆ ವಿವಾ ಹದ ಹೆಸರನ್ನು ತೆಗೆಯಬೇಡಿರಿ.

ಕೃಷ್ಣರಾವ:—ವೇಣೂ, ನೀನು ನಿನ್ನ ಸಾಂಪ್ರತ ದೃಢನಿಶ್ಚಯವನ್ನು ತ್ಯಾಜ್ಯಮಾಡಿದರೆ, ನಾನು ಆ ವಿವಾಹದ ಸಂಬಂಧವಾಗಿ ಏಕಾಕ್ಷರವನ್ನಾ ದರೂ ಉಚ್ಚರಿಸುವದಿಲ್ಲ.

ವೇಣು:—(ವಿಷಣ್ಣವದನದಿಂದ) "ಸಮಾಜದಲ್ಲಿ ಎಂಥೆಂಥ ನೀಚ ಜನರಿದ್ದಾರೆಂಬುವ ಕಲ್ಪನೆಯು ನಿಮ್ಮಕ್ಕಿಲ್ಲವಾದರೆ—"

ಕೃಷ್ಣರಾವ:—(ಸ್ವಲ್ಪ ನಕ್ಕು) "ನಿನಗಾದರೂ ಆಬಗ್ಗೆ ಯಥಾ ಯೋಗ್ಯವಾದ ತಿಳುವಳಿಕೆಯಿರುತ್ತದೆಯೇ?"

ವೇಣು:—(ಪ್ರೌಢವಾಗಿ) "ಆಬಗ್ಗೆ ನನಗೆ ತಿಳುವಳಿಕೆಯಿದ್ದದ ರಿಂದಲೇ ನಾನು ಹಾಗೆ ಮಾತಾಡುವದು!"

ಕೃಷ್ಣರಾವ:—(ಸ್ವಲ್ಪ ವೇಳೆಯ ವರೆಗೆ ಸುಮ್ಮನಿದ್ದು) "ವೇಣೂ, ನೀನನ್ನುವ ಮಾತಿಗೆ ಕಾರಣವಾದದ್ದೂ ಯಾವದು?"

ವೇಣು:—(ತಟ್ಟನೆ) "ಕಾರಣ? ಸ್ತ್ರೀಯರಿಗಿಂತಲೂ ಸಬಲವಾಗಿ ರುವಂಥ ಪುರುಷರೇ ನಾನನ್ನುವ ಮಾತಿಗೆ ಕಾರಣರು. ದುಷ್ಟಜನರ ಭಯಂಕರ ಕೃತ್ಯದಿಂದ ದುಸ್ಸಹವಾದ ಪರಿಣಾಮಗಳಾಗುತ್ತವೆಂಬುವದು ನಿಮಗೆ ಅಗೋಚರವಾದದ್ದಲ್ಲ."

ಕೃಷ್ಣರಾವ:—"ಸುಜ್ಞಾನೆಯಾದ ವೇಣೂ, ವಿಲಕ್ಷಣವಾದ ನಿನ್ನ ಕಲ್ಪನೆಯನ್ನು ಕಂಡು, ನನಗಂತೂ ಬಹಳ ಆಶ್ಚರ್ಯವಾಗುತ್ತದೆ. ಪುರು ಷರಿಗಿಂತಲೂ ಸ್ತ್ರೀಯರಲ್ಲಿ ಕಡಿಮೆ ಧೈರ್ಯವಿರುತ್ತದೆಂದೂ, ಕಡಿಮೆ ಸಾಹ

ಸವಿರುತ್ತದೆಂದೂ, ಕಡಿಮೆ ಚಾಪಲ್ಯವಿರುತ್ತದೆಂದೂ, ಕಡಿಮೆ ನೈಪುಣ್ಯವಿ
ರುತ್ತದೆಂದೂ ನನಗೆ ತೋರುವದಿಲ್ಲ; ಇಷ್ಟೇ ಯಾಕೆ? ನಾನು ಯಾರಿಂದ
ಲೂ ಕೇಳಿಲ್ಲ—ಪುರಾಣ ಪುಣ್ಯಕಥೆಗಳಲ್ಲಿಯಾದರೂ ನೋಡಿಲ್ಲ. ಪುರುಷರಿಗೂ
ಸ್ತ್ರೀಯರಿಗೂ ಯಾವ ಯಾವ ಸಂಬಂಧವಾಗಿ ಅಂತರವಿರುತ್ತದೆಂಬುವದೂ,
ಯಾವಯಾವ ಸಂಬಂಧವಾಗಿ ಸಮಾನಾಧಿಕಾರವಿರುತ್ತದೆಂಬುವದೂ ನಿನ್ನಂಥ
ಸುಶಿಕ್ಷಿತ ಸ್ತ್ರೀಯಳಿಗೆ ಗೊತ್ತಿಲ್ಲವೆಂಬುವದನ್ನು ನೋಡಿ ಎಂಥವರಿಗೂ ಆಶ್ಚ
ರ್ಯವಾಗದೆ ಇರಲಿಕ್ಕಿಲ್ಲ. ಜನರು ಅನ್ನುತ್ತಾರೆಂದು ನೀನು ಸ್ತ್ರೀಯರ ಸ್ವಭಾ
ವವು ಮೃದುಸ್ವಭಾವವೆಂದೂ, ಸ್ತ್ರೀಯರ ಬುದ್ಧಿಯು ವಾನರಬುದ್ಧಿಯೆಂದೂ
ಅನ್ನುವದು ನಿನ್ನ ಸುಶಿಕ್ಷಿತತನಕ್ಕೆ ಲಾಂಛನದ ಮಾತಾಗಿದೆ. ಜನರ ನಿಂದ್ಯ
ವಚನಗಳಿಗಂಜಿ, ನೀನು ಧೈರ್ಯದಿಂದ ಮುಕ್ತಳಾಗಿರುವದೂ, ಪೂರ್ವದ
ಎಲ್ಲ ವಿಚಾರವನ್ನು ಬಿಟ್ಟುಕೊಟ್ಟಿರುವದೂ, ಮನಬಂದಂತೆ ದೃಢಸಂಕಲ್ಪ
ವನ್ನು ಮಾಡಿರುವದೂ ನಿನಗೆ ತೀರ ಅನುಚಿತವಾಗಿದೆ. ನಿನ್ನ ಕುಲಗೋತ್ರ
ಗಳ ವಿಷಯಕ್ಕೆ ನಿನಗೆ ಸಂಪೂರ್ಣ ಪರಿಚಯವಿರಲು, ಜನರ ನಿಂದ್ಯೋಕ್ತಿಗೆ
ಹೆದರುವದು ಪೂರ್ಣ ಅವಿಚಾರಾಸ್ಪದವಾಗಿದೆ. ಜನಸಮೂಹದಲ್ಲಿ ಎಲ್ಲ
ರೂ ನೀಚರಿರುತ್ತಾರೆಂದೂ, ಎಲ್ಲರೂ ಏಕವಿಚಾರಿಗಳಿರುತ್ತಾರೆಂದೂ,
ಎಲ್ಲರೂ ಗತಾನುಗತಿಕರಿರುತ್ತಾರೆಂದೂ ನೀನು ತಿಳಕೊಂಡ ಬಗೆಯಾದರೂ
ಹೇಗೆ? ಸಮಾಜದಲ್ಲಿ ದುಷ್ಟಜನರ ಸಮಾವೇಶವಾದಂತೆ ಶಿಷ್ಟಜನರ ಸಮಾ
ವೇಶವೂ ಆಗಿರುತ್ತದೆ. ನೀನು ಇಂಥ ಕ್ಷುದ್ರವಿಚಾರಗಳಿಂದ ಮಾಡಿದ ಮ
ನೋನಿಶ್ಚಯವು ತೀರ ಹುಚ್ಚತನದ್ದಾಗಿದೆ. ಕೋಮಲೇ, ನನ್ನ ವರ್ತನವು ಎಂಥ
ಭಯಂಕರವಾದರೂ ನಾನು ನಿನ್ನನ್ನು ತಪ್ಪದೆ ರಾಜಮಾರ್ಗದಲ್ಲಿ ಕರಕೊಂಡು
ಹೋಗುತ್ತೇನೆಂಬುವದನ್ನು ಪೂರ್ಣಲಕ್ಷ್ಯದಲ್ಲಿಡು. ನಿನ್ನ ಮಾರ್ಗವು ಮಾತ್ರ
ಬಹಳ ಕಠಿಣವಾದದ್ದೂ, ದುಸ್ಸಹವಾದದ್ದೂ ಅದೆ. ನಿನ್ನ ಮಾರ್ಗವು ಈಶ್ವರ
ನಿಗೆ ಪೂರ್ಣ ಅಪ್ರಿಯವಾಗಿದೆಯೆಂಬುವದನ್ನು ನೀನು ಮರೆಯಬೇಡ. ಈಶ್ವ
ರನು ಒಳ್ಳೆಯದರ ಸಲುವಾಗಿ ಒಳ್ಳೇ ಮಾರ್ಗವನ್ನೂ, ಕೆಟ್ಟದರ ಸಲುವಾಗಿ
ಕೆಟ್ಟಮಾರ್ಗವನ್ನೂ ನಿರ್ಮಾಣಮಾಡಿರುತ್ತಾನೆ. ಬ್ರಹ್ಮದತ್ತಾಯುಷ್ಯವನ್ನೆಲ್ಲ
ಬ್ರಹ್ಮಚರ್ಯ ವ್ರತದಲ್ಲಿಯೇ ಕಳೆದರೆ ಈಶ್ವರನ ದೂತರು ಒಮ್ಮೆಲೆ ನಿನ್ನ
ನ್ನು ಪುಷ್ಪವಿಮಾನದಲ್ಲಿ ಕುಳ್ಳಿರಿಸಿಕೊಂಡು, ಒಯ್ಯುತ್ತಾರೆಂದು ನಿನ್ನ ಕಲ್ಪ

ನೆಯಿದ್ದರೆ ಅದು ಕೇವಲ ಭ್ರಾಮಕ ಕಲ್ಪನೆಯೇ ಸರಿ. ನಿನ್ನ ಅಂಬೋಣ ದಂತೆ ನೀನು ಎಲ್ಲ ತ್ಯಾಜ್ಯಮಾಡಿರುತ್ತೀಯೆಂದು ನಾನನ್ನುವದಿಲ್ಲ. ಅಸಂಬಂಧವಾಗಿ ನಿನ್ನ ಕಡೆಗೆ ತಪ್ಪಿಲ್ಲ. ನಿಶ್ಚಯದ ಯೋಗ್ಯತೆಯು ಪ್ರಸಂಗದಮೇಲೆ ಅವಲಂಬಿಸಿರುತ್ತದೆ. ಸುಜ್ಞರು ಸಂಕಟ ಪ್ರಸಂಗದಲ್ಲಿ ದುರ್ಧರ ನಿಶ್ಚಯವನ್ನು ಮಾಡುವದು ತೀರ ಭ್ರಾಂತಿಯೇ ಸರಿ. ನಿನ್ನ ತಲೆಯ ಮೇಲೆ ಮಾತೃಋಣದ ದೊಡ್ಡ ವಜ್ಝೆಯಿರುತ್ತದೆ. ನಿನ್ನಂಥ ಸುಶಿಕ್ಷಿತ ಸ್ತ್ರೀಯು ಮಾತೆಯಾಗುವದು, ಜಗತ್ತಿನಲ್ಲಿ ಸರ್ವಮಾನ್ಯವಾಗಿ ಭೂಷಣವಾಗಿದೆ. ಮಾತೃಋಣದ ಭಾರವನ್ನು ಇಳುಹುವದು ನಿನ್ನ ಶ್ರೇಷ್ಠ ಕರ್ತವ್ಯಕರ್ಮವಾಗಿದೆ. ಅದನ್ನು ಹಾಗೆಯೇ ತಲೆಯ ಮೇಲೆ ಇಟ್ಟುಕೊಳ್ಳುವದು ಅಮಾನುಷವೃತ್ತಿಯಾಗುವದು. ನೀನು ಯಾವ ಬ್ರಹ್ಮಚರ್ಯ ವ್ರತವನ್ನು ಪ್ರಪೂಜ್ಯವಾಗಿ ಭಾವಿಸಿರುವಿಯೋ, ಅದನ್ನು ನೀನು ಮಾತ್ರ ಅನುಭೋಗಿಸದೆ ಆ ಬ್ರಹ್ಮಚರ್ಯವ್ರತದ ಶ್ರೇಷ್ಠತ್ವವನ್ನು ಹತಭಾಗ್ಯ ಪತಿರಹಿತರಾದ ಸ್ತ್ರೀಯರಿಗೆ ಬೋಧಿಸುತ್ತ ಹೋದರೆ, ವಿಧವಾ ಸಮೂಹದ ಮೇಲೆ ನಿನ್ನ ಉಪಕಾರವು ಬಹಳವಾಗುತ್ತದೆ. ಯಾವತ್ತೂ ಸುಶಿಕ್ಷಿತ ಸಮಾಜವು ನಿನ್ನ ಋಣಿಯಾಗುತ್ತದೆ. ಈಶ್ವರನಿಗಂತೂ ನೀನು ಬಹಳ ಕಾರ್ಯದಕ್ಷಳೆಂಬುವದು ಪೂರ್ಣ ಮನವರಿಕೆಯಾಗುತ್ತದೆ. ನಿನ್ನಂಥ ಸುಜ್ಞಳು ಮೂರ್ಖರ ಭೀತಿ-ನಿಂದೋಕ್ತಿಗೆ ಹೆದರುವದು ತಕ್ಕದ್ದಲ್ಲ. ಜಗತ್ತಿನ ಸ್ಥಿತಿಯು ಇನ್ನೂ ನಿನಗೆ ಪರಿಚಯವಿಲ್ಲ ಜಗತ್ತಿನಲ್ಲಿ ಎಲ್ಲರಿಂದಲೂ 'ಸೈಸೈ' ಅನ್ನಿಸಿಕೊಳ್ಳುವದು ಬಹು ಕಠಿಣ. ಕೆಲವರು 'ಸೈ' ಅಂದರೆ, ಕೆಲವರು 'ಥೂ' ಅನ್ನುತ್ತಾರೆ. ಒಂದು ಮಾತಿನ ಸಲುವಾಗಿ ಒಳ್ಳೇ-ಕೆಟ್ಟ ಎಂಬ ಎರಡು ಪಕ್ಷಗಳಿರಲಿಕ್ಕೆ ಬೇಕು. ಕಾರಣ ಭೂಮಿಯಲ್ಲಿ ಜನರ ಸ್ತುತಿನಿಂದ್ಯಗಳ ಕಡೆಗೆ ಲಕ್ಷಗೊಡದೆ, ತನ್ನ ಹಿತಾಹಿತಗಳ ಸಲುವಾಗಿ ಪ್ರತಿಯೊಬ್ಬರು ಸಾರಾಸಾರ ವಿಚಾರ ಮಾಡಲಿಕ್ಕೆ ಬೇಕು

ಸುಗುಣಾಲಂಕೃತೆ, ನಿನ್ನಂಥವಳು ಸಮಾಜವೆಂಬ ಪ್ರವಾಹದಕೂಡ ಹರಿದುಹೋದಾಳೆಂದು ನನಗೆ ತೋರುತ್ತಿದ್ದಿಲ್ಲ. ಕೌಮಾರ್ಯಾವಸ್ಥೆಯಲ್ಲಿದ್ದ ನಿನ್ನ ನಿರ್ಮಲಾಂತಃಕರಣವೆತ್ತ, ಈಗಿನ ಪ್ರೌಢಾವಸ್ಥೆಯಲ್ಲಿಯ ಕಠೋರಾಂತಃಕರಣವೆತ್ತ! ಬಾಲ್ಯದಲ್ಲಿದ್ದ ನಿನ್ನ ಅತುಲ ಧೈರ್ಯವೆತ್ತ–ಈಗಿನ ನಿನ್ನ ಅಂಜುಬುರುಕತನವೆತ್ತ! ಆಗಿನ ನಿನ್ನ ಕೃಷ್ಣರಾಯನ ಮೇಲಿನ ಪ್ರೀತಿಯೆತ್ತ–

ಕೃಷ್ಣರಾಯನ ಮೇಲಿನ ಈಗಿನ ತಿರಸ್ಕಾರವೆತ್ತ! ಒಂದಕ್ಕೊಂದು ತಾಳಿಲ್ಲ. ಆಡಾನೆಗಳಷ್ಟು ಅಂತರವಾದದ್ದು ವಿಚಿತ್ರವೇ ಸರಿ.

ಮನೋಹರೆ, ಚಿಕ್ಕತನದ ಎಷ್ಟೋ ಆನಂದದಾಯಕ ಸಂಗತಿಗಳನ್ನು ನೀನು ಮರೆತಿರಬಹುದು. ಆದರೆ ನನಗೆ ಮಾತ್ರ ಅವು ಆಜನ್ಮ ಪರ್ಯಂತರ ಮರೆಯುವಂತಿಲ್ಲ.

ವೇಣು:— (ಕೃಷ್ಣರಾಯನ ಭಾಷಣವನ್ನು ನಿಲ್ಲಿಸುವ ಉದ್ದೇಶದಿಂದ) "ಆ ಮಾತು ತಕ್ಕೊಂಡು ಈಗ ಮಾಡುವದಾದರೂ ಏನು?"

ಕೃಷ್ಣರಾವ:— (ವೇಣುವಿನ ಮಾತಿನ ಕಡೆಗೆ ಲಕ್ಷ್ಯಗೊಡದೆ) "ವೇಣೂ, ಒಂದು ದಿವಸ ನೀನು 'ಮೇಘನಾಥವಧ' ಎಂಬ ಕಾವ್ಯವನ್ನು ಓದುತ್ತಿದ್ದಿ. ಆ ವೇಳೆಯಲ್ಲಿ ನೀನು ಒಂಭತ್ತು ವರ್ಷದವಳಿದ್ದಿ. ಆ ಕಾವ್ಯದಲ್ಲಿ ಸೀತಾ-ಸರಮೆಯರ ಅಶೋಕವನದಲ್ಲಿಯ ಕಥೋಪಕಥನದ ಪ್ರಸಂಗವು ಒಳ್ಳೇ ಮನೋಹರವಿದ್ದು, ಅದರ ಅರ್ಥವು ತಿಳಿಯುವದಿಲ್ಲೆಂದು ಹೇಳಿ, ಅದರ ಅರ್ಥದ ಬಗ್ಗೆ ನನಗೆ ವಿಚಾರಿಸಿದಿ. ಆಗ್ಗೆ ನಾನು ನಿನಗೆ ತಿಳಿಸಿ ಹೇಳಹತ್ತಿದೆನು. ಆಗ ನೀನು ನಾನು ಹೇಳುವ ಕಡೆಗೆ ಚಿತ್ತವಿಡದೆ, ಕಾಗದ-ಕತ್ತರಿಗಳನ್ನು ತಕ್ಕೊಂಡು ಹೂವು ಕತ್ತರಿಸಲಾರಂಭಿಸಿದಿ. ಅದರಿಂದ ನನಗೆ ಸ್ವಲ್ಪ ಸಿಟ್ಟು ಬಂದು, ನಿನ್ನನ್ನು ಮೆಲ್ಲನೆ ಒಂದು ಸಾರೆ ಹೊಡೆದೆನು. ಆಗ ನಿನಗೆ ಮೊದಲು ಸ್ವಲ್ಪ ನಗೆಯು ಬಂದಿತು; ಕೂಡಲೇ ಸಿಟ್ಟಿನ ಸಿಂಹಾಸನವನ್ನೇರಿ ಕುಳಿತುಕೊಂಡಿ; ಆ ಸಿಟ್ಟಿನ ಸಿಂಹಾಸನವನ್ನು ಏರಿದ ಕೂಡಲೆ ನೀನು ಅಧಿಕಾರ ಬಲದಿಂದ ನನ್ನನ್ನು ಹೊಡೆಯಲು ಕೈಮೇಲಕ್ಕೆ ಮಾಡಿದಿ; ಆಗ ನಾನು ನಿನ್ನ ಎರಡೂ ಕೈಗಳನ್ನು ಗಟ್ಟಿಯಾಗಿ ಹಿಡಿದು, ನಗಲಿಕ್ಕೆ ಹತ್ತಿದೆನು. ಆಗ್ಗೆ ನೀನು ಅಳಲಿಕ್ಕೆ ಆರಂಭಿಸಿದಿ. ಆಗ ನಾನು ನಿನಗೆ ಎಷ್ಟೋ ಸಮಾಧಾನೋಕ್ತಿಗಳನ್ನು ಹೇಳಿದೆನು; ಆದರೂ ನಿನಗೆ ನನ್ನನ್ನು ಹೊಡೆದ ಹೊರತು ಸಮಾಧಾನವಾಗಲಿಲ್ಲ. ಆಗ ನಾನು ನಿನ್ನ ಕೈಗಳನ್ನು ಬಿಟ್ಟು, "ಹೊಡಿ" ಎಂದು ಅಂದೆನು. ನೀನೂ ಹೊಡೆಯಬೇಕೆಂದು ಕೈಯನ್ನು ಮೇಲಕ್ಕೆತ್ತಿದಿ; ಆದರೆ ನಿನಗೆ ನನ್ನನು ಹೊಡೆಯುವ ಧೈರ್ಯವಾಗಲಿಲ್ಲ. ನೀನು ನನ್ನ ಕೈಗಳನ್ನು ಮಾತ್ರ ಗಟ್ಟಿಯಾಗಿ ಹಿಡಿದುಕೊಂಡಿ. ವೇಣೂ, ನೀನೇ ತಿಳಿದು ನೋಡು, ಆಕಾಲದಲ್ಲಿ ನೀನು ನನ್ನನ್ನು ಹೊಡೆಯಲು ಯಾಕೆ ಹಿಂಜರಿದಿ? ಆ ವೇಳೆಯಲ್ಲಿ ನಿನ್ನ ಹೃದಯದಲ್ಲಿದ್ದ ಸ್ನೇಹವು ಈಗ ತಿಲಮಾ

ತ್ರವಾದರೂ ಅದೆಯೇ. ಇಷ್ಟರಲ್ಲಿಯೇ ಆ ಸ್ನೇಹವನ್ನು ತೊರೆದದ್ದು ಆಶ್ಚರ್ಯವಲ್ಲೇ!

ವೇಣೂ:—(ಲಜ್ಜಿತಳಾಗಿ) "ನಿಮಗೆ ಇನ್ನೂ ಆ ಸಂಗತಿಯು ಮರೆಯದೆ ಇರುವದು ಪರಮಾಶ್ಚರ್ಯವು!"

ಕೃಷ್ಣರಾಯ:—"ನನಗೆ ಎಂದೂ ಆ ಸಂಗತಿಯು ಮರೆಯುವಂತಿಲ್ಲ. ಇದೊಂದೇ ಯಾಕೆ? ಇನ್ನೊಂದು ಸಂಗತಿಯನ್ನು ಹೇಳಬೇಕೇ?"

ವೇಣು:—(ಪೂರ್ವಸ್ಮರಣೆಯಾಗಿ ಮನಸ್ಸಿನಲ್ಲಿ ತಲ್ಲಣಗೊಳ್ಳುತ್ತ) "ಬೇಡ-ಕೃಷ್ಣರಾವ ಆಸಂಗತಿಯನ್ನು ಹೇಳುವದರಲ್ಲಿ ಏನು ಸುಖವದೆ?"

ಕೃಷ್ಣರಾಯ:—"ಛಳೇ, ಆ ಸಂಗತಿಯಲ್ಲಿ ಎಷ್ಟು ಸೌಖ್ಯಾನಂದಗಳಿರುತ್ತವೆ!!"

ವೇಣು:—"ಅದನ್ನು ಹೇಳುವದರಲ್ಲಿ ಏನರ್ಥವಿರುತ್ತದೆ?"

ಕೃಷ್ಣರಾಯ:—(ವೇಣುವಿನ ಮಾತಿನ ಕಡೆಗೆ ಲಕ್ಷ್ಯಕೊಡದೆ) "ನನ್ನ ಹಿತಚಿಂತಕ ವೇಣೂ, ನಾನು ಮುಂಬಯಿಯಲ್ಲಿ ಇರುವಾಗ್ಗೆ ಏನೋ ತೊಂದರೆಯಿಂದ ನಿನಗೆ ಒಂದೆರಡು ವಾರ ಪತ್ರ ಬರೆಯುವದರಲ್ಲಿ ಅಲಕ್ಷ್ಯಮಾಡಿದ್ದೆನು. ಆ ಸಂಬಂಧವಾಗಿ ನಿನಗೆ ಬಹಳೇ ಖೇದವಾಯಿತು. ನೀನು ಸ್ವಲ್ಪ ಸಿಟ್ಟಿನ ಲಕ್ಷಣವನ್ನು ತೋರಿಸಿದಿ; ಮತ್ತು ಆವರಿಂದ ನಿನಗೆ ಸ್ವಲ್ಪ ತಾಪವೂ ಆಯಿತು. ಅದರಲ್ಲಿ ಮತ್ತೆ ಕುಪಥ್ಯವಾದ್ದರಿಂದ ತಾಪವು ಮಿತಿಮೀರಿತು. ಬರಬರುತ್ತ ಆ ವ್ಯಾಧಿಯು ಮಿತಿಮೀರಿ ಅದು ಔಷಧದಿಂದ ನಾಟದಂತಾಯಿತು. ಆಗ ನಿನ್ನ ಮುಖದ ಮೇಲಿನ ಪ್ರಜ್ವಲವಾದ ಕಾಂತಿಯು ಕಡಿಮೆಯಾಯಿತು. ನಿನಗೆ ಇಹಲೋಕದಲ್ಲಿ ಇರುವ ಆಶೆಯೇ ಉಳಿಯಲಿಲ್ಲ—"

ವೇಣು:—(ಮಧ್ಯದಲ್ಲಿ) "ನಿಶ್ಚಯವಾಗಿ ನಾನು ಆವೇಳೆಯಲ್ಲಿ ಇಹಲೋಕ ಯಾತ್ರೆಯನ್ನು ಮುಗಿಸಿದವಳೇ!"

ಕೃಷ್ಣರಾಯ:—"ವೇಣೂ, ನಾನು ಒಂದು ದಿವಸ ಸಾಯಂಕಾಲದಲ್ಲಿ ಪುಸ್ತಕವನ್ನು ಓದುತ್ತ ಕುಳಿತಿದ್ದೆನು. ಇಷ್ಟರಲ್ಲಿ ತಾರಿನ ಸಿಪಾಯಿಯು ಬಂದು ನನಗೊಂದು ಕಾಗದವನ್ನು ಕೊಟ್ಟನು. ಅದರಲ್ಲಿ ನಿನಗೆ ಬಹಳ ಅಜಾರಿಯಾಗಿದೆಯೆಂದು ಬರೆದಿತ್ತು. ಆಗ ನಾನು ಅದಷ್ಟು ತೀವ್ರವಾಗಿ ನಿನ್ನ ಕಡೆಗೆ ಬಂದೆನು. ಬಂದಾಗ ಔಷಧೋಪಚಾರವು ನಡೆದಿತ್ತು. ಆದ

ರೂ ನಿನ್ನ ಪ್ರಕೃತಿಯಲ್ಲಿ ಗುಣಮುಖವಿದ್ದಿಲ್ಲ. ನಿನ್ನ ವಿಪನ್ನಸ್ಥಿತಿಯನ್ನು ನೋಡಿ ನನಗೆ ಕಡು ದುಃಖವಾಯಿತು. ನಿನ್ನ ನೆರೆಯಲ್ಲಿ ಕುಳಿತುಕೊಂಡು ನಾನು ನಿನ್ನ ಮುಖಕಮಲವನ್ನೇ ನಿರುಕಿಸುತ್ತಿದ್ದೆನು. ಎರಡೂ ಕಣ್ಣುಗಳನ್ನು ಮುಚ್ಚಿಕೊಂಡಿದ್ದ ನೀನು, ನನ್ನನ್ನು ನೋಡೀ ಎಂಬಾಶೆಯೇ ಉಳಿಯಲಿಲ್ಲ. ನಿನ್ನ ಕೂಡ ಮಾತಾಡಬೇಕೆಂದು ನನ್ನ ಮನಸ್ಸು ಹಾತರಿದದ್ದರಿಂದ, ನಾನು "ವೇಣೂ ವೇಣೂ" ಎಂಬುವದಾಗಿ ಎಷ್ಟೊ ಸಾರೆ ಕರೆದೆನು; ಆದರೆ ನೀನು ಮಾತಾಡುವ ಲಕ್ಷಣವೇ ಕಾಣಲಿಲ್ಲ. ಆಗ ನಾನು ಅನನ್ಯಭಾವದಿಂದ ಜಗದೀಶ್ವರನನ್ನು ಹಲವು ರೀತಿಯಿಂದ ಸ್ತೋತ್ರಮಾಡಿದೆನು. ನನ್ನ ಸ್ತೋತ್ರದಿಂದ ಈಶ್ವರನಿಗೆ ಕರುಣವು ಹುಟ್ಟಿತೋ ಏನೋ, ಸ್ವಲ್ಪ ವೇಳೆಯಲ್ಲಿ ಆಣೇಕಲ್ಲಿನಂತೆ ಶೀತಸಿದ್ದ ನಿನ್ನ ಶರೀರದಲ್ಲಿ ಉಷ್ಣತೆಯು ಹುಟ್ಟಿತು; ನಿನ್ನ ನಾಡಿಗಳು ಸುಸೂತ್ರವಾಗಿ ನಡೆಯಹತ್ತಿದವು. ಸ್ವಲ್ಪ ಕಾಲದಲ್ಲಿ ನೀನು ಮುಚ್ಚಿದ ಕಣ್ಣುಗಳನ್ನು ತೆರೆದು, ನನ್ನನ್ನು ನೋಡಿದಿ. ಮತ್ತು ಅಂಥಾ ಕ್ಷೀಣಾವಸ್ಥೆಯಲ್ಲಿಯೇ ನೀನು ಕುಗ್ಗಿದ ಸ್ವರದಿಂದ:—"ಕೃಷ್ಣರಾಯ, ಅಳಬೇಡ, ನನಗೆ ನೆಟ್ಟಗಾಗುತ್ತದೆ." ಎಂದು ಉಚ್ಚರಿಸಿದಿ. ಡಾಕ್ಟರರು ನಿನ್ನ ನಾಡಿಯನ್ನು ನೋಡಿ ಅಂದದ್ದೇನಂದರೆ—"ಪ್ರಕೃತಿಯು ಸುಧಾರಿಸಲಾರಂಭಿಸಿದೆ, ಈಗ ಅಂಜುವ ಕಾರಣವಿಲ್ಲ, ವೇಣುವಿನ ರೋಗವನ್ನು ಪರಿಹಾರಮಾಡುವಂಥ ರಾಮಬಾಣ ಔಷಧವೆಂದರೆ ನಿಜವಾಗಿ ಕೃಷ್ಣರಾಯನೇ" ಎಂದಂದರು. ಡಾಕ್ಟರರ ಪರಿಹಾಸ್ಯದ ಮಾತನ್ನು ಕೇಳಿ ನಿನಗೂ ನಗೆಯು ಬಂದಿತು. ಆವೇಳೆಯಲ್ಲಿದ್ದ ನಿನ್ನ ಸ್ಮಿತಮುಖದ ಭಾವಚಿತ್ರವು ನನ್ನ ಹೃತ್ಪಟಲದಲ್ಲಿ ಪೂರ್ಣವಾಗಿ ಸ್ಥಾಪಿತವಾಗಿದೆ.

ಕೃಷ್ಣರಾಯನ ಭಾಷಣವು ಒಂದೇಸವನೆ ನಡೆದಿತ್ತು. ಮೈಗೆಮುಳ್ಳು ಹೆಚ್ಚುವಂಥ ಕೃಷ್ಣರಾಯನ ಮಾತನ್ನು ಕೇಳಿ, ವೇಣುವಿನ ಹೃದಯವು ದುಃಖಾಗ್ನಿಯಿಂದ ತಪ್ತವಾಯಿತು. ಅವಳ ಕಣ್ಣುಗಳು ಕಣ್ಣೀರಿನಿಂದ ತುಂಬಿದವು. ಕೃಷ್ಣರಾಯನ ಪವಿತ್ರಾಂತಃಕರಣವನ್ನು ನೋಡಿ, ಅವಳು ತೀರ ಚಕಪಕಿಸಿದಳು. ಕೃಷ್ಣರಾಯನಿಗೆ ಪ್ರತ್ಯುತ್ತರವನ್ನು ಕೊಡಬೇಕೆಂದು ಅವಳು ಇಚ್ಛಿಸುತ್ತಿದ್ದರೂ, ಅವಳಿಗೆ ಕೃಷ್ಣರಾಯನು ಅವಕಾಶವನ್ನು ಕೊಡಲಿಲ್ಲ.

ಕೃಷ್ಣರಾಯ:— "ವಿಚಾರ ಶೀಲೆಯೇ, ಈ ಎಲ್ಲ ಸಂಗತಿಗಳನ್ನು ಒಮ್ಮೆಲೇ ಮರೆತದ್ದು ಪರಮಾಶ್ಚರ್ಯವೇ ಸರಿ. ಜನರಿಗೆ ಅಹಿತವನ್ನು ಬಯಸುವದೇ ಮೂರ್ಖ ಜನರ ಕೆಲಸವಾಗಿದೆ. ಮೂರ್ಖ ಜನರ ನಿಂದ್ಯ ವಚನಗಳಿಗೆ ಹೆದರಿ, ಮನಬಂದಂತೆ ದೃಢನಿಶ್ಚಯವನ್ನು ಮಾಡಿರುವದರಿಂದ ನೀನು ಮೂರ್ಖರಿಗಿಂತಲೂ ಮಹಾ ಮೂರ್ಖಳಿದ್ದೀಯೆಂದು ಹೇಳಲಿಕ್ಕೆ ಯಾವ ಬಾಧಕವೂ ಇಲ್ಲ. ಅವರು ಅನ್ನುವದಕ್ಕೋಸ್ಕರ ಅಥವಾ ಅವರನ್ನು ತುಷ್ಟೀಕರಿಸುವದಕ್ಕೋಸ್ಕರ ನೀನು ಸದಸದ್ವಿಚಾರವನ್ನು ಬಿಟ್ಟು ಕೊಟ್ಟು, ವಾಸ್ತವಿಕ ಮಾಡಬೇಕಾಗಿದ್ದನ್ನು ಮರೆತು ಬಿಟ್ಟೆ; ನಿನ್ನ ನಿರ್ಮಲ ಹೃದಯವನ್ನು ಕ್ಷುದ್ರಜನರ ಸಲುವಾಗಿ ಹೊಲಸು ಮಾಡಿಬಿಟ್ಟೆ; ಇದೇ ಏನು, ನಿನ್ನ ಸುಶಿಕ್ಷಿತತನದ ಪರಿಣಾಮ? ವೇಣೂ, ಈ ಅಸಹ್ಯವಾದ ಮನೋನಿಶ್ಚಯವನ್ನು ಹಿಂದಕ್ಕೆ ತೆಗೆದುಕೊ ಅಲ್ಲ, ಥಾಪೀಸರಿಸು. ನಿನ್ನ ಸ್ಥಿತಿಯು ಇಷ್ಟು ಚಮತ್ಕಾರವಾದೀತೆಂದು ನಾನು ಎಂದೂ ಭಾವಿಸಿರಲಿಲ್ಲ. ಮೊದಲಿನ ನಿನ್ನ ಸ್ಥಿತಿಗೂ ಈಗಿನ ನಿನ್ನ ಸ್ಥಿತಿಗೂ ಮಹದಂತರವಾಗಿದೆ. ಪೂರ್ವದಲ್ಲಿ ಯಾವ ನಿನ್ನ ಹೃದಯವು ಪ್ರೇಮ, ದಯೆ, ವಾತ್ಸಲ್ಯ, ಅನುರಾಗ, ಪ್ರಣಯ ಮೊದಲಾದವುಗಳಿಂದ ಸಂಘಟಿತವಾಗಿತ್ತೋ, ಆ ನಿನ್ನ ಹೃದಯವು ಈಗ ಕ್ರಮವಾಗಿ ಸ್ನೇಹಶೂನ್ಯತೆ, ಅದಯತೆ, ಕ್ರೋಧ, ಕ್ರೌರ್ಯ, ಕೋಪ ಮೊದಲಾದವುಗಳಿಂದ ಸಂಘಟಿತವಾಗಿದೆ. ಅಶಿಕ್ಷಿತ ಸ್ತ್ರೀಯಿಂದ ಇಂಥ ಕೃತ್ಯವಾದರೆ ನನಗೇನೂ ಕೆಡಕೆನಿಸುವದಿಲ್ಲ. ಆದರೆ ಸುಶಿಕ್ಷಿತ ವಿದ್ಯಾಸಂಪನ್ನ ಕುಲೀನ ಸ್ತ್ರೀಯ ಹೃದಯವು ರಾಕ್ಷಸಿಯಂತೆ ಕಾರ್ಠಿಣ್ಯವಾದರೆ ಆ ಸಂಬಂಧವಾಗಿ ಯಾರಿಗೂ ಕೆಡಕೆನಿಸದೆ ಇರಲಿಕ್ಕಿಲ್ಲ."

ವೇಣುವಿನ ಹಾಡು ತೀರ ವಿಚಿತ್ರವಾಗಿತ್ತು. ಅವಳು ಗೊಂಬೆಯಂತೆ ಕುಳಿತುಕೊಂಡು, ಕೃಷ್ಣರಾಯನ ಮಾತು ಕೇಳುತ್ತಿದ್ದಳು. ಬಹಿರಂಗದಲ್ಲಿ ಅವಳು ತೀರ ಮೌನಳಾಗಿ ಕಾಣುತ್ತಿದ್ದರೂ, ಅಂತರಂಗದಲ್ಲಿ ಅವಳ ಮನಸ್ಸು 'ಹಾವು ಹರಿದಾಡಿದಂತೆ' ಹರಿದಾಡುತ್ತಿತ್ತು. ಅವಳ ಹೃದಯದಲ್ಲಿ ಅನೇಕ ಪ್ರಕಾರದ ವಿಚಾರಗಳ ದೊಡ್ಡ ತುಮುಲ ಯುದ್ಧವು ನಡೆದಿತ್ತು. ಕೃಷ್ಣರಾಯನ ಪ್ರತಿಯೊಂದು ಶಬ್ದಗಳು ವೇಣುವಿನ ದೃಢನಿಶ್ಚಯ ರೂಪವಾದ ಮಂದಿರವನ್ನು ಶಿಥಿಲು ಮಾಡುತ್ತಿದ್ದವು. ಕೃಷ್ಣರಾಯನ ತನ್ನ ವಿಲ

ಕ್ಷಣ ಸ್ಥಿತ್ಯಂತರವನ್ನು ಬೈಲಿಗೆಳೆದದ್ದರಿಂದ ವೇಣುವಿಗೆ ನಾಚಿಕೆಯು ತಲೆ ದೋರಿತು. ಆಗ ಅವಳು ಅಂದದ್ದೇನಂದರೆ:— "ಕೃಷ್ಣರಾಯ, ತಾವನ್ನು ವದೆಲ್ಲ ನಿಜವು; ಆದರೆ ಇದರಲ್ಲಿ ನನ್ನ ಅಪರಾಧವಾದರೂ ಯಾವದು? ದೈವದುರ್ವಿಪಾಕದ ಇರುಕಿನಲ್ಲಿ ಸಿಕ್ಕ ಮೇಲೆ ಯಾರು ಮಾಡುವದಾದರೂ ಏನು?" ಎಂದನ್ನುತ್ತ ಕಣ್ಣಲ್ಲಿ ಕಣ್ಣೀರು ತಂದಳು.

ವೇಣುವಿನ ದಯಾಜನಕ ರೂಪವಾದ ಜಲವು ಕೃಷ್ಣರಾಯನ ಹೃದಯವನ್ನು ಸುಟ್ಟು ಸುರೆಹೊಯ್ಯುತ್ತಿದ್ದ ಚಿಂತಾಗ್ನಿಯನ್ನು ಎಷ್ಟೋಮಟ್ಟಿಗೆ ಶಾಂತಮಾಡಿತು. ವೇಣುವಿನ ದಯಾಭರಿತವಾದ ನುಡಿಯಿಂದ ತನ್ನ ಮನೋರಥವು ಈಡೇರುವದೆಂದು ಕೃಷ್ಣರಾಯನಿಗೆ ಭರವಸವಾಯಿತು. ಮತ್ತು ತನ್ನ ವಾಕ್ಪಾಂಡಿತ್ಯದ ಸಲುವಾಗಿ ಅವನಿಗೆ ಅಭಿಮಾನವು ಉತ್ಪನ್ನವಾಯಿತು. ಅವನು ವೇಣುವಿನ ಕಡೆಗೆ ನೋಡುತ್ತ:— "ವೇಣೂ, ನಿನ್ನ ಕಣ್ಣುಗಳಿಂದ ಅಶ್ರುಗಳು ಉದುರಲಿಕ್ಕೆ ಕಾರಣವೇನು?" ಎಂದಂದನು.

ವೇಣು:— (ಕಣ್ಣೀರು ಒರಿಸುತ್ತ) "ಕೃಷ್ಣರಾಯ, ನಿಮ್ಮ ಪ್ರಶ್ನೆಗೆ ಏನು ಉತ್ತರಗೊಡಲಿ! ನಿಶ್ಚಯವಾಗಿ ಬೆಣ್ಣೆಗಿಂತಲೂ ಮೆತ್ತಗಿರುವ ನನ್ನ ಹೃದಯವನ್ನು ವಜ್ರಕ್ಕಿಂತಲೂ ಕಠಿಣವಾಗಿ ತೋರುವದಕ್ಕೆ ನಾನಾದರೂ ಮಾಡಲೇನು? ನನ್ನ ಕಡೆಗಾದರೂ ಏನು ತಪ್ಪಿರುತ್ತದೆ? ಆಕಾಶಕ್ಕಿಂತಲೂ ನಿರ್ಮಲವಾದ ನನ್ನ ಅಂತಃಕರಣವು ವಿಶ್ವಾಸಘಾತಕವಾದದ್ದೆಂದು ಕಾಣಿಸುವದಕ್ಕೆ ದುಷ್ಟಸಮಾಜವೇ ಕಾರಣವು! ಆ ದುಷ್ಟಸಮಾಜದ ಸಾಮರ್ಥ್ಯದ ಮುಂದೆ ನನ್ನಂಥ ಅಬಲೆಯ ಸಾಮರ್ಥ್ಯವಾದರೂ ಹೇಗೆ ನಡೆಯುವದ.!!"

ಕೃಷ್ಣರಾಯ:— (ಪ್ರತಿಜ್ಞಾಪೂರ್ವಕ) "ವೇಣೂ, ಆ ದುಷ್ಟಸಮಾಜಕ್ಕೆ ನೀನು ಹೆದರುವ ಕಾರಣವಿಲ್ಲ. ಆ ದುಷ್ಟಸಮಾಜದಿಂದ ಬೇಕಾದಂಥ ಸಂಕಟಗಳು ಒದಗಿದರೂ, ಅದನ್ನು ದೂರೀಕರಿಸಲಿಕ್ಕೆ ಈ ಕೃಷ್ಣರಾಯನು ಕಂಕಣಬದ್ಧನಾಗಿ ನಿಂತಿರುವನು!"

ವೇಣುವಿನ ಸ್ಥಿತಿಯು ಬಹಳ ಚಮತ್ಕಾರವಾಯಿತು. ಅವಳಿಗೆ ಹೇಗೆ ನಡೆದರೆ ಹಿತವಾದೀತೆಂಬುವದು ತಿಳಿಯದೆ ಹೋಯಿತು. ಅವಳು ಕೆಲ ಹೊತ್ತು ಅವಿವಾಹಿತಳಾಗಿರಬೇಕೆಂದು ನೆನೆಸುತ್ತಿದ್ದಳು; ಮತ್ತೆ ಕ್ಷಣಾರ್ಧದಲ್ಲಿ ಕೃಷ್ಣರಾಯನೊಡನೆ ಲಗ್ನವಾಗಿ ತರತರದ ಸುಖಗಳನ್ನು ಭೋಗಿಸಬೇ

ಕೆಂದು ಬಯಸುತ್ತಿದ್ದಳು. ಈಪ್ರಕಾರ ಅವಳ ಮನಸ್ಸಿನಲ್ಲಿ ತುಮುಲ ಯುದ್ಧವು ನಡೆದಿರುವಾಗ್ಗೆ ಕೃಷ್ಣರಾಯನು ಅಂದದ್ದೇನಂದರೆ—" ವೇಣೂ, ನೀನು ಈಪ್ರಕಾರ ಆಲೋಚನಾಲೋಚನೆಗಳಿಂದ ಹಣ್ಣಾಗಲಿಕ್ಕೆ ಕಾರಣವಿಲ್ಲ. ನಾನು ವಿಕಾರವಶನಾಗಿ ನಿನಗೇನಾದರೂ ಅಸಹ್ಯವಾದ ಮಾತುಗಳನ್ನು ಹೇಳುತ್ತೇನೆಂದು ನಿನ್ನ ಕಲ್ಪನೆಯಿದ್ದರೆ, ಆ ಕಲ್ಪನೆಯು ತೀರ ಹುಚ್ಚತರದ್ದಾಗಿದೆ. ನಾನು ಹೇಳುವ ಮಾತುಗಳಲ್ಲಿ ನಿನ್ನ ಹಿತಾಂಶವೇ ಹೆಚ್ಚಿರುತ್ತದೆಂಬುವದನ್ನು ನೀನು ಪೂರ್ಣವಾಗಿ ಧ್ಯಾನದಲ್ಲಿಡು! ಪೂರ್ವದ ಸಂಗತಿಯನ್ನು ಸ್ಮರಣೆಗೆ ತಂದುಕೊಟ್ಟು, ನಿನ್ನನ್ನು ಪ್ರೇಮಬದ್ಧಳನ್ನಾಗಿ ಮಾಡಬೇಕೆಂದು ನನ್ನ ಮನದಲ್ಲಿರುವದಿಲ್ಲ. ಕುಲಸ್ತ್ರೀಗೆ ನೈಸರ್ಗಿಕವಾಗಿ ಸಿಗತಕ್ಕ ಭೂಷಣದಿಂದ ನೀನು ಅಲಂಕೃತಳಾಗಿ, ಈ ಆರ್ಯಮಹಿಲಾ ಸಮೂಹದಲ್ಲಿ ವಜ್ರದಂತೆ ಥಳಥಳಿಸಲೆಂದು ನಾನು ನಿನಗೆ ನಿನ್ನ ಹಟವನ್ನು ಬಿಡುವದಕ್ಕೆ ಬೋಧಿಸುತ್ತೇನೆ. ನಾನು ಹೇಳುವದನ್ನೆಲ್ಲ ಪೂರ್ಣವಾಗಿ ವಿಚಾರಿಸು. ಸಮಾಜಕ್ಕೆ ಉಪಯೋಗ ಬೀಳುವಂಥ ದೃಢನಿಶ್ಚಯವನ್ನು ಮಾಡು. ಉಪಕಾರ ಬುದ್ಧಿಗೆ ಸ್ವಲ್ಪಾದರೂ ಇಂಬುಗೊಡು. ಅದರಲ್ಲಿಯೇ ನಿನ್ನ ನಿಜವಾದ ಕಲ್ಯಾಣವದೆ. ಸಮಾಜದಲ್ಲಿ ಹೊಕ್ಕು ಸಮಾಜಕ್ಕೆ ಉಪಯೋಗವಾಗುವಂತೆ ವರ್ತಿಸುವದೇ ನಿಜವಾದ ಮಾರ್ಗವು! ಅದೇ ನಿಜವಾದ ಮನುಷ್ಯನ ಸ್ತುತ್ಯಕರ್ತವ್ಯಕರ್ಮವು!! ವಿಚಾರಸಾಗರಿಯೇ, ಈ ಜಗತ್ತಿನಲ್ಲಿ ನನಗೆ ಪ್ರಿಯಕರವಾದ ವಸ್ತುವೆಂದರೆ, ವೇಣುವೇ ಆಗಿರಲು, ನೀನು ನಿನ್ನ ಮೃದ್ವಂತಃಕರಣವನ್ನು ಕಲ್ಲಿಗಿಂತಲೂ ಕಠಿಣಮಾಡಿ; ಕೃಷ್ಣರಾಯನನ್ನು ಬಿಡಲು ಯತ್ನಮಾಡುತ್ತೀ ನೀನು ನಿನ್ನ ಪತ್ರದಲ್ಲಿ " ಕೃಷ್ಣರಾಯನು ಲಗ್ನವಾಗಿ ಸಂಸಾರಸುಖವನ್ನು ಅನುಭೋಗಿಸಬೇಕೆಂದೂ, ಅವನಿಗೆ ಸುಂದರವಾದ ಮಕ್ಕಳಾದವೆಂದರೆ ಆ ಮಕ್ಕಳೊಡನೆ ನಾನು ಸಂತೋಷದಿಂದ ಆಡುವೆನೆಂದೂ " ಬರೆದಿರುವಿ. ಸುಜ್ಞಾನಿಯೇ, ನಾನೂ ನಿನ್ನಂತೆ ಆಜನ್ಮಪರ್ಯಂತರ ಬ್ರಹ್ಮಚರ್ಯ ವ್ರತದಿಂದ ಇದ್ದರಾಯಿತು. ವೇಣೂ, ಬಾಲ್ಯದಲ್ಲಿಯೆ ಆ ಮನೋರಮ ವಿಚಾರವೆಂದರೆ ಮನೋರಾಜ್ಯ! ನಮ್ಮೀರ್ವರಲ್ಲಿ ವಹಿಸಿದಂಥ ಪ್ರೇಮಪ್ರವಾಹವು ಮೃಗಜಲಪ್ರಾಯವಾದದ್ದು!! ಲಗ್ನವಾದ ಮೇಲೆ ಹಾಗೆ ಸುಖಬಡಬೇಕು—ಹೀಗೆ ಸುಖಬಡಬೇಕು, ಹಾಗೆ ಧನಸಂಪಾದನ ಮಾಡಬೇಕು—ಹೀಗೆ ಧನಸಂಪಾ

ದನ ಮಾಡಬೇಕು, ಹಾಗೆ ದಾನಧರ್ಮ ಮಾಡಬೇಕು—ಹೀಗೆ ದಾನಧರ್ಮ ಮಾಡಬೇಕು, ಅಂಥ ಸತ್ಕಾರ್ಯಗಳನ್ನು ಮಾಡಬೇಕು—ಇಂಥ ಸತ್ಕಾರ್ಯ ಗಳನ್ನು ಮಾಡಬೇಕು, ಹಾಗೆ ಸಂತತಿ ಜೋಪಾನ ಮಾಡಬೇಕು—ಹೀಗೆ ಸಂತತಿ ಜೋಪಾನ ಮಾಡಬೇಕು, ಎಂದಾಲೋಚಿಸಿದ ಭಾವೀ ವಿಚಾರಾತಿ ಶಯವು ಆಣೇಕಲ್ಲಿನಂತೆ ಕ್ಷಣಮಾತ್ರವಾದದ್ದು !!! ವೇಣೂ, ಪ್ರೇಮರೂಪ ವಾದ ಪುಷ್ಪಕ್ಕೆ ಸರ್ವೋತ್ಕೃಷ್ಟವಾದ ಸುಗಂಧವೂ, ಬಣ್ಣವೂ ಇರು ವಂತೆ, ಅದಕ್ಕೆ ತೀಕ್ಷ್ಣವಾದ ವಿಷಕಂಟಕ (ಮುಳ್ಳು) ವಿರುತ್ತದೆಂಬುವ ದನ್ನೂ ಇಂದು ನಾನು ಮನಗಂಡೆನು."

ಈ ಮುಂದೆ ಕೃಷ್ಣರಾಯನು ಏನೂ ಮಾತಾಡಲಿಲ್ಲ. ಪೂರ್ವದ ಸ್ಮರಣೆಯಿಂದ ಪುನಃ ಅವನ ದುಃಖಾಗ್ನಿಯು ಪ್ರಜ್ವಲಿಸಿತು. ಅವನು ಉಸು ಗರೆದು ಹತಾಶದೃಷ್ಟಿಯಿಂದ "ಭೂದೇವತೆಗೆ ತನ್ನ ಮನೋರಥವನ್ನು ಪೂರ್ತಿಸೆಂದು ಬೇಡಿಕೊಳ್ಳುತ್ತಾನೋ ಏನೋ ಅನ್ನುವ ಹಾಗೆ" ಕೆಳಗೆ ನೋಡಹತ್ತಿದನು. ವೇಣುವಿನ ಸ್ಥಿತಿಯಾದರೂ ಕೃಷ್ಣರಾಯನಿಗಿಂತ ವಿಲ ಕ್ಷಣವಾಗಿತ್ತು. ಕೃಷ್ಣರಾಯನ ಪ್ರೇಮರೋಷವು ಅವಳ ಕಣ್ಣುಗಳಿಂದ ಕಣ್ಣೀರುಗಳನ್ನು ಉದುರಿಸದೆ ಬಿಡಲಿಲ್ಲ. ಅವಳು ಕಣ್ಣೀರು ಸುರಿಸುತ್ತ ನುಡಿವಳೇನಂದರೆ:—"ಕೃಷ್ಣರಾವ, ಈ ಸರ್ವ ಶರೀರವು ನಿಮ್ಮದೇ ಅದೆ. ನನ್ನ ಜೀವಕ್ಕೆ ನೀವೇ ಒಡೆಯರು. ನಾನು ಯಾವತ್ತೂ ರೀತಿಯಿಂದ ನಿಮ್ಮ ವಳೇ ಇದ್ದೇನೆ. ನಿಮ್ಮ ಮಾರ್ಗವೇ ನನಗೆ ಹಿತವಾಗಿದೆ. ನೀವು ಕರ ಕೊಂಡು ಹೋದ ಮಾರ್ಗದಲ್ಲಿ ನಾನು ಬರಲಿಕ್ಕೆ ಸಿದ್ಧಳಿದ್ದೇನೆ, ಈ ದೀನ ಳ ವಿಷಯವಾಗಿ ನಿಮ್ಮಂಥವರಿಗೆ ಇಷ್ಟು ಕಳಕಳತೆಯಿರಬೇಕೆಂದರೆ ನಾನೇ ಸೌಭಾಗ್ಯಳೆಂದು ತಿಳಿಯುತ್ತೇನೆ. ನೀವು ನನಗೆ ಸಾಧುವಿನಂತೆ ಪೂಜ್ಯರಿ ದ್ದೀರಿ. ನನ್ನನ್ನು ಪದರಿನಲ್ಲಿ ಹಾಕಿಕೊಳ್ಳುವ ನಿಮ್ಮ ನಿರ್ಮಲ ಪ್ರಯತ್ನ ವನ್ನು ನೋಡಿ, ನಾನು ನಿಮಗೆ ಅನನ್ಯ ಶರಣು ಬಂದಿದ್ದೇನೆ" ಎಂದಂದಳು.

ವೇಣುವು ಮಾತಾಡುವಾಗ ಪ್ರತಿಯೊಂದು ಶಬ್ದವನ್ನು ಕಾತರ-ಸ್ವರ ದಿಂದ ಉಚ್ಚರಿಸುತ್ತಿದ್ದಳು. ಅವಳು ತಲೆಯನ್ನು ಮಾತ್ರ ಕೃಷ್ಣರಾಯನ ತೊಡೆಯಮೇಲಿಟ್ಟು, ಉಳಿದ ಶರೀರದ ಭಾಗವನ್ನು ನೆಲದ ಮೇಲೆ ಒಗೆದಿ ದ್ದಳು. ವೇಣುವಿನ ಕರುಣಾಸ್ಪದ ಸ್ಥಿತಿಯನ್ನು ನೋಡಿ, ಕೃಷ್ಣರಾಯನ

ಸಂತಾಪವು ಎಷ್ಟೋ ಏನುಟ್ಟಿಗೆ ಕಡಿಮೆಯಾಯಿತು, ಅವನು ಅವಳ ಭುಜಗಳನ್ನು ಹಿಡಿದೆತ್ತಿ, ಅವಳನ್ನು ಪಲ್ಲಂಗದ ಮೇಲೆ ಕುಳ್ಳಿರಿಸಿದನು. ಮತ್ತು ಅವಳ ಕರವನ್ನು ತನ್ನ ಕರದಲ್ಲಿ ಹಿಡಿದುಕೊಂಡು ಅಂದದ್ದೇನಂದರೆ:— "ವೇಣೂ, ಪವಿತ್ರವಾದ ಮನೋವೃತ್ತಿಯು ಎಂದಾದರೂ ಸನ್ಮಾರ್ಗದ ಕಡೆಗೆ ತಿರುಗುತ್ತದೆಂಬುವದು ಸುಳ್ಳಲ್ಲ. ನೀನು ನಿನ್ನ ಹುಚ್ಚತನದ ಸಂಕಲ್ಪವನ್ನು ಬಿಟ್ಟದ್ದರಿಂದ, ನನಗೆ ಪರಮಾನಂದವಾಯಿತು! ವೇಣೂ, ನಾಟಕದೊಳಗಿನ ಪಾತ್ರದಂತೆ ನೀನು ಕೆಲಹೊತ್ತು ಮಾಡಿದ ಆಶ್ಚರ್ಯಕಾರಕ ಸಂಗತಿಯನ್ನು ನನ್ನ ತಂದೆಗೆ ಹೇಳಬೇಕೆಂದು, ನನ್ನ ಮನಸ್ಸು ಆತುರಪಡುತ್ತದೆ. ಇನ್ನು ನನಗೆ ಮನೆಗೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಡು" ಎಂದಂದನು.

ಈ ಮುಂದೆ ವೇಣುವು ಏನೂ ಮಾತಾಡಲಿಲ್ಲ. ಕೃಷ್ಣರಾಯನಿಗೆ ನಿರೋಪ ಕೊಡುವ ಕಾಲದಲ್ಲಿ ಯಾವ ಮಾತುಗಳನ್ನಾಡಬೇಕೆಂಬುವದು ಅವಳಿಗೆ ತಿಳಿಯಲಿಲ್ಲ. ಅವಳು ಎದ್ದು ಸುಮ್ಮನೆ ನಿಂತ ಗೊಂಬೆಯಂತೆ ನಿಂತುಕೊಂಡು, ಹುಚ್ಚಿಯಂತೆ ಕೃಷ್ಣರಾಯನನ್ನು ಮಿಕಿಮಿಕಿ ನೋಡಹತ್ತಿದಳು. ಕೃಷ್ಣರಾಯನು ಒಂದು ಬಾರೆ ಸಾನಂದಾಶ್ಚರ್ಯದಿಂದ ಅವಳನ್ನು ನೋಡಿ, ಮನೆಗೆ ಹೊರಟು ಹೋದನು. ಇಲ್ಲಿಯವರೆಗೆ ನಡೆದ ಸಂಗತಿಯ ಸಲುವಾಗಿ ವೇಣುವಿಗೆ ಬಹಳೇ ಆಶ್ಚರ್ಯವೆನಿಸಿತು. ಕೃಷ್ಣರಾಯನು ಹೋದ ಮೇಲೆ ನಡೆದ ಸಂಗತಿಯನ್ನು ತನ್ನ ತಾಯಿಗೆ ಹೇಳಬೇಕೆಂದು ಅವಳೂ ಮನೆಯ ಒಳಗೆ ಹೊಕ್ಕಳು.

---

## ೭ ನೆಯ ಪ್ರಕರಣ—ಕಾರಾಗಾರ (ಶರೆಮನೆ).

ಸಾಯಂಕಾಲದ ವೇಳೆಯು ಮೊದಲೆ ಮನೋಹರ, ಅದರಲ್ಲಿ ಗ್ರೀಷ್ಮ ಋತುವಿನ ಸಾಯಂಕಾಲದ ವೇಳೆಯಂತೂ ಬಹಳೇ ಆನಂದದಾಯಕ. ಅನಂತೀಪುರವು ವಿಸ್ತಾರದಿಂದ ಚಿಕ್ಕದಾದರೂ, ಸೃಷ್ಟಿಸೌಂದರ್ಯದಿಂದ ಮಿಗಿಲಾದದ್ದಿತ್ತು. ಅನಂತೀಪುರದ ಒಂದು ಮಗ್ಗಲಿಗೆ ಪರ್ವತದ ಸಾಲು ಇದ್ದು, ಮತ್ತೊಂದು ಮಗ್ಗಲಿಗೆ ಸಮುದ್ರದ ದಂಡೆಯಿತ್ತು. ಗ್ರಾಮವು ಪರ್ವತಪ್ರ

ದೇಶಕ್ಕೆ ಹೊಂದಿದ್ದರೂ, ಅಲ್ಲಿಯ ಭೂಮಿಗಳು ಸಾಧಾರಣ ಸುಪೀಕವಿದ್ದು, ಅವುಗಳಿಗೆ ನೀರಿನ ಸೌಕರ್ಯವಾದರೂ ಚೆನ್ನಾಗಿತ್ತು. ಗ್ರಾಮದಲ್ಲಿಯೂ, ಗ್ರಾಮದ ನೆರೆಯ ಪ್ರದೇಶದಲ್ಲಿಯೂ ಹಲಸು, ದ್ರಾಕ್ಷೆ, ನೇರಿಲ, ಕಿತ್ತಳೆ, ತೆಂಗು, ಅಡಿಕೆ ಮುಂತಾದ ಹಣ್ಣಿನ ಗಿಡಗಳೂ, ಸಂಪಗೆ, ಕಣಗಲ ಮೊದಲಾದ ಹೂವಿನ ಗಿಡಗಳೂ, ಅರಳುಮಲ್ಲಿಗೆ, ಜಾಜಿಮಲ್ಲಿಗೆ ದುಂಡುಮಲ್ಲಿಗೆ ಮುಂತಾದ ಹೂವಿನ ಬಳ್ಳಿಗಳೂ ಶೋಭಿಸುತ್ತಿದ್ದವು. ಇಂಥ ವನಶ್ರೀಯನ್ನು ನೋಡುವ ಕುತೂಹಲವು ವೇಣುವಿಗೆ ಮೇರೆದಪ್ಪಿತ್ತು. ಅವಳಿಗೊಬ್ಬಳಿಗೇಕೆ? ಆ ಕುತೂಹಲವು ಪ್ರತಿಯೊಬ್ಬ ರಸಿಕ ಮನುಷ್ಯನಿಗೆ ಇರುವದು ಸ್ವಾಭಾವಿಕವಾಗಿದೆ. ಜಹಗೀರದಾರ ಸಾಹೇಬರು ವೇಣುವಿಗೆ ಜಾತಿಯಿಂದ ಹೊರಗೆ ಇಟ್ಟಂದಿನಿಂದ, ಅವಳು ಬಹುತರ ಮನೆಯ ಬಿಟ್ಟು ಹೊರಗೆ ಹೋಗುತ್ತಿದ್ದಿಲ್ಲ. ಅದರಿಂದ ಅವಳು ನಿಸ್ತೇಜಳೂ, ಕಳಾಹೀನಳೂ ಆಗಿದ್ದಳು. ಕೃಷ್ಣರಾಯನ ಪ್ರೀತಿ ವಚನಗಳನ್ನು ಕೇಳಿದಂದಿನಿಂದ ವೇಣುವಿನ ಆನಂದಕ್ಕೆ ಅಳತೆಯಿದ್ದಿಲ್ಲ. ಗೋವಿಂದರಾಯನಿಗೆ ವೇಣುವಿನ ಕುಲಗೋತ್ರಗಳೂ ಅವಳ ಗುಣವಿಶೇಷವೂ, ಅವಳು ಹೇಗೆ ಜಾತಿಬಾಹಿರಳಾದಳೆಂಬುವದೂ ಪರಿಚಯವಿತ್ತು. ಕೃಷ್ಣರಾಯನು ಮುಂಬಯಿಯಿಂದ ಬಂದಕೂಡಲೆ ಅವನ ಸಮ್ಮತಿ ತಕ್ಕೊಂಡು, ವೇಣೂ-ಕೃಷ್ಣರಾಯರ ಲಗ್ನವನ್ನು ಮಾಡಿಬಿಡಬೇಕೆಂದು ಗೋವಿಂದರಾಯನು ನಿಶ್ಚಯಿಸಿದನು. ಇದರಿಂದ ಇಂದಿರಾಬಾಯಿಗೆ ಅಂದರೆ ವೇಣುವಿನ ಜನನಿಗೆ ವಿಶೇಷ ಸಂತೋಷವಾಗಿತ್ತು. ವೇಣುವಿನ ಈಗಿನ ವರ್ತನವು ಮೊದಲಿನಂತೆ ಇತ್ತು. ಈಗ ಅವಳ ಹೃದ್ರೋಗವು ಕೃಷ್ಣರಾಯನ ಉಪದೇಶವಚನವೆಂಬ ದಿವ್ಯೌಷಧದಿಂದ ಪೂರ್ಣ ನಾಶವಾದ್ದರಿಂದ, ಈಗ ಅವಳು ಪ್ರತಿದಿವಸ ಸಾಯಂಕಾಲದಲ್ಲಿ ನಿರ್ಮಲವಾದ ಹವೆಯ ಸೇವನೆಗಾಗಿ ಸಮುದ್ರದ ದಂಡೆಗೆ ಹೋಗಹತ್ತಿದಳು.

ನಾವು ಯಾವ ದಿವಸದ ಪ್ರಸಂಗವನ್ನು ವರ್ಣಿಸುತ್ತೇವೋ ಆ ದಿವಸದ ಸಾಯಂಕಾಲದ ಶೋಭೆಯನ್ನು ವರ್ಣಿಸಲಿಕ್ಕೆ ಅಸದಳವಾಗಿದೆ. ಭಗವಾನ್ ಶ್ರೀಸೂರ್ಯದೇವನ ಪಶ್ಚಿಮಾಂಬುಧಿಯಲ್ಲಿ ಧುಮುಕುವ ವೇಳೆಯು ಸಮೀಪಿಸಿದ್ದರಿಂದ, ವಸುಂಧರೆಯು ಬಹಳೇ ಭಿನ್ನವಾದ ಮನೋರಮ

ವರ್ಣದ ವಸ್ತ್ರವನ್ನು ಧಾರಣ ಮಾಡಿಕೊಂಡಂತೆ ಕಾಣಿಸುತ್ತಿದ್ದಳು. ಆ ಸಾಯಂಕಾಲದ ಬಣ್ಣವು ಇಂಥಾದ್ದೇ ಇತ್ತೆಂದು ನಿರ್ಧರವಾಗಿ ಹೇಳುವದು ಆಗದ ಮಾತಾಗಿದೆ. ಆ ಬಣ್ಣವು ಗುಲಾಬಿಯದಲ್ಲ, ಹಳದಿಯದಲ್ಲ, ಬಂಗಾರದ ಬಣ್ಣದ್ದಲ್ಲ. ಆ ಬಣ್ಣವು ಬಹಳೇ ಭಿನ್ನ ಪ್ರಕಾರದ್ದಿತ್ತು. ಆ ಬಣ್ಣದ ಹೆಸರನ್ನು ಹೇಳುವದು ಕಲ್ಪನಾಶಕ್ತಿಯ ಹೊರಗಿನದೇ ಸರಿ. ಆ ಬಣ್ಣದ ವರ್ಣನೆಯನ್ನು ಮಾಡಲಿಕ್ಕೆ ಸುಪ್ರಸಿದ್ಧ ಕವಿಯಿಂದಲೂ ಸಾಧ್ಯವಾಗದು; ಚಿತ್ರದಲ್ಲಿ ಆ ಬಣ್ಣದಂತೆ ಬಣ್ಣವನ್ನು ಮಾಡುವದು ಸುಪ್ರಸಿದ್ಧ ಚಿತ್ರಗಾರನಿಂದಲೂ ಆಗದು. ಇಂಥ ವೈಲಕ್ಷಣ್ಯವಾದ ಅಪ್ರತಿಮ ವರ್ಣವು ಸರ್ವತ್ರ ಪಸರಿಸಿತ್ತು. ಸ್ವಚ್ಛವಾದ ಆಕಾಶವು ಸಣ್ಣ ಸಣ್ಣ ಮೋಡಗಳಿಂದ ಸಂದಟಿತವಾಗಿತ್ತು. ಬಳ್ಳೀ ಆನಂದದಿಂದ ಈ ಗಿಡದಿಂದ ಆ ಗಿಡಕ್ಕೆ, ಆ ಗಿಡದಿಂದ ಈ ಗಿಡಕ್ಕೆ ಹಾರ್ಯಾಡುವ ಪಕ್ಷಿಗಳ ಕಲಕಲಾಟವು ಅತಿಶಯವಾಗಿತ್ತು. ನಿಜವಾದ ಮನೋಹರ ವೇಳೆಯೆಂದರೆ ಆ ವೇಳೆಯೇ ಸರಿ! ಬೇಕಾದಂಥ ದಣಿದ ಮನುಷ್ಯನಿರಲಿ, ಆ ವೇಳೆಯಲ್ಲಿ ಕ್ಷಣಮಾತ್ರದಲ್ಲಿ ಅವನ ಶ್ರಮವು ಪರಿಹಾರವಾಗಿ, ಮನಸ್ಸಿಗೆ ಉಲ್ಹಾಸವಾಗುವದು. ಅವನಿಗೆ ಆ ವೇಳೆಯಲ್ಲಿ ಸಿಕ್ಕ ವಿಶ್ರಾಂತಿಸುಖವು ಸ್ವರ್ಗಸುಖಕ್ಕಿಂತಲೂ ಮಿಗಿಲಾಗಿ ತೋರುವದು. ಘೋರತರವಾದ ಚಿಂತೆಯಿಂದ ಕೊರಗುತ್ತಿರುವ ಮನುಷ್ಯನಿಗೆ ಆ ವೇಳೆಯ ದರ್ಶನಮಾತ್ರದಿಂದ ಆ ವೇಳೆಯ ಮಟ್ಟಿಗಾದರೂ ಅವನ ಚಿಂತೆಯು ಮರೆತು ಹೋಗುವದು. ಎಂಥ ದುಃಖಿತ ಮನುಷ್ಯನಿಗಾದರೂ ಆ ಸೃಷ್ಟಿಸೌಂದರ್ಯದ ದರ್ಶನದಿಂದ ಕೆಲಮಟ್ಟಿಗಾದರೂ ಸಮಾಧಾನವಾಗುವದು. ಈ ಪ್ರಕಾರದ ಸ್ವಾಭಾವಿಕವಾದ ಸಾಯಂಕಾಲದ ಸೊಬಗು, ಅದರಲ್ಲಿ ಸಮುದ್ರದ ದಂಡೆ. ಕೇಳುವದೇನು, ಆ ಸಾಯಂಕಾಲದ ಸೊಬಗು ವರ್ಣನಾತೀತವಾಗಿತ್ತು. ಆ ದಿವಸದ ರಮ್ಯವಾದ ದರ್ಶನೀಯತ್ವವನ್ನು ನೋಡಿ, ವೇಣೂವಿಗೆ ಬಹಳ ಸಮಾಧಾನವಾಯಿತು. ಸಮುದ್ರದ ದಂಡೆಯನ್ನು ಬಿಟ್ಟು ಹೋಗಬಾರದಾಗಿ ಅವಳಿಗೆ ತೋರಿದರೂ, ವೇಳೆಯ ಅಭಾವದಿಂದ ಅವಳು ಅಲ್ಲಿಂದ ತೀವ್ರ ಹೊರಡುವ ಭಾಗವು ಬಿದ್ದಿತು. ಆ ವೇಳೆಯಲ್ಲಿ ಸೂರ್ಯಬಿಂಬವು ಕ್ಷಿತಿಜದ ಕೆಳಗೆ ಹೋದ್ದರಿಂದ, ಪಶ್ಚಿಮದಿಕ್ಕಿನಲ್ಲಿ ಆರಕ್ತತೆಯು ಉತ್ಪನ್ನವಾಗಿತ್ತು. ಸಂಧಿಪ್ರಕಾಶವು ಸರ್ವತ್ರ ಹರಡಿತ್ತು. ಪಕ್ಷಿಗಳ,

ಆತುರದಿಂದ ತಮ್ಮ ತಮ್ಮ ಗೂಡುಗಳ ಕಡೆಗೆ ಹೋಗುತ್ತಿದ್ದವು. ಅಡವಿಯಿಂದ ದನಗಳು ಬಾಲವನ್ನು ಮೇಲೆ ಮಾಡಿಕೊಂಡು ಗ್ರಾಮದ ಕಡೆಗೆ ಹೋಗುತ್ತಿದ್ದವು. ವೇಣುವೂ ಮಾರ್ಗಕ್ರಮಣ ಮಾಡುತ್ತ ಮನೆಯ ಕಡೆಗೆ ತೆರಳುತ್ತಿದ್ದಳು. ಸಾಧಾರಣವಾಗಿ ಹಳ್ಳಿಯ ಬೀದಿಗಳು ಸರಳವಾಗಿರುವದಿಲ್ಲ; ಅದರಲ್ಲಿ ಕೊಂಕಣದ ಬೀದಿಗಳಂತೂ ಕಾಮನ ಬಿಲ್ಲಿನಂತೆ ವಕ್ರವಾಗಿದ್ದವು; ಮತ್ತು ಆ ಬೀದಿಗಳಲ್ಲಿ ತಗ್ಗುದಿನ್ನೆಗಳು ನೆಲೆಯಿಲ್ಲದಷ್ಟು ಇದ್ದವು. ಕತ್ತಲಾದ್ದರಿಂದ ವೇಣುವು ತಗ್ಗುದಿನ್ನೆಗಳಿಂದ ಹೊತ್ತುಕೊಂಡು ಬೀಳುತ್ತೇಳುತ್ತ ಆ ಮನೆಯಿಂದ ಈ ಮನೆಗೆ, ಈ ಮನೆಯಿಂದ ಆ ಮನೆಯುನ್ನು ಹೀಗೆ ಮನೆಮನೆಗಳನ್ನು ದಾಟುತ್ತ ಒಂದು ದೊಡ್ಡ ಮನೆಯ ಹತ್ತರ ಬಂದಳು. ಆ ಮನೆಯಿಂದ ಇನ್ನೂ ೩-೪ ಹೆಜ್ಜೆ ದೂರ ಹೋಗಿದ್ದಿಲ್ಲ. ಅಷ್ಟರಲ್ಲಿ ಭಯಂಕರವಾಗಿ ಕಾಣುತ್ತಿದ್ದ ಆ ದೊಡ್ಡ ಮನೆಯಲ್ಲಿ "ವೇಣೂ" ಎಂದು ಕರೆದಂತಾಯಿತು. ಆ ಧ್ವನಿಯನ್ನು ಕೇಳಿ ವೇಣುವು ಚಕಿತಳಾಗಿ ಹಿಂದುರಿಗಿ ನೋಡಿದಳು. ಅವಳಿಗೆ ಯಾರೂ ಕಾಣಿಸಲಿಲ್ಲ. ಆಗ ಅವಳು ಉಪಾಯಗಾಣದೆ, ಮಾರ್ಗಕ್ರಮಣ ಮಾಡಹತ್ತಲು ಮತ್ತೆ ಆ ಮನೆಯಲ್ಲಿ "ವೇಣೂ" ಎಂಬ ಧ್ವನಿಯು ಹೊರಟಿತು. ಆಗ ವೇಣುವಿಗೆ ಬಹಳ ಆಶ್ಚರ್ಯವಾಗಹತ್ತಿತು. ಅವಳಿಗೆ ಸುತ್ತುಮುತ್ತು ಯಾರೂ ಕಾಣಿಸಲಿಲ್ಲ. ಕಡೆಗೆ ಅವಳು ಮನೆಯೊಳಗಿಂದ ತನ್ನನ್ನು ಯಾರೋ ಕರೆಯುತ್ತಾರೆಂದು ತರ್ಕಿಸಿದಳು. ಆದರೆ ಮನೆಯೊಳಗೆ ಹೋಗಲಿಕ್ಕೆ ಅವಳಿಗೆ ಧೈರ್ಯವಾಗದ್ದರಿಂದ, ಅವಳು ಮುಖ್ಯದ್ವಾರದ ಹತ್ತರ ನಿಂತು ಒಳಗೆ ನೋಡಲಾಗಿ, ಮತ್ತೆ 'ವೇಣೂ' ಎಂಬ ಧ್ವನಿಯು ಹೊರಟಿತು. ಕರೆದ ಶಬ್ದವು ಮಧುರಸ್ವರದ ಶಬ್ದವಾಗಿ ಅವಳಿಗೆ ತಿಳಿದದ್ದರಿಂದ, ವೇಣುವು ತನ್ನನ್ನು ಆ ಮನೆಯೊಳಗಿರುವ ಯಾವಳೋ ಒಬ್ಬ ಸ್ತ್ರೀಯು ಕರೆಯುತ್ತಾಳೆಂದು ತಿಳಿದಳು. ವೇಣುವು ಬಹಳ ಪೇಚಾಟದಲ್ಲಿ ಬಿದ್ದು, ಒಳ್ಳೇ ಧೈರ್ಯದಿಂದ ಆ ಮನೆಯನ್ನು ಹೊಕ್ಕಳು.

ವೇಣುವು ಹೊಕ್ಕ ಮನೆಯು ಅವಳ ಪರಿಚಯವುಳ್ಳದ್ದು. ಆ ಮನೆಯು ಅವಳ ಮೈತ್ರಿಣಿಯದು. ವೇಣುವಿಗೆ "ಗಂಗೂ" ಎಂಬ ಬಾಲ್ಯದ ಗೆಳತಿಯಿದ್ದಳು. ಗಂಗುವು ಸಣ್ಣವಳಿರುವಾಗಲೇ ಅವಳ ತಂದೆಯು ಮೃತ

ಪಟ್ಟಿದ್ದನು; ಆದ್ದರಿಂದ ಗಂಗೂವಿಗೂ, ಗಂಗುವಿನ ಜನನಿಗೂ ಉದರಂಭರಣದ ನಿಮಿತ್ತ ಬಹಳ ಕಷ್ಟವಾಗಹತ್ತಿತು. ಗಂಗುವಿನ ಲಗ್ನವಾದ ಮೇಲೆ ಗಂಗುವು, ತನ್ನ ಮಾತೆಯೊಡನೆ ಪತಿಮಂದಿರವನ್ನು ಸೇರಿದಳು. ಅರ್ಥಾತ್ ಗಂಗುವು ಗಂಡನ ಮನೆಗೆ ಹೋದಕೂಡಲೆ ಆ ದೊಡ್ಡ ಮನೆಯು ಜನಶೂನ್ಯವಾಯಿತು. ಆ ಮನೆಯಲ್ಲಿ ಎರಡು-ಮೂರು ಸಾರೆ ಹೊರಟ 'ವೇಣೂ' ಎಂಬ ಶಬ್ದವನ್ನು ಕೇಳಿ, ವೇಣುವಿನ ಮನಸ್ಸಿನಲ್ಲಿ ಒಂದು ವಿಚಿತ್ರವಾದ ವಿಚಾರವು ಹುಟ್ಟಿತು. ತನ್ನ ಗೆಳತಿಯಾದಂಥ ಗಂಗುವು ತನ್ನ ಕರೆಯುತ್ತಾಳೆಂದೂ, ಆ ಸ್ವರವು ಗಂಗುವಿನ ಸ್ವರವೇ ಆಗಿರುವದೆಂದೂ ತರ್ಕಿಸಿ, ವೇಣುವು ಬಹಳ ದಿವಸಕ್ಕೆ ಗೆಳತಿಯ ಭೆಟ್ಟಿಯಾಗುತ್ತದೆಂದು ಹಿರಿಹಿರಿ ಹಿಗ್ಗಿದಳು. ಗಂಗುವಿನ ಭೆಟ್ಟಿಯಾದ ಕೂಡಲೆ ಅವಳಿಗೆ ತನ್ನ ಸ್ಥಿತಿಗತಿಗಳನ್ನು ಹೇಳಬೇಕೆಂದೂ, ಅವಳ ಸ್ಥಿತಿಗತಿಗಳನ್ನು ಕೇಳಬೇಕೆಂದೂ ಮನಸ್ಸಿನಲ್ಲಿ ಆಲೋಚನೆ ಮಾಡುತ್ತ ಅವಳು ಮನೆಯಲ್ಲಿ ಹೋಗುತ್ತಿದ್ದಳು. ಗಂಗುವಿನ ಮನೆಯು ಬಹಳ ದೊಡ್ಡದಿದ್ದು ಪುರಾತನಕಾಲದ ಪದ್ಧತಿಯಂತೆ ಕಟ್ಟಿತ್ತು. ಗಂಗುವಿನ ತಂದೆಯು ಬಹಳ ಬಡವನಿದ್ದವರಿಂದ, ಆ ಮನೆಯ ವ್ಯವಸ್ಥೆಯು ಸರಿಯಾಗಿ ಇಟ್ಟದ್ದಿಲ್ಲ. ಮನೆಯ ಎಷ್ಟೋ ಭಾಗವು ಬಿದ್ದಿತ್ತು-ಬೀಳುವದಿತ್ತು. ಇತ್ತಕಡೆಗಂತೂ ಆ ಮನೆಯು ತೀರ ರೌದ್ರವಾಗಿ ಕಾಣಿಸುತ್ತಿತ್ತು. ಅದು ಭೂತ ಪಿಶಾಚಿಗಳ ನಿವಾಸಸ್ಥಾನಕ್ಕೆ ಬಹಳ ಯೋಗ್ಯವಾಗಿತ್ತು. ಅಲ್ಲಿ ಎಂದೂ ಮನುಷ್ಯರ ಸಂಚಾರವಿದ್ದಿಲ್ಲ. ಮನೆಯಲ್ಲಿ ಎಲ್ಲ ಕಡೆಗೆ ಕತ್ತಲೆಯು ತುಂಬಿತ್ತು. ಮನೆಯ ಗೋಡೆಯು ಬಿದ್ದ ಭಾಗದಲ್ಲಿ ಸ್ವಲ್ಪ ಸಂಧಿಪ್ರಕಾಶವು ಒಳಗೆ ಬಿದ್ದಿತ್ತು. ಅದರ ಅನುರೋಧದಿಂದ ವೇಣುವು ಒಳಗೆ ನೋಡಹತ್ತಿದಳು; ಆದರೆ ಅವಳಿಗೆ ಯಾರೂ ಕಾಣಿಸಲಿಲ್ಲ. ಆಗ ಅವಳು ಅಂದದ್ದೇನಂದರೆ:— "ಗಂಗೂ, ನೀನು ಯಾವ ಕಡೆಗಿರುತ್ತೀ?" ಎಂದನ್ನಲು ಮೃದುಸ್ವರದಿಂದ ಯಾರೋ:— "ವೇಣೂ, ಇತ್ತ ಬಾ, ಇಲ್ಲಿಯೇ ಇದ್ದೇನೆ" ಎಂದಂದರು.

ಶಬ್ದಾನುರೋಧದಿಂದ ವೇಣುವು ಮುಂದಕ್ಕೆ ನಡೆದಳು. ನಿಜವಾಗಿ ಗಂಗುವು ಒಳಗೆ ಇರುತ್ತಾಳೆಂದು ಅವಳಿಗೆ ದೃಢವಾಯಿತು. ಕಿವಿಗೆ ಬಿದ್ದ ಶಬ್ದವು ಸ್ತ್ರೀ-ಕಂಠದಿಂದ ಹೊರಟಿತೆಂದು ವೇಣುವು ತಿಳಿದುಕೊಂಡದ್ದಕ್ಕೆ ಅವಳ

ದುರ್ದೈವವೇ ಕಾರಣವು! ಕತ್ತಲೆಯಲ್ಲಿ ಗೋಡೆಯನ್ನು ಹಿಡಿದುಕೊಂಡು ಅವಳು ಮುಂದಕ್ಕೆ ನಡೆದಿದ್ದಳು. ಬಹಳ ದಿವಸದಿಂದ ಸ್ವಚ್ಛ ಮಾಡುವ ದಾತರು ಇಲ್ಲದ್ದರಿಂದ, ಆ ಮನೆಯಲ್ಲಿ ಮೊಣಕಾಲತನಕ ಕಸವು ಬಿದ್ದಿತ್ತು. ಅಲ್ಲಿ ಒಂದು ಹೆಜ್ಜೆಯನ್ನು ಕಿತ್ತು ಮತ್ತೊಂದು ಹೆಜ್ಜೆಯನ್ನು ಹಾಕಲಿಕ್ಕೆ ಬಹಳ ಪ್ರಯಾಸವಾಗುತ್ತಿತ್ತು. ಆ ಮನೆಯಲ್ಲಿ ನೆಲದಿಂದ ಜಂತಿಯ ತನಕ ಧೂಳವು ತುಂಬಿತ್ತು. ಆ ಮನೆಯು ಮುಖ್ಯವಾಗಿ ಅಂಗಾರಾಮ್ಲ ವಾಯು ವಿಗೆ ತವರಮನೆಯಾಗಿತ್ತು. ಆ ಮನೆಯ ದುರ್ಗಂಧವನ್ನು ವರ್ಣಿಸಲಿಕ್ಕೆ ನಮ್ಮಂಥ ಸಾವಿರ ಲೆಕ್ಕಣಿಕೆಯಿಂದಾದರೂ ಆಗದು! ಇಂಥ ದುರ್ಧರವಾದ ಮನೆಯಲ್ಲಿ ಸ್ನೇಹಬದ್ಧಳಾದ ವೇಣುವು ಗಳಿಗೆಗೊಂದು ತಾಸಿಗೊಂದು ಹೆಜ್ಜೆ ಕಾಕುತ್ತ, ಬೀಳುತ್ತೇಳುತ್ತ ಸ್ವಲ್ಪ ಮುಂದಕ್ಕೆ ಹೋಗಿ ಅಂದದ್ದೇನಂದರೆ:– "ಗಂಗೂ, ಇನ್ನೂ ದೀವಿಗೆಯನ್ನು ಯಾಕೆ ಹಚ್ಚಿಲ್ಲ? ಕತ್ತಲೆಯಲ್ಲಿ ಮಾಡು ವ ಕೆಲಸವಾದರೂ ಏನು?" ಎಂದಂದಳು.

ತಿರುಗಿ ಮೊದಲಿನಂತೆ ಯಾರೋ:—"ವೇಣೂ, ಏನು ಹೇಳಲಿ! ತನ್ನ ದುಃಖಕ್ಕೆ ಮೇರೆಯಿಲ್ಲ!! ನನ್ನ ಮೈಯಲ್ಲಿ ಬೇನೆಯು ಹೆಚ್ಚಾಗಿದೆ; ಅದರಿಂದ ನಾನು ಮೇಲಕ್ಕೇಳುವಂತಿಲ್ಲ. ಅವ್ವನು ಬರಬೇಕು, ದೀವಿಗೆ ಹಚ್ಚಬೇಕು." ಎಂದಂದರು.

ವೇಣುವಿನ ಕೋಮಲಾಂತಃಕರಣವು ತೀರ ಕರಗಿತು. ತನ್ನ ಗೆಳ ತಿಗೆ ಇಷ್ಟು ಅಜಾರಿಯಾಗಿದ್ದರೆ, ತಾನು ಅವಳ ಭೆಟ್ಟಿಗೆ ಬಂದಿಲ್ಲವಾಗಿ ಆಲೋಚನೆ ಹುಟ್ಟಲು ಅವಳಿಗೆ ಬಹಳ ದುಃಖವಾಯಿತು. ಅವಳು ಮನ ಸ್ಸಿನಲ್ಲಿ ಆಲೋಚಿಸಿದ್ದೇನಂದರೆ:—"ಗಂಗುವಿಗೆ ಶಕ್ಯವಿದ್ದಷ್ಟು ಸಹಾಯ ಮಾಡಬೇಕು, ಅವಳನ್ನು ನನ್ನ ಮನೆಗೆ ಕರಕೊಂಡು ಹೋಗಿ, ಅವಳಿಗೆ ಸರಿಯಾದ ಔಷಧೋಪಚಾರವನ್ನು ಮಾಡಿಸಬೇಕು." ಎಂದಾಲೋಚಿಸುತ್ತ ಉಪಕಾರ ಬುದ್ಧಿಯಿಂದ ಪ್ರೇರಿತಳಾದ ವೇಣುವು ಸ್ವಲ್ಪ ಮುಂದಕ್ಕೆ ಹೋಗಿ "ಗಂಗೂ, ನೀನೆಲ್ಲಿರುವಿ? ನಿನ್ನ ಧ್ವನಿಯು ಮಾತ್ರ ಕೇಳಿಸುತ್ತದೆಯೋ ಹೊರತು ನೀನಿರುವದು ಗೊತ್ತಾಗವೊಲ್ಲದು." ಎಂದಂದಳು.

ಆಗ ವೇಣುವಿನ ಸಮೀಪದಲ್ಲಿ ಯಾರೋ:—"ವೇಣೂ, ಇದೇ ಕೋ ಣೆಯಲ್ಲಿ ಇದ್ದೇನೆ" ಎಂದಂದರು.

ಶುದ್ಧ ಸ್ವಭಾವದ ವೇಣುವು ಸ್ವಲ್ಪವಾದರೂ ವಿಚಾರಿಸದೆ, ಅಲ್ಲಿಯೇ ಸಮೀಪದಲ್ಲಿದ್ದ ಕೋಣೆಯಲ್ಲಿ ಹೊಕ್ಕಳು; ಆದರೆ ಕೋಣೆಯಲ್ಲಿ ಸರ್ವತ್ರ ತಮೋರಾಶಿಯು! ಯಾರ ಶ್ವಾಸೋಚ್ಛ್ವಾಸವಿಲ್ಲ. ಆಗ ವೇಣುವು ಭಯ ಬೀತಳಾಗಿ:—"ಗಂಗೂ, ನೀನು ಯಾವ ಕಡೆಗಿರುವಿ?" ಎಂದಂದಳು.

"ಇಲ್ಲಿಯೇ ಇದ್ದೇನೇ"

ಇಷ್ಟು ಶಬ್ದವನ್ನು ಬಹಳ ಗಟ್ಟಿಯಾಗಿ ಉಚ್ಚರಿಸಿ, ಕೋಣೆಯ ಬಾಗಿಲವನ್ನು 'ಧಡಧಡ' ಮುಚ್ಚಿಕೊಂಡರು. ವೇಣುವು ಭಯದಿಂದ ವ್ಯಾಕುಲಳಾಗಿ, ಉಸುರ್ಗರೆದು ಅಳಹತ್ತಿದಳು 'ಹಿಡಿಬರ್‍ರಿ–ಯಾರಾದರೂ ಹಿಡಿಬರ್‍ರಿ' ಎಂದು ಅವಳು ಗಟ್ಟಿಯಾಗಿ ಕೂಗಿದಳು; ಆದರೆ ಅವಳನ್ನು ಬಿಡಿಸುವದಕ್ಕಾಗಿ ಯಾರು ಬರಬೇಕು? ತಿರುಗಿ ಹತ್ತರದಲ್ಲಿಯೇ ಹೀಃ ಹೀಃ ಹೀಃ ಎಂದು ವಿಚಕಟವಾಗಿ ನಗುವದು ಮಾತ್ರ ಕೇಳಹತ್ತಿತು. ಅದರ ಹೊರ್ತು ಏನೂ ಉತ್ತರ ದೊರೆಯಲಿಲ್ಲ. ಅವಳು ಅನೇಕಸಾರೆ "ನನ್ನನ್ನು ಬಿಡಿಸಿರಿ, ನನ್ನನ್ನು ಬಿಡಿಸಿರಿ" ಎಂದು ಕೂಗಿದರೂ, ಯಾರೂ ಬಂದು ಅವಳನ್ನು ಬಿಡಿಸಿಕೊಳ್ಳಲಿಲ್ಲ. ಹೊರಗಿಂದ ಯಾರೂ ಬಾಗಿಲವನ್ನು ತೆಗೆಯುವದಿಲ್ಲೆಂದು ಅವಳಿಗೆ ಪೂರ್ಣವಾಗಿ ಹೊಳೆಯಿತು. ಆಗ ಅವಳು ಆ ಕೋಣೆಯಿಂದ ಹೊರಬೀಳುವದಕ್ಕಾಗಿ ಮಾರ್ಗವನ್ನು ಶೋಧಿಸಹತ್ತಿದಳು. ಆದರೆ ಆಕೋಣೆಯಲ್ಲಿ ಬಾಗಿಲದ ಹೊರ್ತು ಮತ್ತೆಲ್ಲಿಯೂ ಹೊರಬೀಳಲಿಕ್ಕೆ ಮಾರ್ಗವಿದ್ದಿಲ್ಲ. ಆ ಕೋಣೆಯನ್ನು ಅವಳು ಅನೇಕ ಸಾರೆ ಶೋಧಮಾಡಿದಳು. ಬಾಗಿಲು ತೆಗೆಯುವದರ ಸಲುವಾಗಿ ಅವಳು ಮಿತಿಗೆಟ್ಟು ಪ್ರಯತ್ನಮಾಡಿದಳು. ಆದರೆ ಅದರಿಂದ ಅವಳಿಗೇನೂ ಲಾಭವಾಗಲಿಲ್ಲ. ಆ ವೇಳೆಯಲ್ಲಿ ವೇಣುವಿನ ಸ್ಥಿತಿಯು ಹೇಗಾಗಿರಬಹುದೆಂಬವನ್ನು ತರ್ಕಿಸಲಿಕ್ಕೆ ನಾವು ವಾಚಕರ ಕಡೆಗೆ ಒಪ್ಪಿಸುತ್ತೇವೆ. ಭಯಂಕರವಾದ ಕತ್ತಲೆಯಿಂದಲೂ, ವಿಲಕ್ಷಣವಾದ ದುರ್ಗಂಧದಿಂದಲೂ, ಮಿತಿಮೀರಿದ ಧೂಳಿಯಿಂದಲೂ ತುಂಬಿದ ಆ ನರಕಸದೃಶವಾದ ಕೋಣೆಯಲ್ಲಿ ಅವಿಚಾರದಿಂದ ಬಂದು ಹೊಕ್ಕದ್ದಕ್ಕಾಗಿ ಅವಳಿಗೆ ಬಹಳ ಪಶ್ಚಾತ್ತಾಪವಾಯಿತು. ಎಷ್ಟೋ ವೇಳೆಯ ವರೆಗೆ ಅವಳು ಸುಮ್ಮನೆ ನಿಂತಿದ್ದಳು. ನಂತರ ತನ್ನ ಅಪರಾಧಕ್ಕಾಗಿ ಸಂತಾಪವು ಉತ್ಪನ್ನವಾಗಲು, ಅವಳು ಆ ಸಂತಾಪದ ಭರದಲ್ಲಿ ತನ್ನ ತಲೆಯನ್ನು ಗಟ್ಟಿಯಾಗಿ

ಗೋಡೆಗೆ ತಾಕಿಸಿದಳು. ಕೂಡಲೆ ಅವಳು ನಿಶ್ಚೇಷ್ಟಳಾಗಿ ಭೂಮಿಯ ಮೇಲೆ ಬಿದ್ದಳು.

* * * * *

ಸಾಯಂಕಾಲವು ಮುಗಿದು, ರಾತ್ರಿಯು ಒಂದೊಂದು ಗಳಿಗೆಯಿಂದ ಬೆಳೆಯಹತ್ತಿತು. ವೇಣುವು ವಾಸ್ತವಿಕ ಕತ್ತಲೆಯಾಗುವದರೊಳಗೆ ಮನೆಗೆ ಬರತಕ್ಕವಳು; ಆದರೆ ಅಂದು ಆರು ಹೊಡೆಯಿತು, ಏಳು ಹೊಡೆಯಿತು, ಎಂಟು ಹೊಡೆಯುವ ಮಜಲಿಗೆ ಬಂದಿತು; ಆದರೂ ವೇಣುವು ಬಾರದ್ದರಿಂದ, ಅವಳ ಮಾತೆಯು ಚಡಪಡಿಸಹತ್ತಿದಳು. ಶ್ರೀಪಾದನು "ಅಕ್ಕ ಅಕ್ಕ" ಎಂದು ಕರೆಕರೆದು ಅಳಹತ್ತಿದನು. ಒಂಭತ್ತು-ಹತ್ತು ಹೊಡೆದರೂ ವೇಣುವು ಬಾರದ್ದರಿಂದ ವೇಣುವಿನ ಮಾತೆಯಾದ ಇಂದಿರಾಬಾಯಿಗೆ ಪರಮ ವ್ಯಸನವಾಯಿತು. ವೇಣುವಿನ ಸಲುವಾಗಿ ಅವಳ ಮಾತೆಗ ಬಹಳ ಯೋಚನೆ ಹುಟ್ಟಿತು. ವೇಣುವು ಯಾಕೆ ಬಂದಿರಲಿಕ್ಕಿಲ್ಲೆಂಬದರ ನಿಜವಾದ ಮೀಮಾಂಸೆಯನ್ನು ಮಾಡಲಿಕ್ಕೆ ಅವಳಿಗೆ ಬರಲಿಲ್ಲ. ಶ್ರೀಪಾದನು ವೇಣುವಿನ ಸಲುವಾಗಿ ಮೇಲೆ ಮೇಲೆ ತಾಯಿಯನ್ನು ವಿಚಾರಿಸುತ್ತಿದ್ದನು. ಇಂದಿರಾಬಾಯಿಯು ಏನಾದರೂ ಹೇಳಿ, ಶ್ರೀಪಾದನನ್ನು ಸಮಾಧಾನ ಮಾಡುತ್ತಿದ್ದಳು. ಇಂದರಾಬಾಯಿಯ ಹೃದಯದಲ್ಲಿಯ ಕೋಲಾಹಲವನ್ನು ವರ್ಣಿಸಲಿಕ್ಕೆ ಇಂಥ ನೂರಾರು ಪಾನುಗಳು ಬೇಕಾದರೂ, ಅವಳ ವಿಚಾರತರಂಗಗಳ ಪೂರ್ಣಕಲ್ಪನೆಯು ಆಗುವಂತಿಲ್ಲ. ಇಂದಿರಾಬಾಯಿಯು ಕಡೆಗೆ ಮನಸ್ಸಿನಲ್ಲಿ ಆಲೋಚಿಸಿದ್ದೇನಂದರೆ:—"ವೇಣುವು ಬಹಳ ಮಾಡಿ ಗೋವಿಂದರಾಯರ ಮನೆಗೆ ಹೋಗಿರಬಹುದು; ರಾತ್ರಿಯು ಬಹಳವಾಯಿತೆಂದು ಅವರು ಅಲ್ಲಿಯೇ ಇಟ್ಟುಕೊಂಡಿದ್ದಾರು" ಎಂದಾಲೋಚಿಸಿದಳು. ಇಂದಿರಾಬಾಯಿಗೆ ಈ ಆಲೋಚನೆಯು ಎಷ್ಟೋಮಟ್ಟಿಗೆ ನಿಜವಾಗಿ ಕಾಣಿಸಿತು. ಯಾಕಂದರೆ ಈಮೊದಲು ವೇಣುವು ಗೋವಿಂದರಾಯರ ಮನೆಗೆ ಎರಡುಮೂರು ಸಾರೆ ಹೋಗಿ, ರಾತ್ರಿಯಲ್ಲಿ ಅಲ್ಲಿಯೇ ಇದ್ದಳು. ಆದರೂ ಇಷ್ಟರ ಮೇಲಿಂದ ಇಂದಿರಾಬಾಯಿಗೆ ತುಂಬಾ ಸಮಾಧಾನವಾಗಲಿಲ್ಲ. ಅವಳು ಹಾಗೂ ಹೀಗೂ ಸಮಾಧಾನಪಡಿಸಿ, ಶ್ರೀಪಾದನನ್ನು ಮಲಗಿಸಿದಳು. ತಾನು ಮಾತ್ರ ಪೂರ್ಣ ರಾತ್ರಿಯನ್ನು ವೇಣುವನ ಕಡೆಯ ಚಿಂತೆಯಲ್ಲಿಯೇ ಕಳೆದಳು.

ಪೂರ್ಣ ರಾತ್ರಿಯಲ್ಲಿ ಅರಕ್ಷಣವಾದರೂ ಅವಳು ನಿದ್ರೆಯನ್ನು ಮಾಡಲಿಲ್ಲ. ಮೂವತ್ತೇ ಮೂವತ್ತು ಗಳಿಗೆಯ ರಾತ್ರಿಯು ಇಂದಿರಾಬಾಯಿಗೆ ಒಂದು ಯುಗವಾಗಿ ತೋರಿತು. ಆ ದುಃಖದ ರಾತ್ರಿಯು ಮುಗಿದು, ಮೆಲ್ಲಮೆಲ್ಲನೆ ಸೂರ್ಯಬಿಂಬವು ಕ್ಷಿತಿಜದ ಮೇಲೆ ಬಂದು, ನಾಲ್ಕು ದಿಕ್ಕುಗಳಲ್ಲಿ ಸುಂದರ ಪ್ರಕಾಶವು ಬಿದ್ದಿತು. ಜನರ ಉದ್ಯೋಗಗಳು ಪ್ರಾರಂಭವಾದವು. ಗೋವಿಂದರಾಯರ ಮನೆಯಿಂದ ವೇಣುವು ಈಗ ಬರಬಹುದಾಗಿ ಇಂದಿರಾಬಾಯಿಗೆ ತೋರುತ್ತಿತ್ತು. ಅವಳು ಆಶಾತೀತ ಮನಸ್ಸಿನಿಂದ ವೇಣುವಿನ ಬರುವ ಮಾರ್ಗದ ಕಡೆಗೆ ಒಂದೇಸವನೆ ನೋಡುತ್ತಿದ್ದಳು. ವೇಣುವು ಈಗ ಬಂದಾಳು, ಆಗ ಬಂದಾಳು, ಎಂದೆನ್ನುತ್ತಿರಲಿಕ್ಕೆ ಪ್ರಾತಃಕಾಲದ ಎಂಟು ಗಂಟೆಯು ಬಡಿಯಿತು; ಆದರೂ ವೇಣುವು ಬರಲಿಲ್ಲ. ಈಗ ಮಾತ್ರ ಇಂದಿರಾಬಾಯಿಗೆ ಪೂರ್ಣ ಸಂಶಯವು ಉತ್ಪನ್ನವಾಯಿತು. ಗೋವಿಂದರಾಯರ ಮನೆಗಷ್ಟು ಹೋಗಿ ನೋಡಬೇಕೆಂದಾಲೋಚಿಸಿ, ಅವಳು ಕೂಡಲೆ ಗೋವಿಂದರಾಯರ ಮನೆಗೆ ಹೋದಳು; ಆದರೆ ಅಲ್ಲಿಗೆ ಹೋದ ಕೂಡಲೆ ಅವಳ ದುಃಖವು ಮೇರೆದಪ್ಪಿತು; ಅವಳ ಮೇಲೆ ಆಕಾಶವೇ ಕಳಚಿಕೊಂಡು ಬಿದ್ದಂತಾಯಿತು; ಅವಳು ಸಣ್ಣ ಹುಡುಗರಂತೆ ಬಿಕ್ಕಿ ಬಿಕ್ಕಿ ಅಳಹತ್ತಿದಳು. ಗೋವಿಂದರಾಯನು ಅವಳಿಗೆ ಎಷ್ಟೋ ಧೈರ್ಯದ ಮಾತುಗಳನ್ನು ಹೇಳಿದನು. ಕೃಷ್ಣರಾಯನು ವೇಣುವಿನ ಶೋಧಕ್ಕಾಗಿ ಎಷ್ಟೋ ಜನರನ್ನು ನಾಲ್ಕೂ ಕಡೆಗೆ ಕಳಿಸಿದನು. ಮತ್ತು ಇಂದಿರಾಬಾಯಿಗೆ ಬಹಳವಾಗಿ ಸಮಾಧಾನದ ಮಾತುಗಳನ್ನು ಹೇಳಿ, ಅವಳನ್ನು ಮನೆಗೆ ಕಳುಹಿಸಿಕೊಟ್ಟನು.

ಒಂದು ದಿವಸವಾಯಿತು, ಎರಡು ದಿವಸವಾಯಿತು, ಆದರೂ ವೇಣುವು ಸಿಗಲಿಲ್ಲ. ಗ್ರಾಮದಲ್ಲಿ ಹಾಹಾ ಅನ್ನುತ್ತಿರಲಿಕ್ಕೆ ಈ ಸುದ್ದಿಯು ಹರಡಿತು. ಆ ಗ್ರಾಮದಲ್ಲಿ ಇಂಥ ಸುದ್ದಿಯನ್ನು ಆದಷ್ಟು ಬೇಗ ಹಬ್ಬಿಸುವದು, ಎಷ್ಟೋ ಜನರಿಗೆ ವಿನೋದವೆನಿಸುತ್ತಿತ್ತು; ಆದ್ದರಿಂದ "ವೇಣುವು ಇಲ್ಲ" ಎಂಬ ಸುದ್ದಿಯು ಸಣ್ಣವರಿಂದ ದೊಡ್ಡವರತನಕ ತಿಳಿಯಲಿಕ್ಕೆ ಒಂದು ತಾಸು ಕೂಡ ವೇಳೆಯು ಬೇಕಾಗಲಿಲ್ಲ. ಗ್ರಾಮದಲ್ಲಿಯ ಕೆಲಸವಿಲ್ಲದ ಸೊಗಸುಗಾರರಿಗೆ ಇದೊಂದು ವಿನೋದದ ವಿಷಯವು ಸಿಕ್ಕಂತಾಯಿತು. ವೇಣುವಿನ ವಿಷಯವಾಗಿ ಯಾರಿಗೆ ಹೇಗೆ ತಿಳಿದೀತೋ, ಹಾಗೆ ಬೊಗಳಹತ್ತಿದರು;

ಕೆಲವರು ವೇಣುವು ಯಾವನನ್ನೋ ಹಿಡಿಸಿಕೊಂಡು ಹೋದಳೆಂದು ಒದರು ತ್ತಿದ್ದರು; ಕೆಲವರು ವೇಣುವನ್ನು ಗೋವಿಂದರಾಯನು ಅಡಗಿಸಿಟ್ಟರುತ್ತಾ ನೆಂದು ಕೂಗುತ್ತಿದ್ದರು; ಕೆಲವರು ವಿಶ್ವನಾಥರಾಯನ ಅಂಜಿಕೆಯಿಂದ ಇಂ ದಿರಾಬಾಯಿಯು ವೇಣುವನ್ನು ಎಲ್ಲಿಯೋ ಅಡಗಿಟ್ಟು, ಹೊರಗೆ ಈಪ್ರಕಾರ ವಾಗಿ ಸುಳ್ಳು ಸುದ್ದಿಯನ್ನು ಮಾಡಿರುತ್ತಾಳೆಂದು ಸಾರುತ್ತಿದ್ದರು; ಕೆಲವರು ಕೃಷ್ಣರಾಯನೇ ಮುಂದೆ ವೇಣುವನ್ನು ಮುಂಬಯಿಗೆ ಕಳಿಸಿರುತ್ತಾನೆಂ. ಅನ್ನುತ್ತಿದ್ದರು; ಕೆಲವರು ಈಗಲೇ ಲಗ್ನವಾಗಲಿಕ್ಕೆ ವೇಣುವಿಗೆ ಅನುಕೂ ಲತೆಯಿಲ್ಲದ್ದರಿಂದ, ಅವಳು ಕಾಮಬಾಧೆಯನ್ನು ಸೈರಿಸಲಾರದೆ, ಸಮುದ್ರ ದಲ್ಲಿ ಹಾರಿಕೊಂಡಿರುವಳೆಂದು ಅನ್ನುತ್ತಿದ್ದರು; ಈಪ್ರಕಾರ ತರತರದ ವಾ ರ್ತಾಪ್ರವಾಹಗಳು ಇಡೀ ಅವಂತೀಪುರದ ತುಂಬ ಹರಿದಾಡುತ್ತಿದ್ದವು. ಹಳ್ಳಿಯ ಜನರಿಗೆ ಯಾವದೊಂದು ಹೊಸ ವಿಷಯವು ಸಿಕ್ಕಿತೆಂದರೆ ಅವರ ವಿನೋದಕ್ಕೆ ಅಳತೆಯಿರುವದಿಲ್ಲ; ಅದರಲ್ಲಿ ಪುರುಷರಿಗಿಂತ ಸ್ತ್ರೀಯರಿಗಂತೂ ಈ ವಿಷಯವಾಗಿ ಉತ್ಕಟಾಪೇಕ್ಷೆಯಿರುತ್ತದೆ. ಅವಂತೀಪುರವು ವಿಸ್ತಾರ ದಿಂದ ಸಣ್ಣದಿದ್ದರೂ, ಮೇಲಿನ ಸ್ವಭಾವದ ಸ್ತ್ರೀಯರಿಂದ ದೊಡ್ಡದಿತ್ತು. 'ವೇಣುವು ಇಲ್ಲ' ಎಂಬ ವಾರ್ತೆಯು ಆಸ್ತ್ರೀಯರ ಕರ್ಣರಂಧ್ರಗಳಿಗೆ ತಗ ಲುವದೊಂದೇ ತಡವಿತ್ತು. ಅವರಿಗೆ ಈ ಸುದ್ದಿಯು ತಿಳಿದ ಕೂಡಲೆ ಅವರ ವಾಗ್ಯಂತ್ರಗಳು " ಉಗಿಯ ಶಕ್ತಿಯಿಂದ ನಡೆಯುವ ಯಂತ್ರದಂತೆ " ಒಂದೆ ಸವನೆ ಕೆಲಸಮಾಡಹತ್ತಿದವು; ಆದರೂ ಅಷ್ಟರಿಂದ ಅವರ ಮನಸ್ಸು ತೃಪ್ತ ವಾಗಲಿಲ್ಲ. ಆ ನೀಚ ಸ್ತ್ರೀಯರು ಪರದುಃಖದ ಪರಿಮಾರ್ಜನ ಮಾಡುವ ದಕ್ಕಾಗಿ ಬೇರೊಂದು ಮಾರ್ಗವನ್ನು ಹುಡುಕಿದರು.

ವೇಣುವು ಶರೆಮನೆಯನ್ನು ಸೇರಿದ ನಾಲ್ಕನೇ ದಿವಸದ ಸಂಜೆಯ ಐದು ಹೊಡೆಯುವ ಸುಮಾರಕ್ಕೆ ಗ್ರಾಮದ ಎಷ್ಟೋ ಸ್ತ್ರೀಯರು ಇಂದಿರಾ ಬಾಯಿಯ ಮನೆಗೆ ಬಂದರು. ಇಂಥ ದೊಡ್ಡ ಸ್ತ್ರೀಸಮಾಜವು ಆಮಂತ್ರಣ ವಿಲ್ಲದೆ, ತನ್ನ ಮನೆಗೆ ಬಂದದ್ದಕ್ಕಾಗಿ ಇಂದಿರಾಬಾಯಿಗೆ ಆಶ್ಚರ್ಯವೆನಿಸಿ ತು. ಇಂದಿರಾಬಾಯಿಗೆ ಬಹಿಷ್ಕಾರ ಕೊಟ್ಟಂದಿನಿಂದ ಇಂದಿನವರೆಗೆ ಗ್ರಾ ಮದ ಒಬ್ಬ ಸ್ತ್ರೀಯರಾದರೂ, ಇಂದಿರಾಬಾಯಿಯ ಮನೆಗೆ ಬಂದಿದ್ದಿಲ್ಲ. ಇಂದು ಒಮ್ಮಿಂದೊಮ್ಮೆ ಹೆಂಗಸರ ಹಿಂಡೇ ತನ್ನ ಮನೆಗೆ ಬಂದದ್ದಕ್ಕಾಗಿ

ಅವಳಿಗೆ ಒಳ್ಳೇ ಯೋಚನೆಯು ಹುಟ್ಟಿತು. ಆಲೋಚನಾಂತ್ಯದಲ್ಲಿ ಇಂದಿರಾ ಬಾಯಿಯು ಈ ಎಲ್ಲ ಸ್ತ್ರೀಯರು ತನ್ನ ದುಃಖಸಮಾಧಾನಕ್ಕಾಗಿ ನೆರೆದಿರ ಬಹುದೆಂದು ತರ್ಕಿಸಿದಳು. ಇಂದಿರಾಬಾಯಿಯು ಸರ್ವರಿಗೂ ಯೋಗ್ಯ ಸ್ವಾಗತಮಾಡಿ ಒಳ್ಳೇ ಆದರದಿಂದ ಒಳಗೆ ಕರಕೊಂಡು ಬಂದು ಕುಳ್ಳಿರಿಸಿ, "ನಮ್ಮಂಥ ಬಡವರ ಮನೆಗೆ ತಮ್ಮಂಥವರು ಬಂದದ್ದು ಬಹಳ ಶ್ಲಾಘನೀಯ ವಾದದ್ದು" ಎಂದನ್ನುತ್ತ ಅವರೆಲ್ಲರ ಉಪಕಾರವನ್ನು ಮನ್ನಿಸಿದಳು. ನೆರೆದ ಸ್ತ್ರೀಯರು ತನಗೆ ಒಂದೆರಡು ಸಮಾಧಾನದ ಮಾತುಗಳನ್ನು ಹೇಳಬಹು ದೆಂದು ಇಂದಿರಾಬಾಯಿಯು ಭಾವನೆಯಿತ್ತು; ಆದರೆ ಅವಳ ಆಭಾವನೆಯು ಸ್ವಲ್ಪ ವೇಳೆಯಲ್ಲಿ ನಾಶವಾಯಿತು. ಕೂಡಿದ ಸ್ತ್ರೀಯರು ವೇಣುವಿನ ಸಂ ಬಂಧವಾಗಿ ದುಃಖಪ್ರದರ್ಶನವನ್ನು ಮಾಡಲಿಲ್ಲ. ಎಷ್ಟೋ ವೇಳೆಯವರೆಗೆ ಆ ಸ್ತ್ರೀಯರು ಸುಮ್ಮನೆ ಕುಳಿತಿದ್ದರು. ಅವರಲ್ಲಿ ಯಾರೂ ಮಾತಾಡದ್ದನ್ನು ನೋಡಿ, ವಿಶ್ವನಾಥರಾಯನ ಹೆಂಡತಿಯಾದ ರಾಧಾಬಾಯಿಯು ನುಡಿದಳೇ ನಂದರೆ:—"ಇಂದಿರಾಬಾಯೀ ಹೇಗಾಯಿತು? ವೇಣುವಿನ ಸಂಬಂಧವಾಗಿ ಆಡುವ ಜನರ ನಿಂದ್ಯೋಕ್ತಿಗಳನ್ನು ಕೇಳಿದಿಯಾ! ಪ್ರಾಯದ ವೇಣುವು ಎಲ್ಲಿ ಹೋದಳೋ ಎಲ್ಲಿ ಇಲ್ಲೋ!! ಅವ್ವಾ, ಈಗಿನ ಹುಡುಗೆಯರು ಏನು ಮಾಡುತ್ತಾರೆ, ಏನಿಲ್ಲ ಇದರ ನಿಯಮವೇ ಇಲ್ಲ!!!

ಇಂದಿರಾಬಾಯಿಯು ಒಂದು ತುಟಿ ಎರಡು ಮಾಡದೆ, ಸುಮ್ಮನೆ ಕುಳಿತಿದ್ದಳು. ರಾಧಾಬಾಯಿಯ ಭಾಷಣವು ಮುಗಿದ ಮೇಲೆ ಗೋಪಿಕಾ ಬಾಯಿ ಸಾವಿತ್ರೀಬಾಯಿಯರು ಪರಭಾರೆ ಮಾತಾಡಲಾರಂಭಿಸಿದರು.

ಗೋಪಿಕಾಬಾಯಿ:—"ಅವ್ವಾ, ಸಾವಿತ್ರೀಬಾಯಿ, ಈಗಿನ ಹುಡು ಗೆಯರ ಸ್ವಭಾವವು ಎಷ್ಟು ವಿಲಕ್ಷಣವಾದದ್ದು ಕಂಡೆಯಾ; ನಮ್ಮ ಸ್ವಭಾ ವಕ್ಕೂ, ಈಗಿನ ಹೆಂಗಸರ ಸ್ವಭಾವಕ್ಕೂ ಮಹದಂತರವದೆ. ನನ್ನ ಮ ಗಳು ಇಲ್ಲಿಯ ವರೆಗೆ ಶಾಲೆಗೆ ಹೋಗುತ್ತಿದ್ದಳು; ಆದರೆ ವೇಣುವು ಓಡಿ ಹೋದ ಸುದ್ದಿಯನ್ನು ಕೇಳಿದಂದಿನಿಂದ ಅವಳಿಗೆ ಶಾಲೆಗೆ ಹೋಗಬಾರದೆಂ ದು ಕಟ್ಟಪ್ಪಣೆ ಮಾಡಿರುತ್ತೇನೆ.

ಸಾವಿತ್ರಿಬಾಯಿ:—"ನಮ್ಮ ಹರಿಪಂತನು ನಿತ್ಯ ಸಮುದ್ರದ ದಂಡೆಗೆ ಹೋಗುತ್ತಿರುತ್ತಾನೆ. ಅವನು ಹೇಳುವದೇನಂದರೆ:—"ವೇಣುವು ಪ್ರತಿ

ನಿತ್ಯ ಸಮುದ್ರದ ದಂಡೆಗೆ ಬರುತ್ತಾಳೆ; ಅಲ್ಲಿ ಒಂದು ಕಲ್ಲಮೇಲೆ ಕುಳಿತು ಕೊಂಡು, ಪುಸ್ತಕವನ್ನು ಓದುತ್ತಿರುತ್ತಾಳೆ. ನಾನು ಒಳಗಡೆ ಮುಂಬಯಿಗೆ ಹೋದಾಗ್ಗೆ ವೇಣುವು ಕಾಲೊಳಗೆ ಬೂಟು ಹಾಕಿಕೊಂಡು, ಕೈಯಲ್ಲಿ ಛತ್ರಿ ಯನ್ನು ಹಿಡಿದುಕೊಂಡ. ತಿರುಗಾಡುತ್ತಿದ್ದಳು; ಮುಂಬಯಿಯಲ್ಲಿ ಮನಬಂ ದಂತೆ ಉಂಡುಟ್ಟು ತಿರುಗಾಡಿರುವದೇ ಅವಳ ಈಗಿನ ದುರ್ವರ್ತನದ ಬೀಜ ಮಂತ್ರವಾಗಿದೆ." ಎಂದು ಹೇಳಿದನು.

ಇಷ್ಟರಲ್ಲಿ ಸುಗುಣಾಬಾಯಿಯು ತನ್ನ ಜಿಹ್ವಾಯಂತ್ರಕ್ಕೆ ಕೀಲಿಯನ್ನು ಕೊಟ್ಟಳು.

ಸುಗುಣಾಬಾಯಿ:—"ಹ.ಡುಗೆಯರನ್ನು ಶಾಲೆಗೆ ಹಾಕಿ ಏನುಮಾಡು ವದದೆಯೋ ಏನೋ, ಯಾರಿಗೆ ಪರಿಚಯು? ಒಲೆಯ ಹತ್ತರ ಕುಳಿತು ಎರಡು ಅಪ್ಪಚ್ಚಿಯನ್ನು ಸುಡುವದಕ್ಕೆ ಕಲಿಸುವದೇ ಪವಿತ್ರವಾದ ಸ್ತ್ರೀಶಿಕ್ಷಣ ವಾಗಿರಲು, ಈಗಿನ ನೂತನ ಜನರು ಹುಡುಗಯರಿಗೆ ಇಂಗ್ರೇಜಿ ಕಲಿಸ ಲಿಕ್ಕೂ, ಗಾಯನ-ನರ್ತನಗಳನ್ನು ಮಾಡಲಿಕ್ಕೂ, ಹಚ್ಚುತ್ತಾರೆ. ಇವರು ಮೊದಲು ಮೊದಲು ಹೀಗೆ ಕಲಿಸಲಿಕ್ಕೂ ಹಿಂಜರಿಯುವದಿಲ್ಲ; ಕಡೆಗೆ ಕಡೆಗೆ ಅದರಿಂದಾದ ದುಷ್ಪರಿಣಾಮವನ್ನು ಕಂಡು, ಪಶ್ಚಾತ್ತಾಪಬಡಲಿಕ್ಕೂ ಹಿಂಜ ರಿಯುವದಿಲ್ಲ!"

ವಿಶ್ವನಾಥರಾಯನ ಹೆಂಡತಿ ರಾಧಾಬಾಯಿಯೆಂದರೆ ಪ್ರತಿಕಲಿಕಂ, ಅವತಾರವು! ವಿಶ್ವನಾಥರಾಯನ ದುರ್ಗುಣಗಳನ್ನೆಲ್ಲ ಅವನ ಸದಾ ಸಹವಾ ಸಿಯಾದ ರಾಧಾಬಾಯಿಯು ಅಕ್ಷರಶಃ ಕಲಿತುಕೊಂಡಿದ್ದಳು. ಅವಳು ಸತ್ತೆ ಶ್ರೀಮಂತಿಕೆ, ಮಾನ, ಅಭಿಮಾನ ಮೊದಲಾದವುಗಳಿಂದ ಪೂರ್ಣ ಅಜ್ಞಾ ನಿಯೂ, ವಿವೇಕಶೂನ್ಯಳೂ ಆಗಿದ್ದಳು. ಮಾಧವರಾಯನಿಗೆ ವೇಣುವನ್ನು ಕೊಡುವದಕ್ಕೆ ತಿರಸ್ಕರಿಸಿದ್ದದರಿಂದ ರಾಧಾಬಾಯಿಯು ವೇಣುವಿನ ಜನನೀ ಜನಕರನ್ನು ಯಾವಾಗಲೂ ನಿಂದಿಸುತ್ತಿದ್ದಳು; ಆದರೆ ಇಂಥ ಸಮಯದಲ್ಲಿ ಕೇಳುವದೇನು? ಅವಳ ಜಿಹ್ವಾಯಂತ್ರವು ಒಂದೇ ಸವನೆ 'ಗರಗರ' ತಿರು ಗುತ್ತಿತ್ತು; ಅವಳ ಹೃದಯಭೇದಕ ನಿಂದೋಕ್ತಿಗಳನ್ನು ವರ್ಣಿಸಲಸಾಧ್ಯವೇ ಸರಿ. ರಾಧಾಬಾಯಿಯು ಸ್ವಲ್ಪ ಹೊತ್ತು ಸುಮ್ಮನೆ ಕುಳಿತು ನಂತರ ಅಂದ ದ್ದೇನಂದರೆ:—"ರಮಾಬಾಯಿ, ನಮ್ಮ ಮಾಧವರಾಯನಿಗೆ ವೇಣುವನ್ನು

ಕೊಡಿರೆಂದು ಕೇಳಿದ್ದಕ್ಕೆ ಇಂದಿರಾಬಾಯಿಯು "ರೋಗಿಯು ನೊರಪಾಲನ್ನು ತಿರಸ್ಕರಿಸುವಂತೆ" ಸೊಟ್ಟ ಮುಸಡಿಯನ್ನು ಮಾಡಿದಳು. ಯಾರು ಮಾಡುವದಾದರೂ ಏನು? "ಮಾಡಿದವರು ಉಣ್ಣುವರು ಮಣಿಯಂಥ ಕಡಬು" ಎಂಬಂತೆ ಮಾಡಿದವರೇ ದುಃಖದಿಂದ ನರಳುವವರು! ನಾವೇನು ನರಳಬೇಕಾಗಿದೆ!! ಇಷ್ಟು ವಯಸ್ಸಾಗುವತನಕ ವೇಣುವನ್ನು ಲಗ್ನಮಾಡದೆ ಇರುವದು ಯೋಗ್ಯವೇ? ಹತ್ತು ವರ್ಷವಾಯಿತೆಂದರೆ ಹುಡುಗೆಯರಿಗೆ ಎಲ್ಲ ಸಂಸಾರವು ತಿಳಿಯುತ್ತಿರುವಾಗ, ವೇಣುವಾದರೂ ಏನು ಮಾಡುವಳು? ಅವಳ ಕಡೆಗೆ ಏನೂ ತಪ್ಪಿಲ್ಲ. ಅವಳು ಓಡಿಹೋದದ್ದು ಯಥಾಸ್ತುತ್ಯವಾಗಿದೆ."

ಬಂದ ಸ್ತ್ರೀಯರ ನಾಲಿಗೆಗಳು ಒಂದೇ ಸಮನೆ ಕೆಲಸಮಾಡುತ್ತಿದ್ದವು. ಇಂದಿರಾಬಾಯಿಯು ಒಬ್ಬರ ಸಂಗಡಲೂ ಒಂದಕ್ಷರವನ್ನು ಉಚ್ಚರಿಸಲಿಲ್ಲ. ದುಃಖದಿಂದ ಜರ್ಝರಳಾದ ಅವರನ್ನುವ ಮಾತುಗಳನ್ನು ಕಷ್ಟದಿಂದ ತಾಳಿಕೊಳ್ಳುತ್ತಿದ್ದಳು; ಅದರಲ್ಲಂತೂ ಬಂದ ಸ್ತ್ರೀಯರು ವೇಣುವಿನ ಸಂಬಂಧವಾಗಿ ಆಡುತ್ತಿದ್ದ ಅಸಹ್ಯವಾದ ಮಾತುಗಳನ್ನು ಕೇಳಿ, ಇಂದಿರಾಬಾಯಿಯ ಹೊಟ್ಟೆಯು ಬರಬರ ಉರಿಯಿತು. ವಾಚಕರೇ, ಆ ದೀನಳು ಏನು ಮಾಡ್ಯಾಳು! ಅವಳಿಗೆ ಸಹಿಸಿಕೊಳ್ಳದಿದ್ದರೆ ನಿರ್ವಾಹವಿದ್ದಿಲ್ಲ. ವೇಣುವು ಒಂದು ಗಳಿಗೆ ಮರೆಯಾದಳೆಂದರೆ ವೇಣುವಿಗೆ ಹೇಗೋ ಹೇಗೋ ಆಗುತ್ತಿತ್ತು; ಆದರೆ ಈಗ ಒಂದು ಗಳಿಗೆಯಲ್ಲ, ಒಂದು ದಿವಸವಲ್ಲ, ಎರಡು ದಿವಸವಲ್ಲ, ಮೂರು ದಿವಸವಲ್ಲ, ನಾಲ್ಕನೆಯ ದಿವಸದ ಮನೆಗೆ ಬಂದರೂ ಇಂದಿರಾಬಾಯಿಗೆ ವೇಣುವಿನ ದರ್ಶನವಾಗದ್ದರಿಂದ, ಅವಳು ದುಃಖಸಾಗರದಲ್ಲಿ ಮುಳುಗಿದ್ದಳು. ವೇಣುವಿನ ನಡುವಳಿಕೆಯ ಸಲುವಾಗಿ ಅವಳಿಗೆ ಪೂರ್ಣ ಪರೀಕ್ಷೆಯವಿತ್ತು. ವೇಣುವು ದುರ್ಮಾರ್ಗವನ್ನು ಎಂದೂ ತುಳಿಯುವವಳಲ್ಲವೆಂಬುವದು ಅವಳಿಗೆ ಪೂರ್ಣ ಮನವರಿಕೆಯಿತ್ತು. ಅವಳು ಶ್ರೀಪಾದನ ಸವಿಮಾತುಗಳನ್ನು ಕೇಳುತ್ತ ಹಾಗೂ ಹೀಗೂ ದಿವಸ ಕಳೆಯುತ್ತಿದ್ದಳು; ಆದರೆ ಈ ಮಹಾಸಭೆಯು ನೆರೆದಂದಿನಿಂದ ಅವಳ ದುಃಖಕ್ಕೆ ಮೇರೆಯಿಲ್ಲವಾಗಿತ್ತು. ಅವಳು ಈ ಮಹಾಸಭೆಯ ವಿಸರ್ಜನವನ್ನೇ ನಿರುಕಿಸುತ್ತಿದ್ದಳು. ಅವರಿಗೆ ಹೋಗಿರಿ ಎಂದು ಹೇಳಲಿಕ್ಕೆ ಅವಳಿಗೆ ಧೈರ್ಯವಿದ್ದಿಲ್ಲ. ನೆರೆಯ ಯಾವತ್ತೂ

ಸ್ತ್ರೀಯರು ಯಥೇಚ್ಛವಾಗಿ ವಾಕ್ಸುಖದಿಂದ ತೃಪ್ತರಾದ ಮೇಲೆ ಹೊರಟು ಹೋದರು. ಬಂದ ಸ್ತ್ರೀಯರಲ್ಲಿ ಒಬ್ಬಳಾದರೂ ಇಂದಿರಾಬಾಯಿಯನ್ನು ಸವಿಮಾತುಗಳಿಂದ ಸಮಾಧಾನ ಮಾಡಿದ್ದಾದರೆ ಅವಳಿಗೆ ಶಪಥ! ಎರಡನೆ ಯವರ ದುಃಖರೂಪವಾದ ಬೆಂಕಿಯನ್ನು ಸಮಾಧಾನ ವಚನರೂಪವಾದ ನೀರಿನಿಂದ ಶಾಂತಮಾಡದೆ, ಯಾವ ರೀತಿಯಿಂದಾದರೂ ಮತ್ತಿಷ್ಟು ಆ ದುಃ ಖಾಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವವರೇ ಈ ಸಮಾಜದಲ್ಲಿ ಬಹಳ !! ನಮ್ಮ ಆರ್ಯ-ಸಮಾಜದಲ್ಲಿ ಇಂಥ ಸಮಾಜಕಂಟಕರೇ ವಿಶೇಷವಾಗಿರುವ ದರಿಂದ ನಮ್ಮೆಲ್ಲರಿಗೆ ನಮ್ಮ ಸಂಸಾರವು ಕಷ್ಟಪ್ರದವಾಗಿ ಕಾಣಿಸುತ್ತದೆ. ಈ ಸಮಾಜಕಂಟಕರು ಯಾವದೊಂದು ಪಟ್ಟಣದಲ್ಲಿಯಾಗಲಿ, ಹಳ್ಳಿಯಲ್ಲಿ ಯಾಗಲಿ ಇರುತ್ತಾರಂತಲ್ಲ. ಇಂಥವರು ಪ್ರತಿಯೊಂದು ಕುಟುಂಬದಲ್ಲಿ ಯೂ ಇರುತ್ತಾರೆ. ಕ್ಷಣಕ್ಷಣಕ್ಕೆ ಅವರು ತಮ್ಮ ಕಾರ್ಯಸಾಧನೆಗಾಗಿ ಭಗೀರಥ ಪ್ರಯತ್ನವನ್ನು ಮಾಡುತ್ತಿರುತ್ತಾರೆ. ಅವರು ದುಃಖದ ಸಮುದ್ರ ವನ್ನೂ, ಆಪತ್ತಿನ ಪರ್ವತವನ್ನೂ ಸಿದ್ಧಮಾಡಿಟ್ಟಿರುತ್ತಾರೆ.

---

## ೭ನೆಯ ಪ್ರಕರಣ—ಪುಷ್ಪ.



ಮಧ್ಯರಾತ್ರಿ. ಜಹಾಗೀರದಾರ ಸಾಹೇಬರ ಮನೆಯ ಜನರೆಲ್ಲರು ನಿದ್ರೆಯಿಂದ ಪರವಶರಾಗಿದ್ದರು; ಆದರೆ ಮನೆಯ ಉಪ್ಪರಿಗೆಯ ಮೇಲಿನ ಕೋಣೆಯಲ್ಲಿ ದೀವಿಗೆಯು ಉರಿಯುತ್ತಿದ್ದು, ಒಂದು ಭವ್ಯಪಲ್ಲಂಗದ ಮೇಲೆ ತರುಣ-ತರುಣಿಯರಿಬ್ಬರು ಏನೋ ಮಾತಾಡುತ್ತ ಕುಳಿತಿದ್ದರು. ಇಂಥ ರಾತ್ರಿಯಲ್ಲಿ ಅಲ್ಲಿ ಏನೇನು ನಡೆದದೆಂಬುವದನ್ನು ವಾಚಕರಿಗೆ ನಿದರ್ಶನ ಮಾಡಿಕೊಡಬೇಕಾಗಿದೆ.

ಜಹಾಗೀರದಾರ ಸಾಹೇಬರಿಗೆ ಧೋಂಡೀರಾಜನೆಂಬ ಹೆಸರಿನ ಒಬ್ಬ ನೇಒಬ್ಬ ಮನುತೆಯ ಮಗನು. ಅವನೇ ಪಲಂಗದ ಮೇಲೆ ಕುಳಿತ ತರು ಣನು; ತರುಣನ ಹತ್ತರ ಕುಳಿತ ತರುಣಿಯು ಅವನ ಹೆಂಡತಿಯು. ಅವಳ ಹೆಸರು ಯಮುನೆ. ಅವಳು ತನ್ನ ಪತಿಯ ಹತ್ತರ ವಿನಯದಿಂದ ಕುಳಿತು

ಕೊಂಡಿದ್ದಳು. ಯಮುನೆಯು ನಿರ್ಮಲಾಂತಃಕರುಣಳೂ, ಸುಂದರಳೂ, ಸುಶಿಕ್ಷಿತಳೂ, ಸುಚಾರಿತ್ರಳೂ ಆಗಿದ್ದಳು. ಅವಳನ್ನು ಸರಿಗಟ್ಟುವ ಸ್ತ್ರೀಯರು ಒಬ್ಬರೂ ಇದ್ದಿಲ್ಲ. ಅವಳು ವಿಶ್ವನಾಥರಾಯನ ಮನೆಯಲ್ಲಿ ಗೃಹಲಕ್ಷ್ಮಿಯಂತೆ ಪ್ರಶಾಂತಳಾಗಿದ್ದರೂ, ಬಹಳ ದುರ್ದೈವಿಯಾಗಿದ್ದಳು. ಸ್ತ್ರೀಯರಿಗೆ ಪತಿಸುಖವೇ ಸುಖವು; ಸ್ತ್ರೀಯರಿಗೆ ಪತಿಯೇ ಅಲಂಕಾರವು; ಸ್ತ್ರೀಯರಿಗೆ ಪತಿಯೇ ದೇವರು. ಹೀಗೆ ಜಗತ್ತಿನಲ್ಲಿ ಸ್ತ್ರೀಯರಿಗೆ ಪತಿಯೇ ಸುಖದಾತನಿರುವಾಗ, ಯಮುನೆಗೆ ಪತಿಯಿಂದ ತಿಲಾಂಶವಾದರೂ ಸುಖವಿದ್ದಿಲ್ಲ. ಅವಳು ಪತಿಯು ಹೆಸರಿನಂತೆ ಕಲ್ಲಿಗಿಂತಲೂ ಕಠಿಣ ಮನಸ್ಸಿನವನಿದ್ದನು. ಧೋಂಡೀರಾಜನು ಅತ್ಯಂತ ದುರ್ವರ್ತನಿಯೂ, ಅವಿವೇಕಿಯೂ, ಮೂರ್ಖನೂ, ದುಷ್ಟನೂ ಆಗಿದ್ದನು. ಅವನ ಪ್ರತಿಯೊಂದು ಕೆಲಸಗಳು ನೀಚ ಮತ್ತು ನಿಂದ್ಯವಾಗಿದ್ದವು; ಆದರೂ ಅವನು ದೊಡ್ಡವರ ಮಗನಾದ್ದರಿಂದ, ಅವನ ವಿರುದ್ಧವಾಗಿ ಯಾರಿಗೆ ಏನೂ ಅನ್ನಲಿಕ್ಕೆ ಮಾರ್ಗವಿದ್ದಿಲ್ಲ. ತಿರುಗಿ ಸರ್ವಜನರು ಅವನಿಗೆ ರಾವಸಾಹೇಬ ರಾವಸಾಹೇಬ ಎಂದು ಕರೆಯುತ್ತಿದ್ದರು. ರಾವಸಾಹೇಬರು ದೂರದೃಷ್ಟಿಶೂನ್ಯರಿದ್ದು, ಅವರ ಜ್ಞಾನವು ಕವಡಿಗಿಂತಲೂ ಹೆಚ್ಚಿನ ಬೆಲೆಯುಳ್ಳದ್ದಿದ್ದಿಲ್ಲ. ಸಭ್ಯತೆ, ಪವಿತ್ರತೆ, ನೀತಿಮುಂತಾದ ಸದ್ಗುಣಗಳ ಪರಿಚಯವೇ ಅವರಿಗೆ ಇದ್ದಿಲ್ಲ. ರಾವಸಾಹೇಬರು ತಮ್ಮಂಥ ದುರಾಚರಣೆಯ ಮನುಷ್ಯರಿಗೆ ಒಳ್ಳೇ ಬೇಕಾಗಿದ್ದರು.

ಧೋಂಡೀರಾಜನಿಗೆ ವ್ಯವಹಾರಕ್ಕೆ ಬೇಕಾದಷ್ಟು ವಿದ್ಯೆಗಲಿಸಬೇಕೆಂಬ ಸದುದ್ದೇಶದಿಂದ ವಿಶ್ವನಾಥರಾಯನು ಅವನನ್ನು ಮುಂಬಯಿಯಲ್ಲಿ ಇಟ್ಟಿದ್ದನು; ಆದರೆ ಧೋಂಡೀರಾಜನು ಅಲ್ಲಿ ನಿಜವಾದ ವಿದ್ಯಾಸಂಪಾದನಮಾಡದೆ ಬೇರೊಂದು ವಿಲಕ್ಷಣವಾದ ವಿದ್ಯೆಯನ್ನೇ ಸಂಪಾದಿಸಿದನು. ಎಂದು ಹೋಗಬೇಕೆಂದು ಮನಸ್ಸಾಗುತ್ತಿತ್ತೋ, ಅಂದು ಶಾಲೆಗೆ ಹೋಗಬೇಕು, ಮಿಕ್ಕ ದಿವಸಗಳನ್ನೆಲ್ಲ ಚಂದವಾದ ಸ್ಥಳಗಳನ್ನು ನೋಡುವದರಲ್ಲಿಯೂ, ಮನಬಂದತ್ತ ತಿರುಗಾಡುವದರಲ್ಲಿಯೂ, ತನ್ನಂಥ ದೌರ್ಜನ್ಯ ಸ್ವಭಾವದ ಮಿತ್ರರೊಂದಿಗೆ ಆಟಗಳನ್ನಾಡುವದರಲ್ಲಿಯೂ, ಕಳೆಯುತ್ತಿದ್ದನು. ಅವನು ಎಂದೋ ಒಂದು ದಿವಸ ಶಾಲೆಗೆ ಹೋದರೂ, ಆ ದಿವಸವನ್ನೆಲ್ಲ ಆಟದಲ್ಲಿಯೇ ಕಳೆಯುತ್ತಿದ್ದನು. ಬರೇ ನಾಟಕವನ್ನು ನೋಡುವದೂ, ತರತರದ ಫಲಾ

ಹಾರಗಳನ್ನು ಮಾಡುವದೂ ಇವೇ ಧೋಂಡೀರಾಜನ ಪವಿತ್ರವಾದ ಉದ್ಯೋಗಗಳಾಗಿದ್ದವು. ಧೋಂಡೀರಾಜನಿಗೆ ಚಿಕ್ಕಂದಿನಿಂದ ಬತ್ತೀ ಸೇದುವ ಚಟವಿತ್ತು; ಆದರೆ ರಾವಸಾಹೇಬರು ಮುಂಬಯಿಗೆ ಬಂದಕೂಡಲೆ ಆ ಯಃಕಶ್ಚಿತ ವ್ಯಸನವನ್ನು ತಿರಸ್ಕರಿಸಿ, ಶ್ರಮದ ಪರಿಹಾರಾರ್ಥವೆಂದು ಸ್ವಲ್ಪ ಸ್ವಲ್ಪ ಸುರಾಪಾನ ಮಾಡಲಾರಂಭಿಸಿದರು. ಈ ಸುಧಾರಣೆಯ ಸಂಗಡ ರಾವಸಾಹೇಬರ ಪೋಷಾಕಿನಲ್ಲಿಯೂ ಹೆಚ್ಚು ಕಡಿಮೆಯಾಯಿತು.

ತಲೆಯ ಕೂದಲುಗಳು ಉದ್ದವಾಗುವದಕ್ಕಾಗಿಯೂ, ಮಿಂಚುಕಾಣುವದಕ್ಕಾಗಿಯೂ, ಮೃದುವಾಗುವದಕ್ಕಾಗಿಯೂ ಧೋಂಡೀರಾಜನು ತಲೆಗೆ ಯಾವಾಗಲೂ ಸುವಾಸಿಕವಾದ ಎಣ್ಣೆಯನ್ನು ಹಚ್ಚುತ್ತಿದ್ದನು; ತನ್ನ ಎಲ್ಲ ವೈಭವಕ್ಕೆ ಒಪ್ಪುವ ಇಪ್ಪತ್ತು-ಇಪ್ಪತ್ತೈದು ರೂಪಾಯಿಯ ಜರಿಯ ಟೊಪ್ಪಿಗೆಯನ್ನು ತಲೆಗೆ ಹಾಕಿಕೊಳ್ಳುತ್ತಿದ್ದನು; ಕಣ್ಣಿನ ತಂಪಿಗೆಂದು ಚಾಳೀಸು (ಉಪನೇತ್ರ) ಕಣ್ಣುಗಳಮೇಲೆ ಮಿನುಕುತ್ತಿತ್ತು; ಯುರೋಪದಲ್ಲಿ ಹೊಸ ಹೊಸ ಬಟ್ಟೆಗಳು ಸ್ಥಾಪಿತವಾಗುವದೊಂದೇ ತಡ, ಆ ಬಟ್ಟೆಗಳು ಧೋಂಡೀರಾಜನ ಮೈಮೇಲೆ ಝುಳುಪುತ್ತಿರಬೇಕು; ಧೋಂಡೀರಾಜನ ದಿವಾಣಖಾನೆಯು ತರತರದ ಬೂಟು, ಜೋಡು, ಛತ್ರಿ, ರುಮಾಲ, ಅಂಗಿ, ಟೊಪ್ಪಿಗೆ ಮೊದಲಾದವುಗಳ ಪ್ರದರ್ಶನ ಶಾಲೆಯಾಗಿತ್ತು; ಮೇಲು ಕಿಸೆಯಲ್ಲಿ ಅಮೌಲವಾದ ಗಡಿಯಾಳವಿದ್ದು, ಸುವರ್ಣದ ಸರಪಳಿಯಿಂದ ಚಿತ್ತಾಕರ್ಷಕವಾಗಿತ್ತು; ಕೈಬೆರಳುಗಳಲ್ಲಿ ನಾಲ್ಕೈದು ವಜ್ರದ ಉಂಗುರಗಳು ಥಳಥಳಿಸುತ್ತಿದ್ದವು. ಈಪ್ರಕಾರ ನಾಲ್ಕೈದು ವರ್ಷ ವಿದ್ಯಾರ್ಜನೆ ಮಾಡಿದ ಮೇಲೆ ಧೋಂಡೀರಾಜನು ಹೆಚ್ಚು ಕಲಿಯುವ ಅವಶ್ಯವಿಲ್ಲೆಂದು ನೆನಿಸಿ, ಅವಂತೀಪುರಕ್ಕೆ ಬಂದನು.

ಧೋಂಡೀರಾಜನ ಇಂಗ್ಲಿಷಭಾಷಾ ಜ್ಞಾನವು ಹೆಸರಿಗೆ ಮಾತ್ರ ಆದಂತಾಗಿತ್ತು; ಆದರೂ ತಾನು ಒಳ್ಳೇ ಇಂಗ್ಲಿಷಭಾಷೆಯಲ್ಲಿ ಮುಂದುವರಿದಿರುವೆನೆಂದು ಕೂಗುತ್ತಿದ್ದನು. ಮನೆಯಲ್ಲಿಯ ಆಳುಮಕ್ಕಳಿಗೆ ಧೋಂಡೀರಾಜನ ಕಡೆಯಿಂದ ನಿಂದ್ಯೋಕ್ತಿಗಳ ಲಾಭವು ಇಂಗ್ರೇಜೀ ಬಾಷೆಯಲ್ಲಿಯೇ ಶಿಗುತ್ತಿತ್ತು. ಒಮ್ಮೊಮ್ಮೆ ತಾಯಿ ತಂದೆಗಳಿಗಾದರೂ ಆ ನಿಂದ್ಯೋಕ್ತಿಗಳ ಲಾಭವು ಇಂಗ್ರೇಜೀ ಭಾಷೆಯಲ್ಲಿಯೇ ದೊರೆಯುತ್ತಿತ್ತು; ಆದರೆ ಆಸಂಬಂ

ಥವಾಗಿ ಮೂಢರಾದ ಅವನ ತಾಯಿ ತಂದೆಗಳಿಗೆ ಕೋಪೋದ್ರೇಕವಾಗದೆ, ಸಾಭಿಮಾನಾಶ್ಚರ್ಯವಾಗುತ್ತಿತ್ತು. ನಮ್ಮ ಮನೆತನದಲ್ಲಿ ಧೋಂಡೀರಾಜನೊಬ್ಬನು ವಿದ್ಯಾಸಂಪನ್ನನಾದನೆಂದೂ, ಅವನ ಬುದ್ಧಿಚಾತುರ್ಯಗಳಿಗೆ ನೆಲೆಯಿಲ್ಲವೆಂದೂ ಅವನ ತಾಯಿತಂದೆಗಳು ಪ್ರತಿಯೊಬ್ಬರ ಮುಂದೆ ಅವನ ಗುಣಾನುವಾದ ಮಾಡುತ್ತಿದ್ದರು. ಧೋಂಡೀರಾಜನು ಕಾರಣಪರತ್ವದಿಂದ ಆಳು-ಹೋಳುಗಳಿಗೂ, ಚಾಕರ-ನೌಕರರಿಗೂ ಚಬಕದಿಂದ ಹೊಡೆಯುವದರಲ್ಲಿಯೂ ಹಿಂದುಮುಂದು ನೋಡುತ್ತಿದ್ದಿಲ್ಲ. ಗ್ರಾಮದಲ್ಲಿಯ ನೀಚ ಜನರು ಯಾವಾಗಲೂ ತಮ್ಮ ಸವಿಮಾತುಗಳಿಂದ ಕಡ್ಡಿಯ ಗಿಡದ ಮೇಲೆ ಏರಿಸಿ ಕುಳ್ಳಿರಿಸಿ, ಧೋಂಡೀರಾಜನನ್ನು ತೃಪ್ತಿಗೊಳಿಸುತ್ತಿದ್ದರು. ಧೋಂಡೀರಾಜನು ಯಾವಾಗಲೂ ಆ ಜನರಕೂಡ ಆತ್ಮಶ್ಲಾಘನೆಯ ಮಾತುಗಳನ್ನು ಆಡುತ್ತ ಕುಳಿತುಕೊಳ್ಳುತ್ತಿದ್ದನು: ಆ ಗ್ರಂಥದಲ್ಲಿ ಹಾಗೆ ಬರೆದದೆ, ಈ ಗ್ರಂಥದಲ್ಲಿ ಹೀಗೆ ಬರೆದದೆ. ಹೀಗೆ ಏನಾದರೂ ಸುಳ್ಳುಸುಟ್ಟು ಹೇಳಿ ಆ ಮಡ್ಡಜನರನ್ನು ಆಶ್ಚರ್ಯಗೊಳಿಸುತ್ತಿದ್ದನು. ಸ್ತ್ರೀಶಿಕ್ಷಣ, ಸ್ತ್ರೀಸ್ವಾತಂತ್ರ ಈ ವಿಷಯವಾಗಿ ಯಥಾಯೋಗ್ಯವಾಗುವಂತೆ ಹೇಳುವ ಶಕ್ತಿಯಿಲ್ಲದಿದ್ದರೂ, ಮಿತಿಮೀರಿ ವಾದವಿವಾದ ಮಾಡುತ್ತಿದ್ದನು. ಮತ್ತು ವೇದಾಂತ ವಿಷಯದಲ್ಲಿಯಂತೂ ಸುಪ್ರಸಿದ್ಧ ತತ್ವಜ್ಞಾನಿಯಂತೆ ತರ್ಕವಿತರ್ಕ ಮಾಡುತ್ತಿದ್ದನು. ಎಷ್ಟೋ ಜನ ವಿದ್ವಾಂಸರು ಧೋಂಡೀರಾಜನನ್ನು ಅಂತರಂಗದಲ್ಲಿ ತಿರಸ್ಕರಿಸುತ್ತಿದ್ದರೂ, ಬಹಿರಂಗದಲ್ಲಿ ಸ್ತುತಿಸುತ್ತಿದ್ದರು. ಮಗನ ವಿದ್ಯಾತಿಶಯವನ್ನು ಕಂಡು ವಿಶ್ವನಾಥ ರಾಧಾಬಾಯಿಯರಿಗೆ ಆಗಿನ ಕಾಲದಲ್ಲಿ ಆಗುತ್ತಿದ್ದ ಆನಂದವನ್ನು ವರ್ಣಿಸಲಿಕ್ಕೆ ನಮ್ಮಿಂದಾಗದು.

ಯಮುನೆಯ ಪ್ರಕೃತಿಧರ್ಮಕ್ಕೂ, ಧೋಂಡೀರಾಜನ ಪ್ರಕೃತಿಧರ್ಮಕ್ಕೂ ಬಹಳೇ ಹೆಚ್ಚುಕಡಿಮೆಯಿತ್ತು. ಅವಳ ತಂದೆಯು ಬಡವನಿದ್ದರೂ, ಅವಳಿಗೆ ಚನ್ನಾಗಿ ಓದುಬರಹವನ್ನು ಕಲಿಸಿದ್ದನು. ಅವಳ ತಾಯಿಯು ಅವಳಿಗೆ ಸರ್ವಪ್ರಾಪಂಚಿಕ ವಿಷಯವನ್ನು ಸಂಪೂರ್ಣವಾಗಿ ಕಲಿಸಿದ್ದಳು. ಯಮುನೆಯ ತಾಯಿತಂದೆಗಳು ಯಮುನೆಯನ್ನು ಕುಲೀನನೂ, ಸುಶಿಕ್ಷಣವಂತನೂ, ಸುಗುಣನೂ, ಸುರೂಪಿಯೂ ಆದ ವರನುಳ್ಳ, ಸುಶೀಲರಾದ ಅತ್ತೆಮಾವಂದಿರುಳ್ಳ ಮನೆಯನ್ನು ನೋಡಿ ಕೊಡಬೇಕೆಂದಾಲೋಚಿಸಿ, ಆ

ಬಗ್ಗೆ ವಿಶ್ವಪ್ರಯತ್ನ ಮಾಡುತ್ತಿದ್ದರು. ತಮ್ಮ ಮಗಳು ಧೋಂಡೀರಾಜನಿಗೆ ಹೆಂಡತಿಯಾದಾಳೆಂದೂ, ರಾಧಾಬಾಯಿ ವಿಶ್ವನಾಥರಾಯರಿಗೆ ಸೊಸೆಯಾದಾಳೆಂದೂ ಅವರು ಕನಸು ಮನಸ್ಸಿನಲ್ಲಿಯಾದರೂ ನೆನಿಸಿದ್ದಿಲ್ಲ. ಆದರೆ ವಿಶ್ವನಾಥರಾಯನು ತನ್ನ ಅಧಿಕಾರ ಸಾಮರ್ಥ್ಯದಿಂದ ದರಿದ್ರರಾದ ಯಮುನೆಯ ತಾಯಿತಂದೆಗಳನ್ನು ಹಡರಿಸಿ, ಸುಕೋಮಲೆಯಾದ ಯಮುನೆಯನ್ನು ವಜ್ರಕಠೋರ ಹೃದಯನಾದ ತನ್ನ ಮಗನಿಗೆ ಲಗ್ನಮಾಡಿದ್ದನು. ವಿಶ್ವನಾಥರಾಯನೆಂದರೆ ಅವಂತೀಪುರದ ಪ್ರತಿರಾಜನು. ಅವನ ಬಳಿಯಲ್ಲಿ ವಿಪುಲವಾಗಿ ಧನವಿತ್ತು. ಗಾಡಿ, ಕುದುರೆ, ನವಕರ, ಚಾಕರರಿಗೇನೂ ಕೊರತೆಯಿದ್ದಿಲ್ಲ. ಇಂಥ ಶ್ರೀಮಂತ ಕುಟುಂಬದಲ್ಲಿ ಯಮುನೆಗೆ ಯಾತಕ್ಕೇನೂ ಕೊರತೆಯಿದ್ದಿಲ್ಲ. ಅವಳಿಗೆ ಬೇಕುಬೇಕಾದಂಥ ವಸ್ತ್ರಾಲಂಕಾರಗಳಿದ್ದವು; ಅವಳ ಸೇವಾ-ಶುಶ್ರೂಷೆಗೆ ಅನೇಕ ದಾಸದಾಸಿಯರಿದ್ದರು; ಅವಳು ಹೊರಗೆ ಹೋಗುವದಾದರೆ ಕುದುರೆಯ ಗಾಡಿಯು ಸಿದ್ಧವಾಗಿರುತ್ತಿತ್ತು; ಆದರೆ ಸ್ತ್ರೀಯರ ನಿಜವಾದ ವೈಭವವು ಮತ್ತಿಷ್ಟು ತಾಪದಾಯಕವಾಗಿತ್ತು. ಸ್ತ್ರೀಯರ ಮುಖ್ಯ ದೈವತವೂ, ಮುಖ್ಯ ವೈಭವವೂ, ಮುಖ್ಯ ವಸ್ತ್ರವೂ, ಮುಖ್ಯಾಲಂಕಾರವೂ ಯಾವ ಪತಿಯೋ, ಆ ಪತಿಯ ವಿಷಯವಾಗಿ ಅವಳಿಗೆ ಬಹಳ ದುಃಖವಿತ್ತು. ಇದೂ ಇರಲಿ. ಪತಿಸುಖವಿಲ್ಲದಿದ್ದರೂ ಆ ಪ್ರಾಣಿಗೆ ಅತ್ತೆಮಾವಂದಿರ ಪ್ರೀತಿಯಾದರೂ ಇತ್ತೆ! ಅದೂ ಇದ್ದಿಲ್ಲ. ಅತ್ತೆ-ಮಾವರಿಗೆ ಸೊಸಿಯೆಂದರೆ ಕಾಲೊಳಗಿನ ಕಸವು! ಪತಿಯು ಕುನೀತಿಸಂಪನ್ನನಾಗಿದ್ದರೂ ಆ ಸಾಧ್ವೀಮಣಿಯಾದ ಯಮುನೆಯು ಅವನ ಭಜನೆಯಲ್ಲಿ ಲೀನವಾಗಿರುತ್ತಿದ್ದಳು. ತನ್ನಿಂದ ಸಾಧ್ಯವಾದಷ್ಟು ಅತ್ತೆ-ಮಾವ-ಗಂಡರ ಸೇವೆಯಲ್ಲಿ ಯಾವಾಗಲೂ ನಿರತಳಾಗಿರುತ್ತಿದ್ದಳು. ಪತಿಯ ಸುಖದ ವಿಷಯವಾಗಿ ಅವಳಿಗೆ ಬಹಳ ಕಳಕಳತೆಯಿತ್ತು, ಪತಿಯ ಹಿತಕ್ಕಾಗಿ ಅವಳು ಯಾವಾಗಲೂ ದಕ್ಷಳಾಗಿರುತ್ತಿದ್ದಳು; ಪತಿಯ ಸಲುವಾಗಿ ಅವಳು ಬಹಳ ಕಷ್ಟವನ್ನು ಸೋಸುತ್ತಿದ್ದಳು; ಆದರೆ ಆ ಸ್ತ್ರೀ ಋಣವನ್ನು ತೀರಿಸಲಿಕ್ಕೆ ಧೋಂಡೀರಾಜನು ತಿಲಾಂಶವಾದರೂ ಇಚ್ಛಿಸುತ್ತಿದ್ದಿಲ್ಲ. ತಾನು ಆ ಸ್ತ್ರೀಋಣಿಯಾಗಿರುವೆನೆಂಬ ವಿಚಾರವೇ ಅವನ ಮನಸ್ಸಿಗೆ ಎಂದೂ ಸ್ಪರ್ಶಿಸುತ್ತಿದ್ದಿಲ್ಲ. ಯಮುನೆಯನ್ನು ನೋಡಿದ ಕೂಡಲೆ ಅವನ ಶರೀರವೆಲ್ಲ ಕ್ರೋಧಾಗ್ನಿಯಿಂದ ಬೆಂದು

ಹೋಗುತ್ತಿತ್ತು. ಬಹಳ ಹೇಳುವದೇನು? ಅವಳು ಅವನ ಎಷ್ಟೋ ಜನ್ಮಾಂತರದ ಶತ್ರುವೇ ಆಗಿದ್ದಳು! ಎಂದೋ ಎಂದು ಘೋಂಡೀರಾಜನು ಯಮುನೆಯ ಶಯ್ಯಾಗೃಹಕ್ಕೆ ಹೋದರೂ, ಅಂದು ಬರೇ ಅವಳನ್ನು ಬಯ್ಯುವದೂ ಹೊಡೆಯುವದೂ ಮಾಡುತ್ತಿದ್ದನು. ಪತಿಯಿಂದ ಇವಳಿಗೆ ಯಾವಾಗಲೂ ತ್ರಾಸು ಆಗುತ್ತಿತ್ತು; ಆದರೂ ಪತಿಯು ಪ್ರತ್ಯಹೀ ತನ್ನ ಕಡೆಗೆ ಬಂದು ತನಗೆ ದರ್ಶನ ಸುಖವನ್ನಾದರೂ ಮಾಡಬೇಕಾಗಿ ಆ ಸಾಧ್ವಿಯು ಹಂಬಲಿಸುತ್ತಿದ್ದಳು. ಪತಿಯು ನಿಜವಾದ ಸುಖಕ್ಕೆ ಅಪಾತ್ರಳಾದ ಯಮುನೆಯು, ಪತಿಯ ಸಂಬಂಧವಾದ ಮರ್ಮವೇದನೆಯಿಂದ ಇಡೀರಾತ್ರಿ ನಿದ್ರೆಮಾಡುತ್ತಿದ್ದಿಲ್ಲ ಆ ಸಂಬಂಧವಾಗಿ ಕುರಕುರಿಮಾಡಲಿಕ್ಕೆ ಅವಳಿಗೆ ಮೊದಲು ಧೈರ್ಯವಿದ್ದಿಲ್ಲ. ಅತ್ತೆಮಾವರಿಗಾದರೂ ತನ್ನ ಮನೋಗತವನ್ನು ಸೂಚಿಸಿ, ತನ್ನ ಗುಪ್ತವೇದನೆಯನ್ನು ನಾಶಮಾಡಿಕೊಳ್ಳುವ ಆಶೆಯೂ ಅವಳಿಗಿದ್ದಿಲ್ಲ. ವಿಶ್ವನಾಥರಾಯನು ನೀಚ ಮನಸ್ಸಿನವನಾದ್ದರಿಂದ, ಯಾರೂ ಯಮುನೆಯ ಸಲುವಾಗಿ ಮಾತಾಡಲನುವಿದ್ದಿಲ್ಲ. ಒಂದುವೇಳೆ ಯಾರಾದರೂ ಧೈರ್ಯದಿಂದ ಯಮುನೆಯ ಸ್ಥಿತಿಗತಿಯ ಬಗ್ಗೆ ವಿಚಾರಿಸಿದರೆ, ವಿಶ್ವನಾಥರಾಯನು ಸ್ವಾರ್ಥವಾಗಿ ಅನ್ನುತ್ತಿದ್ದನೇನಂದರೆ:—"ಇನ್ನೂ ಘೋಂಡೀರಾಜನಿಗೆ ಹುಡುಗತನವದೆ. ಕ್ರಮಾನುಸಾರ ಬುದ್ಧಿ ಬಂದೇ ಬರುತ್ತದೆ." ಎಂಬ ಮರುಕದ ಮಾತುಗಳನ್ನಾಡುತ್ತಿದ್ದನು.

ಯಮುನೆಯು ಲಾವಣ್ಯಸಂಪನ್ನಳೂ, ಯೌವನಸಂಪನ್ನಳೂ ಇದ್ದಳು. ಅವಳಿಗೆ ಈಗೀಗ ಹದಿನಾರುವರ್ಷ ತುಂಬಿ ಹದಿನೇಳನೆಯ ವರ್ಷದಲ್ಲಿ ಬಿದ್ದಿತ್ತು; ಅವಳ ಮೈಬಣ್ಣವು ಗೌರವರ್ಣದ್ದು, ಅವಳ ನಿಲುವಿಕೆಯು ಮಧ್ಯಮತರದ್ದು, ಅವಳ ಕಣ್ಣುಗಳು ದೊಡ್ಡವು, ಅವಳ ಟೊಂಕವು ನೀರಪಾದದ್ದು, ಅವಳ ಮುಖಕಾಂತಿಯು ತುಂಬಿದ ಹುಣ್ಣಿಮೆಯ ಚಂದ್ರನ ಕಾಂತಿಯನ್ನು ತಿರಸ್ಕರಿಸುತ್ತಿತ್ತು. ಒಟ್ಟಿಗೆ ಅವಳ ಅವಯವಗಳ ಮಾಟವು ಬಹಳ ವರ್ಣನಪರವಾಗಿತ್ತು, ಬ್ರಹ್ಮನು ಅವಳ ಅವಯವದಲ್ಲಿ ತಿಲಾಂಶವಾದರೂ ಕುಂದು ಇಟ್ಟದ್ದಿಲ್ಲ. ಬ್ರಹ್ಮನು ತನ್ನ ಅಗಾಧ ಕೌಶಲ್ಯದ ಪ್ರಮಾಣವು ಎಷ್ಟದೆಯೆಂಬುವದನ್ನು ಮಾನವ ಪ್ರಾಣಿಗೆ ತೋರಿಸುವದಕ್ಕೋಸ್ಕರ ಆ ಯಮುನೆಯಲ್ಲಿ ಅಂಥ ಸುಂದರತ್ವವನ್ನು ಇಟ್ಟದ್ದನೋ ಏನೋ! ಘೋಂ

ಡೀರಾಜನ ಹೊರ್ತು ಮತ್ತ್ಯಾವ ಪುರುಷನಿಗಾದರೂ ಯಮುನೆಯು ಪತ್ನಿಯಾಗಿದ್ದರೆ, ಆ ಪುರುಷನು ಆನಂದಸಾಗರದಲ್ಲಿ ಮುಳುಗುತ್ತಿದ್ದನು; ಅಲ್ಲದೆ ಅಲಭ್ಯಳಾದ ಸುಂದರ ಶಿರೋಮಣಿ ಯಮುನೆಯನ್ನು ತನ್ನ ಅರ್ಧಾಂಗಿಯನ್ನಾಗಿ ಮಾಡಿದ್ದಕ್ಕೆ ಈಶ್ವರನನ್ನು ಏಕೋಭಾವದಿಂದ ಭಜಿಸುತ್ತಿದ್ದನು. ಆದರೆ ಆ ಧೋಂಡೀರಾಜನು ಯಮುನೆಯ ಲಾಭಕ್ಕಾಗಿ ಸ್ವಲ್ಪವಾದರೂ ಅಭಿಮಾನಪಡುತ್ತಿದ್ದಿಲ್ಲ; ಆ ಅಮೂಲ್ಯ ದೇಣಿಗೆಯ ಸಲುವಾಗಿ ಈಶ್ವರನ ಉಪಕಾರವನ್ನು ಮಾನಿಸಲಿಕ್ಕೆ ಎಂದೂ ಸಿದ್ಧನಿರುತ್ತಿದ್ದಿಲ್ಲ. ವಾಚಕರೇ, ಧೋಂಡೀರಾಜನಿಗೆ ದೋಷವನ್ನು ಹೊರಿಸುವದು ಯುಕ್ತವಲ್ಲ; ಈಶ್ವರನು ಕಲ್ಲಿಗೆ ಮೃದುವಾದ ಹೂವನ್ನು ಜೋಡಿಸಿದ್ದರಿಂದಲೂ, ಕಬ್ಬಿಣದ ಉಂಗುರದಲ್ಲಿ ವಜ್ರದ ಹರಳನ್ನು ಕೆಚ್ಚಿದ್ದರಿಂದಲೂ, ವಿಷಾಮೃತಗಳನ್ನು ಒಂದು ಸ್ಥಳದಲ್ಲಿ ಇರುವಂತೆ ಮಾಡಿದ್ದರಿಂದಲೂ, ಜಾಲಿಯ ಗಿಡಕ್ಕೆ ಮಲ್ಲಿಗೆಯ ಬಳ್ಳಿಯನ್ನು ಹಬ್ಬಿಸಿದ್ದರಿಂದಲೂ, ಈಶ್ವರನಿಗೇ ದೋಷವನ್ನು ಕೊಡುವದು ಯುಕ್ತವೆಂದು ನೀವು ಸಮರ್ಥಿಸಬಹುದು. ಚಾಣಾಕ್ಷ ವಾಚಕರೇ, ವಿಚಾರಿಸಿರಿ. ಈಶ್ವರನಾದರೂ ಏನು ಮಾಡುವನು? ಸೃಷ್ಟಿ-ಸ್ಥಿತಿ-ಸಂಹಾರಗಳಿಗೆ ಮಾತ್ರ ಈಶ್ವರನು ಕಾರಣೀಭೂತನು! ಮನುಷ್ಯನ ದುರಾಚಾರ ಸದಾಚಾರಗಳಿಗೆ ಈಶ್ವರನೇನು ಕಾರಣೀಭೂತನು? ಮನುಷ್ಯನ ದುರಾಚಾರಕ್ಕಾಗಿ ತತ್ಕಾಲದಲ್ಲಿಯೇ ಶಿಕ್ಷಿಸಲು ಆತನಿಗೆ ಅಧಿಕಾರವೆಲ್ಲಿಯದು? ಇದೆಲ್ಲ ದುಷ್ಟಸಮಾಜದ ಆಟವು! ಇದೆಲ್ಲ ಸತ್ತಾವಂತರ ಲೀಲೆಯು!! ಇದೆಲ್ಲ ನಮ್ಮ ಸಮಾಜಕಂಟಕರ ಪುನೀತೋದ್ಯೋಗವು!!! ಇಂಥ ಸಮಾಜಕಂಟಕರಿಗೇ ಈ ಸಂಬಂಧವಾಗಿ ದೋಷವನ್ನು ಹೊರಿಸುವದು ಸ್ತುತ್ಯವಾದದ್ದು! ಇಡೀ ಮನೆಯಲ್ಲಿ ಯಮುನೆಯ ಕೂಡ ಯಾರೂ ಪ್ರೀತಿಯಿಂದ ಮಾತಾಡುತ್ತಿದ್ದಿಲ್ಲ; ಚಲೋ ರೀತಿಯಿಂದ ಯಾರೂ ಅವಳನ್ನು ನಡೆಸಿಕೊಳ್ಳುತ್ತಿದ್ದಿಲ್ಲ; ಮನೆಯ ಜನರೆಲ್ಲ ಯಾವಾಗಲೂ ಅವಳನ್ನು ಉರಿಸಿಕೊಂಡು ತಿನ್ನುತ್ತಿದ್ದರು; ಯಾವಾಗಲೂ ಅವಳನ್ನು ಬಗೆದು ಮಾತಾಡುತ್ತಿದ್ದರು; ಮನೆಯ ಜನರಿಂದ ಮೇಲೆಮೇಲೆ ಅವಳಿಗೆ ನಿಂದ್ಯರೂಪವಾದ ಪ್ರಸಾದವು ಸಿಕ್ಕೇಸಿಗುತ್ತಿತು. ಆ ನಿಂದ್ಯರೂಪವಾದ ಪ್ರಸಾದವನ್ನು ಕುಡಿದು ಕುಡಿದು ಅವಳು "ಲಡ್ಡು ಕಟ್ಟಿಗೆಯಂತೆ" ಸತ್ವಹೀನೆಯಾಗಿದ್ದಳು. ಪ್ರಿಯವಾಚಕರೇ, ಯಮುನೆಯ

ಅಪ್ರತಿಮ ಸೌಂದರ್ಯದ, ಪವಿತ್ರಸರಳತೆಯ, ಸ್ವಾಭಾವಿಕ ವಿನಯದ, ಪತಿಭಕ್ತಿಯ ಲಾಭಗಳನ್ನು ಭೋಗಿಸಬೇಕೆಂದು ಬ್ರಹ್ಮನು ಧೋಂಡೀರಾಜನ ಹಣೆಯಲ್ಲಿ ಬರೆದಿಲ್ಲವೆಂದ್ಯೇ ಅನ್ನಲಿಕ್ಕೆ ಬೇಕು. “ ಆಕಾಶದಲ್ಲಿ ಪ್ರಕಾಶಿಸುವಂಥ ಚಂದ್ರನು ಮೇಘದ ಮರೆಯಲ್ಲಿ ಬಂದರೆ ಹೇಗೆ ತೇಜೋಹೀನನಾಗುವನೋ, ಹಾಗೆ ಭೂಮಿಯಲ್ಲಿ ಪ್ರಕಾಶಿಸುವಂಥ ಯಮುನೆಯು ಮೇಘರೂಪವಾದ ವಿಶ್ವನಾಥರಾಯನ ಮನೆಯನ್ನು ಹೊಕ್ಕಂದಿನಿಂದ ತೇಜೋವಿಹೀನೆಯಾಗಿದ್ದಳು. ಅವಳಿಗೆ ಎಂದೂ ಸಮಾಧಾನವಿದ್ದಿಲ್ಲ, ಅವಳಿಗೆ ಎಂದೂ ಸಂತೋಷವಿದ್ದಿಲ್ಲ, ಅವಳಿಗೆ ಎಂದೂ ಸುಖವಿದ್ದಿಲ್ಲ, ಬಹಳ ಹೇಳುವದೇನು! ವಾಯು-ಸೂರ್ಯ-ಚಂದ್ರರಿಗೆ ಅರಕ್ಷಣವಾದರೂ ವಿಶ್ರಾಂತಿಯು ಇದ್ದರೂ ಇದ್ದೀತು; ಆದರೆ ಆ ದೀನ ಯಮುನೆಗೆ ಒಂದರಕ್ಷಣವೇಕೆ? ಒಂದು ನೂರಾಂಶ ಅರಕ್ಷಣವಾದರೂ ಅವಳಿಗೆ ವಿಶ್ರಾಂತಿಯಿದ್ದಿಲ್ಲ. ಅವಳ ಸರ್ವ ವೇಳೆಯು ಕೂಲಿಕಾರರಂತೆ ಮನೆಯ ಕೆಲಸವನ್ನು ಮಾಡುವದರಲ್ಲಿಯೂ, ಚಿಂತಾ-ದುಃಖಗಳಲ್ಲಿಯೂ ನಾಶವಾಗುತ್ತಿತ್ತು.

ಈ ದಿವಸವು ಯಮುನೆಯ ಪರಮಸೌಭಾಗ್ಯದ ದಿವಸವು. ಇಂದು ಅವಳ ಆನಂದಕ್ಕೆ ಮೇರೆಯಿದ್ದಿಲ್ಲ. ಇಂದು ಧೋಂಡೀರಾಜನು ಅವಳ ಶಯ್ಯಾಗೃಹಕ್ಕೆ ಬಂದು, ದರ್ಶನಲಾಭಾಮೃತವನ್ನು ಪಾನಮಾಡಿಸಿದ್ದರಿಂದ, ಅವಳ ಸುಖ-ಸಮಾಧಾನಗಳಿಗೆ ಸೀಮೆಯಿದ್ದಿಲ್ಲ; ಆದರೂ ಅವಳಿಗೆ ಪತಿಯ ಉದ್ಧಂಡ ಸ್ವಭಾವದ ಪರಿಚಯವಿದ್ದದರಿಂದ, ಸ್ವಲ್ಪ ಭೀತಿಯಾಗಿತ್ತು. ಧೋಂಡೀರಾಜನು ಬಂದವನೇ ಪಲಂಗದ ಮೇಲೆ ಕುಳಿತನು. ಪಲಂಗದ ಮೇಲೆ ಕುಳಿತಿದ್ದ ಯಮುನೆಯು ಧೋಂಡೀರಾಜನ ಭೀಕರವಾದ ಮೋರೆಯನ್ನು ನೋಡಿದ ಕೂಡಲೆ ಗಾಬರಿಯಾಗಿ, ವಿನಯದಿಂದ ಪಲಂಗದಿಂದ ಎದ್ದು, ಒತ್ತಟ್ಟಿಗೆ ಸರಿದು ನಿಂತಳು. ಅವಳು ಅಂಜಜುತ್ತ ತನ್ನ ನಿತ್ಯದ ಮೋಹಕಸ್ವರದಿಂದ:—“ ಇಂದು ಈ ದಾಸಿಯ ಮೇಲೆ ಅನುಗ್ರಹವಾಯಿತು. ” ಎಂದಂದಳು.

ಧೋಂಡೀರಾಜ—( ತನ್ನ ಗಡಿಯಾರದ ಸರಪಳಿಯನ್ನು ತಿರುವುತ್ತ ) “ ಇದರಲ್ಲಿ ಅನುಗ್ರಹವು ಯಾವದು? ನನಗೆ ಬರಬೇಕೆಂಬ ಇಚ್ಛೆಯಾದದರಿಂದ ನಾನು ಬಂದೆನು. ”

ಯಮುನೆ:—“ಈ ಹತಭಾಗ್ಯಳ ಮೇಲೆ ಇಷ್ಟು ದಯೆಯು ಹುಟ್ಟಿದ ಮೇಲೆ ಮತ್ತೇನು ಬೇಕು? ಅದರಲ್ಲಿ ಏನೊಂದು ಕೆಲಸವಿಲ್ಲದೆ ನನ್ನ ಸಲುವಾಗಿಯೇ ಬಂದಿದ್ದರಂತೂ ನನ್ನ ಭಾಗ್ಯವೃಕ್ಷವು ಫಲಿಸಿತೆಂದನ್ನಲಿಕ್ಕೆ ಬೇಕು. ದೇವರು ನನ್ನ ಪ್ರಾರ್ಥನೆಗೆ ಒಲಿದನೆಂದನ್ನಲಿಕ್ಕೆ ಅಡ್ಡಿಯಿಲ್ಲ?”

ಯಮುನೆಯು ಶುದ್ಧವಾದ ಅಂತಃಕರಣದಿಂದ ಮಾತಾಡುತ್ತಿದ್ದಳು. ಪತಿಯು ಆಗಮನದಿಂದ ಅವಳಿಗೆ ಒಳ್ಳೇ ಸಮಾಧಾನವಾಗಿತ್ತು. ಆ ವೇಳೆಯಲ್ಲಿ ಅವಳ ಮುಖಕಮಲವು ಬಹು ರಮಣೀಯವಾಗಿ ಕಾಣಿಸುತ್ತಿತ್ತು. ಆದರೆ ಅವಳ ಸುಚಿಹ್ನದ ಬೆಲೆಯು ಧೋಂಡೀರಾಜನಿಗೇನು ಪರೀಕ್ಷೆಯು? ಅವನು ಜಾತ್ಯಾ ಅರಸಿಕನೂ, ಮೂರ್ಖನೂ, ದುಷ್ಟಟಾಂಧನೂ ಆಗಿದ್ದನು! ಅಂದಮೇಲೆ ಅವನಿಗೆ ಆ ವಿನಯಸಂಪನ್ನ ತರುಣಿಯ ಯೋಗ್ಯತೆಯು ಏನು ಗೊತ್ತು? ಮಲಗುವ ಮನೆಯಲ್ಲಿದ್ದ ಆ ಪಲಂಗವು ಯಮುನೆಯ ಸಹವಾಸದಿಂದ ಆನಂದಪ್ರದರ್ಶಿತ ಮಾಡುತ್ತಿತ್ತು. ಆ ಶಯ್ಯಾಗೃಹದಲ್ಲಿದ್ದ ಪ್ರತಿಯೊಂದು ವಸ್ತುವು ಯಮುನೆಯು ಸ್ಪರ್ಶದಿಂದ ಪವಿತ್ರವಾದಂತೆ ಕಾಣುತ್ತಿದ್ದವು. ಆ ಶಯ್ಯಾಗೃಹದಲ್ಲಿದ್ದ ಹವೆಯು ಯಮುನೆಯ ದೇಹಸಂಪರ್ಕದಿಂದ ಧನ್ಯವಾಗಿರುವೆನೆಂದು ನಟಿಸುತ್ತಿತ್ತು. ಇಂಥ ಮಂಗಲಾಂಗಿಯಾದ ಆ ಯಮುನೆಯ ಸಹವಾಸವು ಧೋಂಡೀರಾಜನಿಗೆ ಆಜನ್ಮಪರ್ಯಂತರ ಇರುವವಾಗಿ ಈಶ್ವರನು ಸಂಕೇತಿಸಿದ್ದನು; ಆದರೆ ಆ ನರಾಧಮನಿಗೆ ಅವಳ ಬೆಲೆಯೇ ಗೊತ್ತಾಗಲಿಲ್ಲ. ಯಮುನೆಯ ಪ್ರಾಕೃತಿಕ ಸುಂದರವಾದ ಭಾಷಣವಕಡೆಗೆ ಅವನ ಲಕ್ಷ್ಯವೇ ಇದ್ದಿಲ್ಲ. ಅವನ ತಲೆಯಲ್ಲಿ ಏನೋ ಬೇರೊಂದು ವಿಚಿತ್ರವಾದ ಕಲ್ಪನೆಯಿತ್ತು. ಅವನು ಏನೋ ಬೇರೊಂದು ಹೇತುವಿನಿಂದ ಯಮುನೆಯ ಕಡೆಗೆ ಬಂದಿದ್ದನು. ಯಮುನೆಯ ಮಧುರ ವಚನಗಳು ಮುಗಿದ ಮೇಲೆ ಅವನು ಉದ್ದಾಮ ವೃತ್ತಿಯಿಂದ ಯಮುನೆಯನ್ನು ಕುರಿತು ಅಂದದ್ದೇನಂದರೆ:—“ನನಗೆ ಬೇಗನೆ ಹೋಗುವ ಕೆಲಸವದೆ. ಈಗಲೇ ಹೋದನೆಂದರೆ ತೀರಿತು.”

ಕೂಡಲೆ ಯಮುನೆಯ ಪ್ರಫುಲ್ಲಿತವಾದ ಮುಖಕಮಲವು ನೀರಸವಾಯಿತು; ಕಂಠವು ಗದ್ಗದಿತವಾಯಿತು; ಅವಳಿಗಾದ ಆನಂದವೆಲ್ಲ ಸ್ವಪ್ನದಲ್ಲಿ ಯಾದಂತಾಯಿತು.

ಯಮುನೆ:—(ಸ್ಮಿತಸ್ಮರದಿಂದ) "ಮೊದಲೇ ಬರುವದಿಲ್ಲ. ಎಂದೋ ಒಮ್ಮೆ ಬಂದರೆ ಹೋಗಲಿಕ್ಕೆ ಕುದುರೆಯನ್ನು ಕುಣಿಸುತ್ತೀರಿ; ಆತುರದ ಕೆಲಸವನ್ನು ಮೈಮೇಲೆ ಹಾಕಿಕೊಂಡೇ ಬಂದಿರುತ್ತೀರಿ. ಸ್ವಲ್ಪ ವೇಳೆಯವರೆಗೆ ಕುಳಿತದ್ದಾದರೆ ಈ ಹತಭಾಗ್ಯಳ ಮೇಲೆ ಮಹದುಪಕಾರವನ್ನು ಮಾಡಿದಂತಾಗುತ್ತದೆ."

ಧೋಂಡೀರಾಜ:—"ನಿನ್ನ ಸಂಗಡ ಹರಟೆಯನ್ನು ಹೊಡೆಯುತ್ತ ಕುಳಿತುಕೊಳ್ಳಲಿಕ್ಕೆ ನನಗೆ ಅವಕಾಶವೆಲ್ಲಿಯದು?"

ಮೇಲಿನ ತಿರಸ್ಕಾರದ ಮಾತು ಕೇಳಿ ಯಮುನೆಯ ಕಣ್ತುಂಬಾ ನೀರು ಬಂದವು.

ಯಮುನೆ:—"ನನ್ನ ಪ್ರಾಕ್ತನ ಕರ್ಮ! ತಾವು ಉದ್ಯೋಗಿಗಳು; ತಮ್ಮ ಬೆನ್ನ ಹಿಂದೇ ತಮ್ಮ ಕೆಲಸವಿರುವದು; ಅದರಲ್ಲಿಯೇ ದಯಮಾಡಿ ಸ್ವಲ್ಪ ವೇಳೆಯನ್ನು ತೆಗೆದು, ಆ ವೇಳೆಯಲ್ಲಿ ಈ ತಮ್ಮ ಪವಿತ್ರ ಚರಣದ ಧೂಳಿಯನ್ನು ಈ ಕೋಣೆಗೆ ಸಂಪರ್ಕಿಸಿದ್ದಾದರೆ, ನನ್ನ ಸುಖಸಮಾಧಾನಗಳಿಗೆ ನೆಲೆಯಿಲ್ಲ. ಅದರಿಂದ ಉದ್ಯೋಗಿಗಳಾದ ನಿಮಗೂ ಸ್ವಲ್ಪ ವಿಶ್ರಾಂತಿಯು ಸಿಗುತ್ತದೆ. ನನಗೆ ತೋರುವದೇನಂದರೆ:—"ಸ್ವಾರಿಯು ತಪ್ಪಿ ಇತ್ತ ಬಂದಂತೆ ಕಾಣುತ್ತದೆ. ಇಲ್ಲಿಗೆ ಬಂದ ಮೇಲೆ ಈ ಕೋಣೆಯು ಯಮುನೆಯ ಕೋಣೆಯೆಂದು ಗೊತ್ತಾಗಿ ಏನಾದರೂ ನಿಮಿತ್ತ ಮಾಡಿ ಹೋಗುವ ಪ್ರಸ್ತಾವನೆಯನ್ನು ಮಾಡಿದಂತೆ ಕಾಣುತ್ತದೆ. ಈ ಹತಭಾಗಿನಿಯ ಸರ್ವಾಯುಷ್ಯವು ಇಂಥ ಕಷ್ಟಪ್ರದ ಸ್ಥಿತಿಯಲ್ಲಿಯೇ ಹೋಗಬೇಕೆಂದು ಈಶ್ವರೀ ಸಂಕೇತವಿರಲು ಯಾರು ಮಾಡುವದಾದರೂ ಏನು? ನಾನು ತಮ್ಮ ವೈವಾಹಿಕ ಸ್ತ್ರೀಯಳೆಂಬುವದು ತಮ್ಮ ಲಕ್ಷ್ಯದಲ್ಲಿಯೇ ಇರುವದಿಲ್ಲ. ನನ್ನ ಕಡೆಯಿಂದ ಸೇವಾ ಶುಶ್ರೂಷಗಳನ್ನು ಮಾಡಿಸಿಕೊಳ್ಳಬೇಕೆಂದು ತಮ್ಮ ಅಪೇಕ್ಷೆ ಇರುವದಿಲ್ಲ. ಇಷ್ಟು ನಿರ್ದಯ ಮಾಡಲಿಕ್ಕೆ ನನ್ನಿಂದ ಒದಗಿದ ಅಪರಾಧವಾದರೂ ಯಾವದು?"

ಕೋಮಲಾಂತಃಕರಣದ ಯಮುನೆಯು ಇಷ್ಟು ಶಬ್ದವನ್ನು ಬಳ್ಳೇ ಕಷ್ಟದಿಂದ-ಬಳ್ಳೇ ಧೈರ್ಯದಿಂದ ಮಾತಾಡಿದಳು. ಅವಳಿಗೆ ಧೋಂಡೀರಾಜನ ಕ್ರೂರ ಸ್ವಭಾವದ ಬಗ್ಗೆ ಸಂಪೂರ್ಣವಾಗಿ ಪರಿಚಯವಿತ್ತು. ಆದರೆ

ಅಂತಃಕರಣದಲ್ಲಿ ಭರದಿಂದ ಹೊರಡುತ್ತಿದ್ದ ದುಃಖಪ್ರವಾಹವನ್ನು ಎಷ್ಟು ದಿವಸದ ವರೆಗೆ ಅವಳು ಮನೋನಿಗ್ರಹವೆಂಬ ಒಡ್ಡಿನಿಂದ ನಿಲ್ಲಿಸುವಳು? ಅವಳು ಇಂದು ಧೋಂಡೀರಾಜನಿಗೆ ಧೈರ್ಯದಿಂದ ತನ್ನ ಮನಸಿನ ಚಿಂತಾಗ್ನಿಯನ್ನು ತೋರಿಸಿದಳು; ಆದರೆ ಆ ಪಾಷಾಣಹೃದಯದ ಧೋಂಡೀರಾಜನಿಗೆ ಆ ಸಂಬಂಧವಾಗಿ ಏನೂ ತಿಳಿಯಲಿಲ್ಲ.

ಧೋಂಡಿರಾಜ:—"ನಾನು ಇಲ್ಲಿಗೆ ನಿನ್ನ ರೋದನವನ್ನು ಕೇಳಲಿಕ್ಕೆ ಬಂದಿಲ್ಲ. ನಾನು ಎಂದು ಬಂದರೂ ಬರೇ ಅಳುವದೇ ಅಳುವದು! ಹೀಗೆ ಮಾಡಲಿಕ್ಕೆ ನಿನಗೇನು 'ಜಡ' ಆಗುತ್ತದೋ ಏನೋ."

ಯಮುನೆ:—(ಕಣ್ಣೀರು ಸುರಿಸುತ್ತ) "ನಾನು ಯಾಕೆ ಅಳುತ್ತಿರಬಹುದು? ಅಳಲಿಕ್ಕೆ ಹಚ್ಚುವವರೂ ತಾವೇ, ಯಾಕೆ ಅಳುತ್ತೀ ಎಂದು ಕೇಳುವವರೂ ತಾವೇ. ಈ ಪ್ರಶ್ನೆಗೆ ನಾನು ಉತ್ತರವನ್ನಾದರೂ ಏನು ಕೊಡಲಿ!"

ಧೋಂಡೀರಾಜ:—(ತಿರಸ್ಕಾರದಿಂದ) "ದುಷ್ಟಳೇ, ನಾನು ಈ ನಿನ್ನ ಕೋಣೆಯಲ್ಲಿ ನಿನ್ನ ದಾಸಾನುದಾಸನಾಗಿ ಅರವತ್ತು ಗಳಿಗೆ ನಿನ್ನಲ್ಲಿ ಬಿದ್ದಿರಬೇಕಾಗಿ ನಿನ್ನ ಅಪೇಕ್ಷೆಯೇನು? ಹಾಗೆ ನಡೆದರೆ ಜನರು ನನಗೆ ಹೆಸರು ಇಡಲಿಕ್ಕಿಲ್ಲೆ? ನಾನು ಅನೇಕ ಶಾಸ್ತ್ರ-ಪುರಾಣಗಳನ್ನು ಓದಿರುತ್ತೇನೆ; ಆದರೆ ಒಂದು ಗ್ರಂಥದಲ್ಲಿಯಾದರೂ ಪುರುಷನು ಯಾವಾಗಲೂ ಸ್ತ್ರೀ ಸಹವಾಸದಲ್ಲಿಯೇ ಇರಬೇಕೆಂದು ಹೇಳಿರುವದಿಲ್ಲ."

ಈ ಅಪೂರ್ವ ಶಾಸ್ತ್ರಾಧಾರವನ್ನು ಕಂಡು ಯಮುನೆಗೆ ಬಹಳ ಆಶ್ಚರ್ಯವೆನಿಸಿತು.

ಯಮುನೆ:—"ಶಾಸ್ತ್ರವೇ ಹಾಗೆ ಹೇಳಿದ ಮೇಲೆ ಸ್ತ್ರೀಯರ ಜನ್ಮವೇ ಕೆಟ್ಟದ್ದಾಯಿತು! ಸ್ತ್ರೀಜನ್ಮವನ್ನು ತಾಳುವವರು ಕಡುಪಾಪಿಗಳೆಂದು ಹೇಳಬೇಕಾಯಿತು!! ತಮ್ಮ ಶಾಸ್ತ್ರದಲ್ಲಿ ಸ್ತ್ರೀಯು ಯಾವಾಗಲೂ ಕಷ್ಟದಲ್ಲಿ ಇರಬೇಕೆಂದೂ, ಅವಳಿಗೆ ಪತಿಸಂಪರ್ಕವಾಗಬಾರದೆಂದೂ, ಅವಳು ಪತಿಸೇವೆಯನ್ನು ಮಾಡಬಾರದೆಂದೂ ಹೇಳಿದ ಮೇಲೆ ಆ ಶಾಸ್ತ್ರಾಧಾರದಂತೆ ನಡೆಯುವ ತಮ್ಮ ಕಡೆಗೆ ಯಾವ ತಪ್ಪೂ ಇರುವದಿಲ್ಲ!!!

ಧೋಂಡೀರಾಜ:—"ನಿನ್ನ ಹಣೇಬರಹ! ನಿನ್ನ ಹಣೆಯಲ್ಲಿ ಅಳುವ

ದೇ ಬರೆದಿರುವಾಗ ಶಾಸ್ತ್ರಗಳಾದರೂ ಏನು ಮಾಡುತ್ತವೆ? ಮತ್ತು ನಾನಾದರೂ ಏನು ಮಾಡುತ್ತೇನೆ."

ಯಮುನೆ:—(ಕಣ್ಣೀರು ಸುರಿಸುತ್ತ) "ನಾನು ಅಳುವದಕ್ಕೆ ನನ್ನ ಹಣೆ ಲಿಖಿತದ ಹೊರ್ತು ಮತ್ತೇನೂ ಕಾರಣವಿಲ್ಲವೇ?

ಧೋಂಡಿರಾಜ:—(ಕೋಪದಿಂದ) "ಮೂರ್ಖಳೇ, ನಿನಗೆ ಇಲ್ಲಿ ನಾವೇನು ಕಲ್ಲುಗಾಣಕ್ಕೆ ಹಾಕಿ, ಮುಳ್ಳುಗಾಣಕ್ಕೆ ಹಾಕಿ ತಿರುವುತ್ತೇವೆ? ನಿನಗೆ ಇಲ್ಲಿ ಏನೇನು ಕಷ್ಟಗಳು ಒದಗಿರುತ್ತವೆ? ರೀತಿಯಂತೆ ನಿನಗೆಷ್ಟು ತ್ರಾಸು ಕೊಡಬೇಕೋ, ಅಷ್ಟು ತ್ರಾಸು ಕೊಡದಿರುವದು ನಮ್ಮ ಉಪಕಾರವೆಂದು ಭಾವಿಸು! ನಿನ್ನನ್ನು ಲಗ್ನವಾಗಬೇಕಾದರೆ ಸಾವಿರಾರು ರೂಪಾಯಿಗಳು ಖರ್ಚಾಗಿರುವವು. ಆದರೂ ನಿನ್ನ ಹುಟ್ಟಿದ ಮನೆಯಲ್ಲಿ ನಿನಗೆ ಎಷ್ಟು ದುಃಖವಿತ್ತೋ ಅಷ್ಟು ಸುಖವು ನಮ್ಮ ಮನೆಯಲ್ಲಿ ಇರುತ್ತದೆ. ಆ ನಿನ್ನ ದರಿದ್ರನಾದ ತಂದೆಯ ಮನೆಯಲ್ಲಿ ಹೊಟ್ಟೆತುಂಬಾ ಕೂಳು ಮೊದಲು ನಿನಗೆ ಸಿಗುತ್ತಿದ್ದಿಲ್ಲ. ಮನೆಯಲ್ಲಿ ಗುಬ್ಬಿಯು ತಿಂದೇನೆಂದರೆ ಒಂದು ಕಾಳು ಮೊದಲು ಸಿಗುವಂತಿಲ್ಲ. ಎಲ್ಲ ಮನೆಯಲ್ಲಿ ಹುಡುಕಿದರೆ ಒಂದು ಕವಡಿಯ ಬೆಲೆಯ ಜೀನಸು ದೊರೆಯಲಿಕ್ಕಿಲ್ಲ. ಹೀಗೆ ನಿನ್ನ ತಂದೆಯ ಸ್ಥಿತಿಯು. ನಿನ್ನ ದೈವವು ಒಳ್ಳೇದಾದ್ದರಿಂದ ನಿನಗೆ ಇಂಥ ಮನೆಯು ಸಿಕ್ಕಿತು. ನಿನ್ನ ದುಃಸ್ಥಿತಿಯನ್ನು ನೋಡಿಯೇ ನಾವು ನಿನ್ನನ್ನು ನಮ್ಮ ಪದರಿನಲ್ಲಿ ಹಾಕಿಕೊಂಡೆವು. ಆ ಬಗ್ಗೆ ನಿನಗೆ ಸ್ವಲ್ಪಾದರೂ ಎಚ್ಚರವಿಲ್ಲ. ಇಲ್ಲಿ ನಿನಗೆ ಉಣ್ಣು-ತಿನ್ನುವದಕ್ಕೆ ಮಿಷ್ಟಾನ್ನ-ಫಲಗಳೂ, ಉಡು-ತೊಡುವದಕ್ಕೆ ಚಿತ್ರವಿಚಿತ್ರವಾದ ಶೀರೆ ಕುಪ್ಪಸಗಳೂ, ಇಡುವದಕ್ಕೆ ಅಮೌಲ್ಯವಾದ ಅಲಂಕಾರಗಳೂ ಇರುತ್ತವೆ. ಇಷ್ಟು ನಿನಗೆ ವೈಭವವನ್ನು ಒದಗಿಸಿಕೊಟ್ಟಿರಲು, ನಿನ್ನ ಮುಖದ ಮೇಲೆ ಎಂದೂ ಕಳೆಯಿರುವದಿಲ್ಲ. ಯಾವಾಗ್ಗೇ ಬಂದರೂ ಅಳುವದೇ ಅಳುವದು. "ಮೂರ್ಖರ ಇರುವಿಕೆಯು ದುಃಖದ್ದೇ ಎಂದು ಆರ್ಯರು ಹೇಳಿರುವದು ಸುಳ್ಳಲ್ಲ." ಇಂಥವರಿಗೆ ಸುಖವು ಸಿಗುವ ಬಗೆಯಾದರೂ ಹೇಗೆ? ತಂದೆಯ ಮನೆಯಲ್ಲಿ ತಂಗಳ ರೊಟ್ಟಿಯನ್ನು ತಿಂದು, ಹರಪರಕ ಬಟ್ಟೆಯನ್ನು ಸುತ್ತಿಕೊಂಡು ಜೀವಿಸುತ್ತಿದ್ದ ನೀನು ಇಷ್ಟರಲ್ಲಿ ಅವನ್ನು ಮರೆತಿಯಾದರೂ ಹೇಗೆ!"

ಯಮುನೆಯು ಧೋಂಡೀರಾಜನ ವಾಕ್ಪ್ರಹಾರದಿಂದ ವಿಹ್ವಲಳಾ ದಳು. ತನ್ನ ಸಂಗಡ ತನ್ನ ತಂದೆಗೂ ನಿಂದ್ಯದ ಮಾತುಗಳನ್ನಾಡಿದ್ದರಿಂದ ಅವಳಿಗೆ ಬಹಳೇ ದುಃಖವೆನಿಸಿತು. ಅವಳ ಎರಡೂ ಕಣ್ಣುಗಳಿಂದ ಧಾರಾ ಳವಾಗಿ ಕಣ್ಣೀರಿನ ಹನಿಗಳು ಸುರಿಯಹತ್ತಿದವು, ಮೈಯಲ್ಲಿ ಬೆವರೊಡೆಯಿ ತು, ಅವಳ ದುಃಖವು ನಿಲ್ಲಲಾರದಾಯಿತು. ಆದರೆ ಆ ರಾಕ್ಷಸನ ಭೀತಿಯಿಂ ದ ಅವಳು ಗಟ್ಟಿಯಾಗಿ ಅಳುತ್ತಿದ್ದಿಲ್ಲ. ಅವಳ ಸ್ಥಿತಿಯನ್ನು ನೋಡಿ ಎಂಥ ಕಟಕನಿಗಾದರೂ ಕರುಣವು ಹುಟ್ಟುತ್ತಿತ್ತು; ಆದರೆ ಆ ಚಾಂಡಾಲನು ಸಂ ತಾಪದಿಂದ ಕೆಂಗಣ್ಣನ್ನು ಮಾಡಿ ಅಂದದ್ದೇನೆಂದರೆ:—"ಅಳು ಅಳು, ಹೀಗೆ ಯೇ ಅಳುತ್ತ ಕೂಡ್ರು. ನಾನು ಒಂದೆನೆಂದರೆ ಅಳಲಿಕ್ಕೆ ನಿನಗೆ ನಿನ್ನ ಮನೋದೇವತೆಯು ಪ್ರೇರಣೆ ಮಾಡುತ್ತಾಳೆ. ನಾನು ಇಲ್ಲಿಗೆ ಬರಬಾರ ದೆಂಬುವದೇ ನಿನ್ನ ಮನೋದೇವತೆಯ ಅಭೀಷ್ಟವು! ಇಕೋ ನಾನು ಹೊರಟೆನು."

ಹೀಗನ್ನುತ್ತ ಧೋಂಡೀರಾಜನು 'ಖಡ್‌ಖಡ್' ಬೂಟಿನ ಸಪ್ಪಳ ವನ್ನು ಮಾಡುತ್ತ ತನ್ನ ಕೋಣೆಗೆ ಹೊರಟು ಹೋದನು. ದೀನಳಾದ ಯಮು ನೆಯು ಮಾಡುವದೇನು? ಅವಳು ನಿರುಪಾಯಳಾಗಿ 'ಮುಳುಮುಳು' ಅಳುತ್ತ ಕುಳಿತಳು. ಧೋಂಡೀರಾಜನನ್ನು ಗಟ್ಟಿಯಾಗಿ ಹಿಡಿದು ಕುಳ್ಳಿರಿಸ ಬೇಕೆಂದು ಅವಳಿಗೆ ತೋರಿತು; ಆದರೆ ಅವಳಿಗೆ ಹಾಗೆ ಮಾಡಲಿಕ್ಕೆ ಧೈರ್ಯ ವಾಗಲಿಲ್ಲ. 'ನನ್ನದೇ ದುಷ್ಟಪ್ರಾರಬ್ಧ' ಎಂದೆನ್ನುತ್ತ ಅವಳು ತನ್ನ ಪ್ರಾ ಕ್ತನದ ವಿಷಯವಾಗಿ ವಿಚಾರ ಮಾಡುತ್ತ ಕುಳಿತಳು. ಧೋಂಡೀರಾಜನ ಮನಸ್ಸಿನಲ್ಲಿ ಯಮುನೆಯ ಕೋಣೆಯನ್ನು ಬಿಟ್ಟು ಹೋಗಬೇಕೆಂಬುವದಿ ದ್ದಿಲ್ಲ. ತಾನು ಹೊರಟು ಹೋಗುವ ಲಕ್ಷಣವನ್ನು ತೋರಿಸಿದರೆ, ಅದಕ್ಕೆ ಯಮುನೆಯು ಅಡ್ಡಿಮಾಡ್ಯಾಳೆಂದೂ, ಹಾಗೆ ಮಾಡಿದರೆ ತನ್ನ ಕಾರ್ಯಭಾ ಗವನ್ನು ಸಾಧಿಸಿಕೊಳ್ಳಲಿಕ್ಕೆ ಅನುವಾಗುವದೆಂದೂ ಅವನು ಆಲೋಚಿಸಿ ದ್ದನು; ಆದರೆ ಆ ರಾಕ್ಷಸರೂಪಿಯಾದ ಧೋಂಡೀರಾಜನನ್ನು ಪ್ರತಿಬಂಧಿಸುವ ಧೈರ್ಯವು ಮರ್ಯಾದಾ ಶೀಲಳಾದ ಯಮುನೆಯಿಂದಾಗಲಿಲ್ಲ. ಅದರಿಂದ ಧೋಂಡೀರಾಜನು ನಿರಾಶಾ ಸಂತಾಪಗಳಿಂದ ವ್ಯಗ್ರನಾಗಿ, ಸುರಾಪಾನವಮಾ ಡುವದಕ್ಕಾಗಿ ತನ್ನ ಕೋಣೆಯಲ್ಲಿ ಹೋದನು. ತನಗೆ ಬೇಕಾದಷ್ಟು ಸುರಾ

ಪಾನ ಮಾಡಿ ತಿರುಗಿ 'ಬಡ್‌ಬಡ್' ಬೂಟಿನ ಸಪ್ಪಳವನ್ನು ಮಾಡುತ್ತ ಯಮುನೆಯ ಕೋಣೆಗೆ ಬಂದನು. ಯಮುನೆಯು ಕಣ್ಣುಗಳಿಗೆ ಸೀರೆಯ ಸೆರಗನ್ನು ಹಚ್ಚಿ ಕಣ್ಣೀರು ಒರೆಸುತ್ತ ಕುಳಿತಿದ್ದಳು. ಅವಳು ಸ್ವಲ್ಪ ವಸ್ತ್ರವನ್ನು ಸರೆಮಾಡಿ ನೋಡುತ್ತಾಳೆ, ತನ್ನ ಪತಿಯ ಮೂರ್ತಿಯು ಮೊದಲಿಗಿಂತಲೂ ರೌದ್ರರೂಪ ಧಾರಣಮಾಡಿತ್ತು! ಆಕೋಮಲಾಂಗಿಯು ಆರಾಕ್ಷಸನನ್ನು ನೋಡುತ್ತಲೇ ಥರಥರ ಕಂಪಿಸಹತ್ತಿದಳು. ಧೋಂಡೀರಾಜನು ಒಳಗೆ ಬಂದವನೇ ಘೋರಸ್ವರದಿಂದ ಅಂದದ್ದೇನಂದರೆ:—"ಏ ಚಾಂಡಾಳಿಣೀ, ನೀನು ಇಂದು ಈಪರಿ ಅಳಲಿಕ್ಕೆ ನಿನಗೆ ಆದದ್ದಾದರೂ ಏನು? ನಾನು ಯಾವಾಗ್ಗೆ ಬಂದರೂ, ನನ್ನ ಎದುರಿಗೆ ಕತ್ತೆಯಂತೆ ಹೋ-ಹೋ-ಹೋ ಅನ್ನುತ್ತ ಅಳುತ್ತ ಕೂಡ್ರುವಿ. ನಾನು ಯಾಕೆ ಬರುತ್ತೇನೆಂಬುವದು ನಿನಗೆ ಸ್ವಲ್ಪಾದರೂ ಅರುವಿಲ್ಲ."

ಯಮುನೆ:—(ಭೀತಸ್ವರದಿಂದ) "ತಾವು ಯಾತಕ್ಕೆ ಬರುತ್ತೀರೆಂಬುವದು ತಾವು ಹೇಳಿದ ಹೊರ್ತು ನನಗೆ ತಿಳಿಯುವ ಬಗೆಯಾದರೂ ಹೇಗೆ? ನಾನು ತಮ್ಮ ದಾಸಳಿದ್ದು, ತಮ್ಮಾಜ್ಞೆಯನ್ನು ಪಾಲಿಸುವದಿಲ್ಲವೆಂದರೆ ಎಂದಾದರೂ ನಡೆದೀತೇ? ತಾವು ನನಗೆ ಯಾವದೊಂದು ಯೋಗ್ಯವಾದ ಕೆಲಸವನ್ನು ಹೇಳುವದೊಂದೇತಡ, ಅದನ್ನು ನಿಂತಕಾಲಮೇಲೆ ಮಾಡಿಬಿಡುತ್ತೇನೆ"

ಧೋಂಡೀರಾಜ:—(ಮೀಸೆಯನ್ನು ಹುರಿಮಾಡುತ್ತ) "ನೀನು ನನ್ನ ಆಜ್ಞೆಯನ್ನು ಎಷ್ಟರಮಟ್ಟಿಗೆ ಪಾಲಿಸುತ್ತೀಯೆಂಬುವದನ್ನು ನಾನು ಅನೇಕ ಸಾರೆ ಮನನ ಮಾಡಿಕೊಂಡಿರುತ್ತೇನೆ. ನಾನು ೩-೪ ದಿವಸಗಳಿಂದ ನಿನ್ನ ಹತ್ತರ ಒಂದು ಆಭರಣವನ್ನು ಬೇಡುತ್ತೇನೆ; ಆದರೆ ಅಸಂಬಂಧವಾಗಿ ನೀನು ಅನೇಕ ಪ್ರತಿಬಂಧದ ಕಾರಣಗಳನ್ನು ಹೇಳಿದಿ."

ಯಮುನೆಯು ಒಳ್ಳೇ ಇರುಕಿನಲ್ಲಿ ಸಿಕ್ಕಳು. ಏನು ಮಾಡಬೇಕೆಂಬುವದು ಅವಳಿಗೆ ತಿಳಿಯದೆ ಹೋಯಿತು. ಅವಳ ಹತ್ತರ ಇದ್ದ ಅಭರಣದ ಮೇಲೆ ಧೋಂಡೀರಾಜನ ಅಧಿಕಾರವಿದ್ದಿಲ್ಲ. ಆ ಅಲಂಕಾರದ ನಿಜವಾದ ಒಡೆತನವು ಆವಳ ಅತ್ತೆಮಾವರದಾಗಿತ್ತು. ಅತ್ತೆಮಾವರ ಕರಾಲ ಸ್ವಭಾವವು ಅವಳಿಗೆ ಪೂರ್ಣ ಪರಿಚಯವಿದ್ದದರಿಂದ, ಅವರ ಅಪ್ಪಣೆಯ ಹೊರ್ತು ಧೋಂಡೀರಾಜನಿಗೆ ಅಲಂಕಾರವನ್ನು ಕೊಡಲಿಕ್ಕೆ ಅವಳಿಗೆ ಧೈ

ರ್ಯವಿದ್ದಿಲ್ಲ. ಅಲಂಕಾರವನ್ನು ಕೊಡದಿದ್ದರೆ, ಪತಿರಾಜನಿಂದ ತನಗೆ ಯೋಗ್ಯಶಾಸನವಾಗುವದೆಂಡೂ, ಕೊಟ್ಟರೆ ಅದು ಅಪವ್ಯಯವಾಗುವದೆಂದೂ ಅವಳಿಗೆ ಪೂರ್ಣ ಮನವರಿಕೆಯಿತ್ತು.

ಯಮುನೆ:--(ಅಸ್ಪಷ್ಟವಾಗಿ) "ನಾನು ತಮಗೆ ಆಭರಣವನ್ನು ಕೊಡುವದಿಲ್ಲವೆಂದು ಯಾವಾಗ್ಗೆ ಅಂದಿರುವೆನು? ನಾನು ಯಾವಾಗಲೂ ಹೇಳುವದೇನಂದರೆ:— "ಅತ್ತೆಯವರನ್ನಾಗಲಿ, ಮಾವಂದಿರನ್ನಾಗಲಿ ವಿಚಾರಿಸಿರಿ. ಅವರ ಅಪ್ಪಣೆಯಾಗುವದೊಂದೇ ಅವಕಾಶವು; ನಿಮಗೆ ಬೇಕಾದ ಅಲಂಕಾರವನ್ನು ತಕ್ಕೊಂಡು ಹೋಗಿರಿ. ಅವರ ಅಪ್ಪಣೆಯಿಲ್ಲದೆ ಕೊಟ್ಟೆದ್ದಾದರೆ ನನಗೆ ಅವರು ಏನನ್ನಲಿಕ್ಕಿಲ್ಲ."

ಯಮುನೆಯ ಸಮರ್ಪಕೋತ್ತರವನ್ನು ಕೇಳಿ, ಧೋಂಡೀರಾಜನು ಸಂತಾಪದಿಂದ ಕಂಣು ಕೆಂಪಗೆ ಮಾಡಿದನು. ಅದರಲ್ಲಿ ಮಿತಿಗಟ್ಟು ಮದ್ಯಪಾನ ಮಾಡಿದ್ದರಿಂದ ಅವನ ಸಿಟ್ಟೆಂಬ ಬೆಂಕಿಯು ಪ್ರಖರವಾಗಿ ಪ್ರಜ್ವಲಿಸಲಿಕ್ಕೆ ಏನೂ ಅವಕಾಶವು ಬೇಕಾಗಲಿಲ್ಲ. ಆವೇಳೆಯಲ್ಲಿ ಧೋಂಡೀರಾಜನು ಪ್ರತಿ ಯಮನಂತೆ ಕಾಣಿಸುತ್ತಿದ್ದನು. ಅವನು ಯಮುನೆಯನ್ನು ಒಳ್ಳೇ ಕಸುವಿನಿಂದ ಒಮ್ಮೆ ಗುದ್ದಿ, ಅಂದದ್ದೇನಂದರೆ:— "ಮರುಳೇ, ಆ ಅಲಂಕಾರದ ಮೇಲೆ ಹೇಗೆ ನನ್ನ ಅಧಿಕಾರವಿಲ್ಲ? ತಾ, ಆ ನಿನ್ನ ಪೆಟ್ಟಿಗೆಯ ಕೀಲಿಯನ್ನು! ಎಲ್ಲಿ ಇರುತ್ತದೆ ಅದು?" ಎಂದನು.

ದೀನಳಾದ ಯಮುನೆಯು ಏನೊಂದು ಮಾತಾಡದೆ, ಧೋಂಡೀರಾಜನೆ ಮುಂದೆ ಕೀಲಿಯ ಕೈಸರವನ್ನೇ ಚಲ್ಲಿದಳು. ಅವಳು ಧೋಂಡೀರಾಜನ ಒಂದೇ ಗುದ್ದಿಗೆ ನೆಲಕ್ಕೆ ಕುಳಿತಳು. ಅವಳ ಪ್ರಾಣವು ತೀರ ಕಳವಳಗೊಂಡಿತು. ಧೋಂಡೀರಾಜನು ತನ್ನ ಎದುರಿಗೆ ಬಿದ್ದ ಕೀಲೀಕೈ ಸರವನ್ನು ತೆಗೆದುಕೊಂಡು, ನಗುತ್ತ:—"ಹೊಡೆಯುವ ಹೊರ್ತು ಎಚ್ಚರ ಹುಟ್ಟುವದಿಲ್ಲ. ನೀನು ಹೀಗೆಯೇ ಅಳುತ್ತ ಕೂಡ್ರು," ಎಂದುಚ್ಚರಿಸುತ್ತ, ಅಲ್ಲಿಯೇ ಇದ್ದ ಒಂದು ಕಟ್ಟಿಗೆಯ ಪೆಟ್ಟಿಗೆಯ ಕೀಲಿಯನ್ನು ತೆಗೆಯುವ ಯತ್ನಮಾಡಹತ್ತಿದನು. ಆ ಪೆಟ್ಟಿಗೆಯ ಅಂಗದಲ್ಲಿ ಕೀಲೀ ತೆಗೆಯುವಂತೆ ಮಾಡಿತ್ತು. ಧೋಂಡೀರಾಜನು ಆ ಕೀಲಿಯನ್ನು ಅದರ ಕೀಲೀಕೈಯಿಂದ ತೆಗೆಯದೆ, ಮತ್ತೊಂದು ಕೈಯನ್ನು ಒಳಗೆ ಜೋರಿನಿಂದ ತಿರುವಿ, ಆ ಕೈಯನ್ನು ಮುರಿದು

ಬಿಟ್ಟನು. ಅವನು ಒಳಗೆ ಮುರಿದು ಬಿದ್ದ ಕೈಯನ್ನು ಕಡೆಗೆ ತೆಗೆದು; ಎರಡನೆಯದರಿಂದ ತೆಗೆಯಲಾರಂಭಿಸಿದನು, ಅದರಿಂದಲೂ ಬಾರದ್ದರಿಂದ ಮೂರನೆಯದರಿಂದ ತೆಗೆಯಹತ್ತಿದನು; ಆದರೂ ಪೆಟ್ಟಿಗೆಯ ಬಾಯಿಯು ಕಡೆಗೆ ಬರಲಿಲ್ಲ. ಅವನು ಎಷ್ಟೋ ವೇಳೆಯ ವರೆಗೆ ಪ್ರಯತ್ನಮಾಡಿದನು. ಆದರೂ ಅವನಿಗೆ ಫಲವು ಸಿಗಲಿಲ್ಲ. ಫಲವು ಸಿಗದ್ದರಿಂದ ಅವನಿಗೆ ಮಿತಿ ಮೀರಿ ಸಂತಾಪವಾಯಿತು. ಪೆಟ್ಟಿಗೆಯ ಬಾಯಿಯು ಕಡೆಗೆ ಬರುವದಿಲ್ಲ ವೆಂದು ಅವನಿಗೆ ದೃಢವಾದ ಕೂಡಲೆ ಅವನ ಮನಸ್ಸಿನಲ್ಲಿ "ಯಮುನೆಯು ನಿಜವಾದ ಕೀಲೀಕೈಯನ್ನು ಕೊಡದೆ ಬೇರೊಂದನ್ನು ಕೊಟ್ಟು ತನಗೆ ಮೋಸ ಮಾಡಿದಳು" ಎಂಬ ಕಲ್ಪನೆಯು ಹುಟ್ಟಿತು. ಕೂಡಲೇ ಅವನ ಮನಸ್ಸಿ ನಲ್ಲಿ ಸಂತಾಪವು ಉತ್ಪನ್ನವಾಗಿ, ಆ ಸಂತಾಪದ ಭರದಲ್ಲಿ ಯಮುನೆಯ ಕೋಮಲವಾದ ಗಲ್ಲಗಳ ಮೇಲೆ ನಾಲ್ಕೈದು ಸಾರೆ ಹೊಡೆದು ಯಮುನೆ ಯನ್ನು ಕುರಿತು ಅಂದದ್ದೇನಂದರೆ:—"ನೀಚಳೆ, ನೀನು ಆ ಆಭರಣ ವನ್ನು ದರಿದ್ರನಾದ ನಿಮ್ಮ ತಂದೆಗೆ ಕೊಡಬೇಕೆಂದು ಆಲೋಚಿಸಿರುವಿ ಯೇನು? ನಿಮ್ಮ ಅಪ್ಪನ ಹಣೆಯಲ್ಲಿ ಪರರ ತಂಬುಲವನ್ನು ತಿಂದೇ ಬದು ಕಬೇಕೆಂದು ಬರೆದದೆಯೇನು? ನೀನು ಯಾತಕ್ಕೆ ಆ ದರಿದ್ರನಾದ ತಂದೆಯ ಸಲುವಾಗಿ ಯತ್ನಮಾಡುವಿ? ಆ ಪೆಟ್ಟಿಗೆಯ ಕೀಲೀಕೈಯನ್ನು ಸುಮ್ಮನೆ ಕೊಡು. ಇಲ್ಲವಾದರೆ ನಿನ್ನ ಮೈಯ ಪಾಡನ್ನು ನೋಡು. ಅರಕ್ಷಣದಲ್ಲಿಯೇ ಕಣಕದಂತೆ ಮೈಯನ್ನು ಮೆತ್ತಗೆ ಮಾಡುತ್ತೇನೆ!" ಎಂದನು.

ಯಮುನೆಯ ಕೋಮಲವಾದ ಗಲ್ಲಗಳ ಮೇಲೆ ನಾಲ್ಕೈದು ಸಾರೆ ಜೋರಿನಿಂದ ಹೊಡೆದದ್ದರಿಂದ, ಅವಳ ಎರಡೂ ಗಲ್ಲಗಳು ಕೆಂಪಾಗಿದ್ದವು. ಹಲ್ಲುಗಳಿಗೆ ಧಕ್ಕೆಯಾದ್ದರಿಂದ ರಕ್ತವು ಧಾರಾಳವಾಗಿ ಸುರಿಯುತ್ತಿತ್ತು. ಭೀ ತಿಯಿಂದ ಅವಳ ಎದೆಯು ಥರಥರ ಕಂಪಿಸುತ್ತಿತ್ತು. ಸುಪ್ರಯಾಸದಿಂದ ಮೇಲಕ್ಕೆದ್ದು ನಿಂತು ಅವಳು ನುಡಿದಳೇನಂದರೆ:—"ಮಹಾರಾಜ! ತಮ್ಮ ಕರದಲ್ಲಿರುವ ಸರದಲ್ಲಿಯೇ ಪೆಟ್ಟಿಗೆಯ ಕೀಲೀಕೈಯದೆ. ತಮಗೆ ತೆಗೆಯ ಲಿಕ್ಕೆ ಬಾರದ್ದರಿಂದ ಪೆಟ್ಟಿಗೆಯ ಬಾಯಿಯು ಕಡೆಗೆ ಬರಲೊಲ್ಲದು. ನನ್ನ ಕಡೆಗೆ ಕೊಟ್ಟರೆ ಈಗಲೇ ತೆಗೆದುಕೊಡುತ್ತೇನೆ." ಎಂದನ್ನಲು ಧೋಂಡೀ ರಾಜನು ಕೂಡಲೆ ಯಮುನೆಯ ಮುಂದೆ ಕೀಲೀಕೈ ಸರವನ್ನು ಒಗೆದು,

ತಾನು ಪಲಂಗದ ಮೇಲೆ ಹುಶ್‌ಹುಶ್ ಎಂದು ಗಾಳಿಯನ್ನು ಹೊಡೆದುಕೊಳ್ಳುತ್ತ ಕುಳಿತನು. ಯಮುನೆಯು ಸರವನ್ನು ತೆಗೆದುಕೊಂಡು ಆ ಪೆಟ್ಟಿಗೆಯ ಕೀಲಿಯನ್ನು ತೆಗೆಯಹತ್ತಿದಳು; ಆದರೆ ಆ ಮೂರ್ಖಶಿರೋಮಣಿಯು ಅದರ ಕೀಲಿಯನ್ನು ಮುರಿದದ್ದರಿಂದ ಅದು ಬರಲಿಲ್ಲ. ಮಿತಿಮೀರಿ ಪ್ರಯತ್ನ ಮಾಡಿದ ಮೇಲೆ ನಿರಾಶಳಾಗಿ ಯಮುನೆಯು:—"ಪೆಟ್ಟಿಗೆಯ ಕೀಲಿಯನ್ನು ಮುರಿದು ಬಿಟ್ಟಿರುವಿರಿ. ಅದನ್ನು ಈಗ ಕಲಬಾರನಿಂದ ತೆಗಿಸಲಿಕ್ಕೆಬೇಕು; ಇಲ್ಲವಾದರೆ ಅದು ಎಂದೂ ತೆಗೆಯಲಿಕ್ಕೆ ಬರುವಂತಿಲ್ಲ."

ಈ ಮಾತು ಕೇಳಿ ಧೋಂಡೀರಾಜನು ಹೆಣ್ಣು ಚಿಗರೆಯ ಮೇಲೆ ಹುಲಿಯು ಕೆರಳಿ ಹೋಗುವಂತೆ ಯಮುನೆಯ ಮೈಮೇಲೆ ಹೋದನು; ಮತ್ತು ಅವನು ಯಮುನೆಯನ್ನು ಎರಡೂ ಕೈಗಳಿಂದ ಗುದ್ದಿಗುದ್ದಿ ಹಣ್ಣು ಮಾಡಿ, ನಂತರ ಅವಳನ್ನು ಮೇಲಕ್ಕೆತ್ತಿ ದೂರಸಿಡಿದು ಬೀಳುವಂತೆ ಒಗೆದನು. ಅದರಿಂದ ಯಮುನೆಯು ಒಂದು ಗೋಡೆಗೆ ಹೋಗಿ ಬಿದ್ದಳು. ಗೋಡೆಗೆ ತಾಕಿ ಅವಳ ತಲೆಯೊಡೆದದ್ದರಿಂದ, ರಕ್ತವು "ಎತ್ತರವಾದ ಸ್ಥಳದಿಂದ ಬೀಳುವ ಸಣ್ಣ ಝುರಿಯಂತೆ" ಪುಟಿಯಹತ್ತಿತು. ಕೆಲಹೊತ್ತಿನ ಮೇಲೆ ಅವಳ ಬಹಿರಿಂದ್ರಿಯ ವ್ಯಾಪಾರಗಳೆಲ್ಲ ಕಟ್ಟಾದವು; ಆದರೂ ಆ ಪಾಷಾಣ ಹೃದಯನಾದ ಧೋಂಡೀರಾಜನ ಹೊಡೆಯುವ ಕೆಲಸವು ನಡೆದೇ ಇತ್ತು. ಮತ್ತೆ ಬಿದ್ದಂಥ ಕೀಲೀಕೈ ಸರವನ್ನು ತೆಗೆದುಕೊಂಡು, ಪೆಟ್ಟಿಗೆಯ ಕೀಲಿಯನ್ನು ತೆಗೆಯಹತ್ತಿದನು. ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಕಡೆಗೆ ಬೇಸರವು ಬಂದು ಆ ಪೆಟ್ಟಿಗೆಯನ್ನು ಮುರಿಯಬೇಕೆಂದು, ಅನಕ್ಕೂ ಹೊಡೆಯಹತ್ತಿದನು. ಆದರೆ ಪೆಟ್ಟಿಗೆಯು ಬಳ್ಳೇ ಗಟ್ಟಿಮುಟ್ಟ ಇದ್ದದರಿಂದ, ಅದನ್ನು ಮುರಿಯುವ ಪ್ರಯತ್ನವೂ ಅವನಿಗೆ ಕೂಡೇರುವಂತಿದ್ದಿಲ್ಲ. ಪೆಟ್ಟಿಗೆಯು ಮುರಿಯುವದಿಲ್ಲವೆಂದು ಅವನಿಗೆ ತಿಳಿದ ಕೂಡಲೆ ಅವನ ಸಂತಾಪವು ಮತ್ತಿಷ್ಟು ಅಧಿಕವಾಯಿತು. ನಿರ್ಜೀವಿಯಾದ ಪೆಟ್ಟಿಗೆಯನ್ನು ಹೊಡೆಯುವದರಿಂದ ಅವನಿಗೇನೂ ಸಮಾಧಾನವಾಗಲಿಲ್ಲ. ಮೂರ್ಛಾಗತಳಾಗಿ ಬಿದ್ದ ಯಮುನೆಯ ಕಡೆಗೆ ನೋಡಿ, ನರಿನರಿ ಹಲ್ಲುಕಡಿಯುತ್ತ, ತುಟಿಯನ್ನು ಒಂದೇಸವನೆ ಹೊರಳಾಡಿಸುತ್ತ ಧೋಂಡೀರಾಜನು ಅವಳನ್ನು ಮತ್ತೆ ತಳಿಸಲಿಕ್ಕೆ ಪ್ರಾರಂಭಿಸಿದನು. ಕೈಯು ಹೊಡತವು ಆವ

ನಿಗೆ ಬಹಳ ತುಚ್ಛೀಕಾರವಾಗಿ ಕಾಣಿಸಿತು. ಅವನು ಯಮಾವತಾರವನ್ನು ತಾಳಿ, ಕಲ್ಲು-ಕಟ್ಟಿಗೆಗಳನ್ನು ತೆಗೆದುಕೊಂಡು, ಅವಳನ್ನು ಹೊಡೆಯಹತ್ತಿದನು; ಅಸಹ್ಯವಾದ ಬಾಯಿಯಿಂದ ಅಭದ್ರ ಶಬ್ದವನ್ನು ಉಚ್ಚರಿಸಲಾರಂಭಿದನು. ಆ ಸರ್ವಾಂಗ ಸುಂದರಳಾದ ಕೋಮಲೆಯ ಶೋಕಾವಸ್ಥೆಯನ್ನು ನೋಡಿ, ಪಾಷಾಣವು ಕೂಡ ಕರಗುತ್ತಿತ್ತು! ಪ್ರಳಯಕಾಲದ ಭೈರವನಿಗೂ ಕೂಡ ದಯೆಯು ಬರುತ್ತಿತ್ತು!! ರಾಕ್ಷಸನ ಹೃದಯದಲ್ಲಿ ನಿಶ್ಚಯವಾಗಿ ಕರುಣವು ಹುಟ್ಟುತ್ತಿತ್ತು!!! ಆದರೆ ಆ ಚಾಂಡಾಲ ಧೋಂಡೀರಾಜನ ಹೃದಯದಲ್ಲಿ ದಯೆಯು ಹುಟ್ಟಲಿಲ್ಲ. ಸುರಾಪಾನದ ರಂಗಿನಲ್ಲಿದ್ದ ಅವನು ಆ ಸಾಧ್ವಿಯ ದೇಹವನ್ನು ರಕ್ತದಿಂದ ಮುಳುಗಿಸಿದನು. ಯಮುನೆಯು ಧೋಂಡೀರಾಜನ ಕೈಹೊಡತ-ಕಲ್ಲಿನ ಹೊಡತ-ಕಟ್ಟಿಗೆಯ ಹೊಡತಗಳಿಂದ ಆಸನ್ನ ಮರಣೋನ್ಮುಖಿಯಾಗಿ ಬಿದ್ದಿದ್ದಳು; ಆದರೆ ಯಾವತ್ತೂ ಜಗತ್ತಿನ ಪ್ರಾಣಿಗಳ ಪ್ರಾಣಗಳನ್ನು ಸೆಳಕೊಂಡು ಹೋಗುವ ಯಮನು ಅವಳಿಂದ ದೂರವಾಗಿಯೇ ಓಡುತ್ತಿದ್ದನು. ಒಂದು ವೇಳೆ ಧೋಂಡೀರಾಜನ ಮನಸ್ಸು ಆಗ ಅವನನ್ನು ವಾರಾಂಗನೆಯ ಕಡೆಗೆ ಜಗ್ಗದಿದ್ದರೆ, ಅವನು ನಿಶ್ಚಯವಾಗಿ ಅದೇ ರಾತ್ರಿಯಲ್ಲಿಯೇ ಅನಾಥಳಾದ ಯಮುನೆಯನ್ನು ತಾನೇ ಯಮಾಲಯಕ್ಕೆ ಎಳಕೊಂಡು ಹೋಗಿ ಹಾಕುತ್ತಿದ್ದನು; ಆದರೆ ಅವನಿಗೆ ವೇಶ್ಯಳಹತ್ತರ ಹೋಗುವದು ಅತ್ಯವಶ್ಯವಿದ್ದದರಿಂದ, ಆಸನ್ನ ಮರಣಿಯಾದ ಯಮುನೆಯನ್ನು ಹಾಗೇ ಚೆಲ್ಲಿಕೊಟ್ಟು, ಅವನು ಹೊರಟು ಹೋದನು. ದೀನಳಾದ ಯಮುನೆಯು "ದುರ್ಧರವಾದ ಶಿಲೆಯ ಆಘಾತದಿಂದ ಮೃದುವಾದ ಪುಷ್ಪವು ಗಿಜಿಗಿಜಿಯಾಗುವಂತೆ" ಗಿಜಿಗಿಜಿಯಾಗಿದ್ದಳು. ಪುಷ್ಪವೆಂದರೆ ಅದೇ ಪುಷ್ಪ! ಚತುರರು ಅದನ್ನು ಶಿರದಲ್ಲಿ ಧಾರಣ ಮಾಡುತ್ತಾರೆ, ಮೂರ್ಖರು ಅದನ್ನೇ ಅಂಗಾಲ ತಳದಲ್ಲಿ ಹಾಕಿ ತುಳಿಯುತ್ತಾರೆ!!

---

## ೮ನೆಯ ಪ್ರಕರಣ—ಕಾಲಿ.



ಯಮುನೆಯ ಸ್ಥಿತಿಯು ಬಹಳ ದುಃಖಮಯವಾಗಿತ್ತು. ಅವಳ ಪತಿ, ಅವಳ ಅತ್ತೆ-ಮಾವಂದಿರು ಮೊದಲಾದ ಎಲ್ಲ ಜನರು ಅವಳನ್ನು ಅಗ

ಣ್ಯವಾಗಿ ಥಳಿಸುತ್ತಿದ್ದರು. ಪರದೇಶಿಯಾದ ಯಮುನೆಯು ಸಂಭವಿಸುವ ಪೀಡೆಯನ್ನು ಉಪಾಯವಿಲ್ಲದೆ ತಾಳಿಕೊಳ್ಳುತ್ತಿದ್ದಳು. ಅವಳಿಗೆ ಈಶ್ವರನು ಒಳ್ಳೇ ಬುದ್ಧಿಸಾಮರ್ಥ್ಯವನ್ನು ಕೊಟ್ಟಿದ್ದರೂ, ಆ ಬುದ್ಧಿಸಾಮರ್ಥ್ಯದ ಮೇಲೆ ಅವಳದೇನೂ ಸತ್ತೆಯಿದ್ದಿಲ್ಲ. ಮುಂಗಡ ಹಣ ಕೊಟ್ಟು ಇಟ್ಟು ಕೊಂಡ ಆಳಿನಂತೆ ಯಮುನೆಯ ಸ್ಥಿತಿಯು ಇತ್ತು. ವಿಶ್ವನಾಥರಾಯನ ಮನೆಯಲ್ಲಿ ಆ ಗೃಹಲಕ್ಷ್ಮಿಯ ಯೋಗ್ಯತೆಯು ಮೂಕ ಜನಾವರಕ್ಕಿಂತಲೂ ಕಡಿಮೆ ತರದ್ದಾಗಿತ್ತು. ವಿಶೇಷತಃ ಧೋಂಡೀರಾಜನು ಪ್ರತ್ಯಹೀ ಅವಳನ್ನು ಅನೇಕ ಮುಖದಿಂದ ಪೀಡಿಸುತ್ತಿದ್ದನು.

ಧೋಂಡೀರಾಜನು ‘ರಂಗೂ’ ಎಂಬ ಹೆಸರಿನ ವೇಶ್ಯೆಯ ಪ್ರೀತಿಯವನಾಗಿದ್ದನು. ರಂಗೂ ಇವಳು ಅವನ ಮುಖ್ಯ ಆರಾಧ್ಯ-ದೇವತೆಯಾಗಿದ್ದಳು. ಅವಳ ಸೇವಾ-ಶುಶ್ರೂಷೆಯ ಹೊರತು ಅವನಿಗೆ ಇತರ ಉದ್ಯೋಗವೇ ಇದ್ದಿಲ್ಲ. ರಂಗುವು ಯಮುನೆಗಿಂತ ಸುಂದರಳೂ, ಸುಶಿಕ್ಷಿತಳೂ ಇದ್ದಾಳೆಂದು ಅವಳ ಮೇಲೆ ಧೋಂಡೀರಾಜನದು ಇಷ್ಟು ಪ್ರೇಮವು ಕೂಡಿರಬಹುದೆಂದು ಯಾರಾದರೂ ತರ್ಕಿಸಿದರೆ ಅದು ಭ್ರಾಮಕ ಕಲ್ಪನೆಯೇ ಸರಿ. ಯಮುನೆಯು ಎಷ್ಟು ಸುಂದರಳೂ, ಸುಶಿಕ್ಷಿತಳೂ, ಸುಶೀಲಳೂ ಆಗಿದ್ದಳೋ ಅಷ್ಟು ರಂಗುವು ಕುರೂಪಳೂ, ಅಶಿಕ್ಷಿತಳೂ ಅಶೀಲಳೂ ಆಗಿದ್ದಳು. ಒಟ್ಟಿಗೆ ಯಮುನೆಯ ಪುಣ್ಯಮಯ ಸ್ವರ್ಗದಲ್ಲಿಯ ದೇವಿಯಂತೆಯೂ, ರಂಗುವು ಪಾಪಮಯ ನರಕದಲ್ಲಿಯ ದಾಸಿಯಂತೆಯೂ ಇದ್ದರು. ಈ ಪ್ರಕಾರವಾಗಿ ಇಬ್ಬರಲ್ಲಿ ಕುಲ-ಗೋತ್ರ-ವಿದ್ಯಾ-ನೀತಿ-ಆಚರಣೆ ಮೊದಲಾದವುಗಳಲ್ಲಿ ಭೂವ್ಯಾಕಾಶಗಳಷ್ಟು ಅಂತರವಿತ್ತು. ಹೀಗಿದ್ದರೂ ಅವಿಚಾರಿ-ಅಜ್ಞಾನಿ-ಮದಾಂಧ-ದುರ್ವ್ಯಸನಿಯಾದ ಧೋಂಡೀರಾಜನು ರಂಗುವನ್ನು ಕಂಠದೊಳಗಿನ ‘ಸುವರ್ಣದ ತಗಡಿನಿಂದ ಆಚ್ಛಾದನವಾದ ತಾಯಿತಕ್ಕಿಂತಲೂ ಹೆಚ್ಚಿಗೆ ಜಾಗೃತೆಯಿಂದ ಕಾಯುತ್ತಿದ್ದನು. ಈ ವಿಲಕ್ಷಣ ಪ್ರೀತಿಯ ಸಂಯೋಗವನ್ನು ಬ್ರಹ್ಮನಿಂದಾದರೂ ದೂರೀಕರಿಸಲಿಕ್ಕೆ ಸಾಮರ್ಥ್ಯವಿತ್ತೋ ಇಲ್ಲೋ ಯಾರಿಗೆ ಅರಿಕೆ! ಯಾವಳ ದುರ್ಮುಖವನ್ನು ಕೂಡ ನೋಡಲಿಕ್ಕೆ ಅತಿಶಯ ಕುರುಪಿಯೂ, ಅವಯವಹೀನನೂ, ಕೀಳಜಾತಿಯವನೂ ಆದ ಮಾನವಕನಿಷ್ಟನ ನೋಟವು ಹಿಂದೆಮುಂದೆ ನೋಡುತ್ತಿ

ತ್ತೋ, ಆ ರಂಗುವಿನ ಪಕ್ಕದಲ್ಲಿ ಸತ್ಕುಲೋತ್ಪನ್ನನೂ, ಲಕ್ಷ್ಮೀಪುತ್ರನೂ ಅಧಿಕಾರವಂತನೂ ಆದ ಧೋಂಡೀರಾಜನು ಇಪ್ಪತ್ತುನಾಲ್ಕು ತಾಸು ಬಿದ್ದು ಕೊಂಡಿರುತ್ತಿದ್ದನು. ಅತಿ ದುರ್ಗಂಧವಾದ ಮದ್ಯದ ಅದರ ವ್ಯಂಜನಕ್ಕೆ ಬೇಕಾಗುವ ಮಾಂಸದ ಹೊರ್ತು ಇತರ ಪದಾರ್ಥಗಳು ಅವನಿಗೆ ಸವಿಯೆ ನಿಸುತ್ತಿದ್ದಿಲ್ಲ. ಈ ಕಾರ್ಯಕ್ಕೆ ರಂಗುವಿನ ಮನೆಯು ಅನುಕೂಲವಾಗಿದ್ದ ರಿಂದ ರಂಗುವು ಮತ್ತಿಷ್ಟು ಅವನ ಪ್ರೀತಿಗೆ ಕಾರಣಳಾಗಿದ್ದಳು. ಈ ಕೆಲ ಸಕ್ಕೆ ಪ್ರತಿನಿತ್ಯ ೪-೫ ರೂಪಾಯಿಗಳ ಖರ್ಚು ತಗಲುತ್ತಿತ್ತು. ಯೋಗ್ಯ ರೀತಿಯಿಂದ ಧನಸಂಪಾದನ ಮಾಡುವದಂತೂ ಅವನು ಮೊದಲೆ ಅರಿಯನು. ಶ್ರೀಮಂತರ ಮಗನಾದ್ದರಿಂದ ಮನಿಯಲ್ಲಿ ಏನಾದರೂ ನೆವ ಹೇಳಿ, ಅಲ್ಲಿ ಕೆಲವು ಹಣವನ್ನೂ, ಹೊರಗೆ ಬಡಜನರಿಗೆ ತನ್ನ ತಂದೆಯು ಆನರರೀ ಮ್ಯಾಜಿಸ್ಟ್ರೇಟದ ಅಧಿಕಾರವನ್ನು ತೋರಿಸಿ ಅವರಿಂದ ಕೆಲವು ಹಣವನ್ನು ಎಬ್ಬಿಸಿ ತನ್ನ ಕಾರ್ಯವನ್ನು ಅವಿಚ್ಛಿನ್ನವಾಗಿ ಸಾಗಿಸುತ್ತಿದ್ದನು. ಅವನ ತಾಯಿತಂದೆಗಳಂತೂ ಅವನ ಕಡೆಗೆ ಸ್ವಲ್ಪವದರೂ ಲಕ್ಷ್ಯಗೊಡುತ್ತಿದ್ದಿಲ್ಲ. ಮಗನ ದುರ್ವರ್ತನವನ್ನು ಯಾರಾದರೂ ಕಿವಿಯ ಮೇಲೆ ಹಾಕಿದರೆ, "ಅಲ್ಪವಯಸ್ಕನಿದ್ದಾನೆ, ಬರುಬರುತ್ತ ತಿಳಿದೇ ತಿಳಿಯುತ್ತದೆ" ಎಂಬದಾಗಿ ವಿಶ್ವನಾಥರಾಯನು ಬಿಂಕದ ಉತ್ತರವನ್ನು ಕೊಡುತ್ತಿದ್ದನು.

ಯಮುನೆಯು ಎಂದೋ ಒಂದು ದಿವಸ ತನ್ನ ತುರುಬಿನಲ್ಲಿ ಬಂಗಾ ರದ ಗುಲಾಬೀ ಹೂವನ್ನು ಇಟ್ಟುಕೊಂಡಿದ್ದಳು. ಅಂದು ಆ ಹೂವು ರಂಗು ವಿನ ದೃಷ್ಟಿಗೆ ಬಿದ್ದ ಕೂಡಲೆ ಅವಳು ಧೋಂಡೀರಾಜನಿಗೆ ಹೇಳಿದ್ದೇನಂ ದರೆ:—"ನನಗೆ ಅದೇ ಹೂವು ಬೇಕು, ಇಂದು ರಾತ್ರಿ ಆ ಹೂವನ್ನು ತಾರದೆ ಬಂದರೆ, ನಾನು ನಿನಗೆ ನನ್ನ ಮನೆಯ ಹೊಸ್ತಿಲನ್ನು ಕೂಡ ತಡ ಹಾಯಗೊಡುವದಿಲ್ಲ" ಎಂದು ಹೇಳಿದ್ದಳು. ಕಾರಣ ತನ್ನ ಪ್ರಿಯ ರಂಗು ವಿನ ಸಲುವಾಗಿ ಯಮುನೆಯನ್ನು ಆ ಹೂವು ಕೊಡುವದಕ್ಕಾಗಿ ಪರಿಪರಿ ಗೋಳಾಡಿಸುತ್ತಿದ್ದನು. ಅವನ ಆ ಪ್ರಯತ್ನವು ಕಡೆಗೆ ಏನಾಯಿತೆಂಬುವ ದು ವಾಚಕರಿಗೆ ಹಿಂದಿನ ಪ್ರಕರಣದಲ್ಲಿ ಗೊತ್ತಾಗಿರುತ್ತದೆ. ಈ ಪ್ರಕಾರ ವಾಗಿ ಯಮುನೆಯನ್ನು ಪೀಡಿಸದ ದಿವಸವೇ ಇದ್ದಿಲ್ಲ. ಅವಳ ಆತ್ಮೆ-ಮಾವ ರ ಕ್ರೂರತನವನ್ನು ವರ್ಣಿಸಲಿಕ್ಕೆ ಒಂದು ಕಾದಂಬರಿಯಿಂದಾಗದು! ಅವ

ರ ಕ್ರೂರತನವು ಪ್ರಳಯಕಾಲದ ಯಮನಿಗಿಂತಲೂ ಹೆಚ್ಚಿನದಾಗಿತ್ತು. ಸ್ತ್ರೀಯರು ಅತ್ತೆಯರಾದರೆಂದರೆ ತಾವು ಮೊದಲು ಸೊಸೆಯರಿದ್ದೆವೆಂಬುವ ದನ್ನು ಮರೆತು ಬಿಡುತ್ತಾರೆ. ಅದರಲ್ಲಿ ರಾಧಾಬಾಯಿಯಂಥ ಸ್ತ್ರೀಯರಿಗೆ ಅತ್ತೆಯ ಗಾದೆಯ ಹಕ್ಕು ದೊರೆತಿತೆಂದರೆ, ಅವರಿಗೆ ಬ್ರಹ್ಮಪದವೇ ಸಿಕ್ಕಂ ತಾಗುತ್ತದೆ. ಎಷ್ಟೋ ಸ್ತ್ರೀಯರು ತಾವು ಸೊಸೆಯರಿರುವಾಗ್ಗೆ ತಮ್ಮ ಅತ್ತೆ ಯರು ಎಷ್ಟು ತೊಂದರೆಗೊಡುತ್ತಿದ್ದರೋ, ಅದರ ಇಮ್ಮಡಿ ಮುಮ್ಮಡಿ ತೊಂದರೆಯನ್ನು ತಾವು ಅತ್ತೆಯರಾದಾಗ್ಗೆ ತಮ್ಮ ಸೊಸೆಯರಿಗೆ ಕೊಡಬೇ ಕೆಂದು ಸಂಕಲ್ಪ ಮಾಡಿರುತ್ತಾರೆ. ಒಬ್ಬರಾದರೂ ತಮ್ಮ ಸೊಸೆಯನ್ನು ಹೊಟ್ಟೆಯ ಮಕ್ಕಳಂತೆ ಭಾವಿಸಿ, ಅವಳನ್ನು ಸುಖ-ಸಮಾಧಾನಗಳಿಂದ ಸಂತುಷ್ಟಿಸಬೇಕೆಂದು ಇಚ್ಛಿಸುವದಿಲ್ಲ. ಸಮಾಜದಲ್ಲಿ ಲಕ್ಷಗಟ್ಟಲೆ ಸ್ತ್ರೀಯರು ರಾಧಾಬಾಯಿಯ ಮಾಲಿಕೆಯಲ್ಲಿ ಸೇರಿದವರೇ ಇರುತ್ತಾರೆ. ಇಂಥ ಸ್ತ್ರೀಯ ರು ಸೊಸೆಯನ್ನು ದನವಿನಂತೆ ತಿಳಿಯುತ್ತಾರೆ, ಸೊಸೆಯರನ್ನು ಪಶುವಿನಂ ತೆ ನಡೆಸಿಕೊಳ್ಳುತ್ತಾರೆ, ಪಶುವಿನಂತೆ ದುಡಿಸುತ್ತಾರೆ, ಪಶುವಿನಂತೆ ಹೊಡೆ ಯುತ್ತಾರೆ, ಬಡಿಯುತ್ತಾರೆ, ಬಯ್ಯುತ್ತಾರೆ. ಈ ಪ್ರಕಾರವಾದ ಘೋರ ಕೃತ್ಯವನ್ನು ಮಾಡುವದರಿಂದ "ಅತ್ತೆ" ಇದು ಒಂದು ಭಯಪ್ರದ ಶಬ್ದವಾ ಗಿದೆ. ಬಲಾತ್ಕಾರದಿಂದ ನಡೆಸಿಕೊಳ್ಳುವಂಥ ಅಧಿಕಾರಿಯನ್ನು ಕಂಡು ಕೈಕೆಳಗಿನವನೂ, ಅಷ್ಟಕ್ಕೆ ಹೊಡೆಯುವದೂ-ಬಯ್ಯುವದೂ, ಇಷ್ಟಕ್ಕೆ ಹೊ ಡೆಯುವದೂ-ಬಯ್ಯುವದೂ ಮಾಡುವಂಥ ಶಿಕ್ಷಕನನ್ನು ಕಂಡು ವಿದ್ಯಾರ್ಥಿ ಗಳು ಥರಥರ ನಡುಗುವಂತೆ ಅತ್ತೆಯರನ್ನು ಕಂಡು ಎಷ್ಟೋ ಸೊಸೆಯರು ಗದಗದ ನಡುಗುತ್ತಿರುತ್ತಾರೆ. ವಾಚಕರೇ, ಇದರ ಮೇಲಿಂದ 'ಅತ್ತೆ' ಎಂಬ ಎರಡಕ್ಷರದಲ್ಲಿ ಎಷ್ಟು ಭಯಂಕರತೆಯು ತುಂಬಿ ಹೊರಸೂಸುತ್ತದೆ ನೋಡಿರಿ. ಪಶುಗಳಿಗೆ ಆಗುವ ತೊಂದರೆಯನ್ನು ದೂರ ಮಾಡುವದಕ್ಕಾಗಿ ನಮ್ಮ ಸಮಾಜದ ಮುಖ್ಯ ಮುಖ್ಯ ಜನರು "ಪಶುಕ್ಲೇಶನಿವಾರಣೀ" ಎಂಬ ಸಂಸ್ಥೆಯನ್ನು ಸ್ಥಾಪಿಸಿ, ಆ ಸಂಸ್ಥೆಯ ಮುಖಾಂತರ ಪಶುಕ್ಲೇಶ ನಿವಾರಣೆ ಯ ಕೆಲಸವನ್ನು ತ್ವರೆಯಿಂದ ನಡೆಸಿರುತ್ತಾರೆ. ಪಶುಗಳಿಗೆ ಯಾರೂ ಹೊಡೆ ಯಬಾರದೆಂದೂ, ಅವುಗಳ ಮೇಲೆ ಬಹಳ ಭಾರವನ್ನು ಹಾಕಬಾರದೆಂ ದೂ, ಅವುಗಳನ್ನು ಬಹಳ ವೇಳೆಯವರೆಗೆ ಕೆಲಸಕ್ಕೆ ಹಚ್ಚಬಾರದೆಂದೂ,

ಅವುಗಳ ಸಂರಕ್ಷಣೆಯ ವಿಷಯದಲ್ಲಿ ಬಹಳ ಲಕ್ಷವಿರಬೇಕೆಂದೂ ಆ ಸಂಸ್ಥೆಯ ನಿಯಮುಗಳಿದ್ದು, ಆ ಸಂಸ್ಥೆಯ ವಿರುದ್ಧವಾಗಿ ಯಾರಾದರೂ ನಡೆದರೆ ಖಟ್ಲೆಯನ್ನು ಮಾಡಿ ಅವರನ್ನು ಘನತರವಾದ ದಂಡನೆಗೆ ಗುರಿಮಾಡಬೇಕೆಂದು ನಿಶ್ಚಯಿಸಲ್ಪಟ್ಟದೆ. ಆದರೆ ನಮ್ಮ ಸಮಾಜದಲ್ಲಿ ಪ್ರತಿಯೊಂದು ಮನೆಯಲ್ಲಿ ಸೊಸೆಯೆಂಬವಳಿಗೆ ವಿಪರೀತವಾದ ತೊಂದರೆಯಿದ್ದು, ಅವಳ ದ:ಖನಿವಾರಣೆಯ ಜವಾಬುದಾರಿಯನ್ನು ಒಬ್ಬರಾದರೂ ತಲೆಯ ಮೇಲೆ ತೆಗೆದುಕೊಳ್ಳದೆ ಇರುವದು ಸಖೇದಾಶ್ಚರ್ಯವಾದ ಸಂಗತಿಯು. ಇದರ ಮೇಲಿಂದ ವಿಚಾರಿಸಿದರೆ ಸೊಸೆಯು ಪಶುವಿಗಿಂತಲೂ ಕನಿಷ್ಟಳು! ಅವಳು ಪಶುವಿಗಿಂತಲೂ ದುರ್ದೈವಿ!! ಎಂದು ಹೇಳಲಿಕ್ಕೆ ಅಡ್ಡಿಯಿಲ್ಲ.

ಮಂಗನ ಕೈಯಲ್ಲಿ ಮಾಣಿಕವು ಸಿಕ್ಕಂತೆ ರಾಧಾಬಾಯಿಯ ಕೈಯಲ್ಲಿ ಯಮುನೆಯು ಸಿಕ್ಕಿದ್ದಳು. ಯಮುನೆಯನ್ನು ನೋಡಿದ ಕೂಡಲೆ ರಾಧಾಬಾಯಿಯ ಕಣ್ಣುಗಳಲ್ಲಿ ಕೋಪದ ಕಿಡಿಗಿಡಿಗಳು ಹೊರಸೂಸುತ್ತಿದ್ದವು. ಬಯ್ಯುವದಕ್ಕೆ ನಾಲಿಗೆಯು ಹೊರಳಾಡುತ್ತಿತ್ತು, ಹೊಡೆಯುವದಕ್ಕೆ ಕೈಗಳು ಹಾತರಿಯುತ್ತಿದ್ದವು. ಅತ್ತೆಗೆ ಸೊಸೆಯನ್ನು ಉರಿಸಲಿಕ್ಕೆ ಅನುಕೂಲವಾದ ಎಲ್ಲ ಪ್ರಯೋಗಗಳನ್ನು ರಾಧಾಬಾಯಿಯು ಯಮುನೆಯ ಮೇಲೆ ಮಾಡುತ್ತಿದ್ದಳು. ಒಂದುದಿವಸ ರಾಧಾಬಾಯಿಯು ನೆಲ್ಲಕ್ಕೀ ಅನ್ನವನ್ನು ಮಾಡಿದ್ದಳು. ಯಮುನೆಯು ಊಟದ ಕಾಲದಲ್ಲಿ ಸಹಜವಾಗಿ:—“ಅನ್ನದಲ್ಲಿ ಅಷ್ಟೇನೂ ಛತ್ತುವಿಲ್ಲ” ಎಂದಳು. ಇಷ್ಟಕ್ಕೆ ರಾಧಾಬಾಯಿಯು ಒಳ್ಳೇ ಕೋಪದಿಂದ ಯಮುನೆಯನ್ನು ಹೊಟ್ಟೆಯುರಿಯುವ ಮಾತುಗಳಿಂದಲೂ, ಮೈನುಗ್ಗಾಗುವ ಹೊಡತಗಳಿಂದಲೂ ತಲ್ಲಣಗೊಳಿಸಿದಳು. ಒಂದು ದಿವಸ ಏನೋ ಕಾರಣದಿಂದ ಯಮುನೆಯ ಸೀರೆಗೆ ಬೆಂಕಿಹತ್ತಿ ಸ್ವಲ್ಪ ಅದು ಸುಟ್ಟದ್ದರಿಂದ, ರಾಧಾಬಾಯಿಯು ಎರಡು ವರ್ಷದ ತನಕ ಯಮುನೆಯನ್ನು ಆ ಹರಕ ಸೀರೆಯಲ್ಲಿಯೇ ಇಟ್ಟದ್ದಳು. ನಾವು ಈಪ್ರಕಾರವಾಗಿ ಉಲ್ಲೇಖಿಸಿರುವದಕ್ಕೆ ನಮ್ಮ ಎಷ್ಟೋ ವಾಚಕೋತ್ತಮರು ನಮ್ಮ ಲೇಖನವು ಅತಿಶಯೋಕ್ತಿಯ ಲೇಖನವೆಂದು ಭಾವಿಸಬಹುದು. ಅಥವಾ ಕಾದಂಬರೀಕಾರರಿಗೆ ಅತಿಶಯೋಕ್ತಿಯ ಲೇಖನ ಬರೆಯಲಿಕ್ಕೆ ಔತ್ಸುಕ್ಯವಿರುತ್ತದೆಂದು ನಮ್ಮ ಮೇಲೆ ಆರೋಪರೂಪವಾದ ಭಾರವನ್ನು ಹೊರಿಸಬಹುದು; ಆದರೆ ಮೇಲಿನ ವರ್ಣ

ನೆಯು ಅತಿಶಯೋಕ್ತಿಯದಲ್ಲದಿದ್ದು, ಅಕ್ಷರಶಃ ನಿಜವಿರುತ್ತದೆಂದು ಅವರಿಗೆ ನಾವು ನಿಶ್ಚಯದಿಂದ ಹೇಳುತ್ತೇವೆ. ಯಮುನೆಯು ಮೇಲಿನ ಯಾವತ್ತೂ ದಂಡನೆಯನ್ನು ಭೋಗಿಸುತ್ತಿದ್ದ ಸಂಗತಿಯು ಸತ್ಯವಾದದ್ದದೆ. ಅವಳು ಇಷ್ಟು ಕಷ್ಟಬಡಲಿಕ್ಕೆ ಅವಳ ದುರ್ದೈವವೇ ಕಾರಣವು ಹೊರ್ತು ಎರಡನೆಯ ಯಾವ ಕಾರಣವೂ ಇಲ್ಲವೆಂದು ನಮ್ಮ ತಿಳುವಳಿಕೆಯಿರುತ್ತದೆ.

ಜಗತ್ತಿನಲ್ಲಿ ಗುಲಾಮತನವನ್ನು ಮಾಡುವದು ಬಹು ಕಠಿಣವೆಂದೂ, ಪರದಾಸ್ಯವನ್ನು ಮಾಡುವದು ಬಹು ತುಚ್ಛೀಕರಣವೆಂದೂ, ಪಶುವಿನ ಸ್ಥಿತಿಯು ಶೋಚನೀಯ ಸ್ಥಿತಿಯೆಂದೂ ಹಲವು ಜನರ ನಂಬಿಕೆಯುಂಟು. ಆದರೆ ಸೂಕ್ಷ್ಮರೀತಿಯಿಂದ ವಿಚಾರಿಸಿದರೆ, ಜಗತ್ತಿನಲ್ಲಿ ಸೊಸೆಯ ಕಾರ್ಯದ ಮುಂದೆ ಗುಲಾಮತನವು ಎಂದೂ ಕಠಿಣವಾಗಲಾರದು. ಸೊಸೆಯ ಮುಂದೆ ಪರದಾಸತ್ವವು ಎಂದೂ ತುಚ್ಛೀಕಾರವಾಗದು. ಸೊಸೆಯ ಶೋಚನೀಯ ಸ್ಥಿತಿಗಿಂತ ಪಶುವಿನ ಶೋಚನೀಯ ಸ್ಥಿತಿಯು ಎಂದೂ ಹೆಚ್ಚಾಗಲಾರದು.

ನಮ್ಮ ಸಮಾಜದಲ್ಲಿಯ ಮುಖ್ಯ ಜನರು ಸಮಾಜದಲ್ಲಿ ದೊಡ್ಡದೊಡ್ಡ ಸುಧಾರಣೆಗಳನ್ನು ಮಾಡಲಿಕ್ಕೆ ಅವಿಶ್ರಾಂತ ಶ್ರಮವನ್ನು ತಕ್ಕೊಳ್ಳುತ್ತಿರುತ್ತಾರೆ. ಆದರೆ ಪ್ರತಿಯೊಂದು ಕುಟುಂಬದಲ್ಲಿ ಅತ್ತೆಯಿಂದಾಗತಕ್ಕ ದುಷ್ಪರಿಣಾಮದ ಸಂಬಂಧವಾಗಿ ಒಬ್ಬರೂ ಆಲೋಚಿಸುವದಿಲ್ಲ. ಅತ್ತೆಯ ನಡಾವಳಿಯನ್ನು ಸುಧಾರಿಸಲಿಕ್ಕೆ ಒಬ್ಬರೂ ಯತ್ನಿಸುವದಿಲ್ಲ. ವಾಚಕ ಬಂಧುಗಳೇ, ತಮಗೆ ಇನ್ನೊಂದು ಸಂಗತಿಯನ್ನು ಹೇಳುವದೇನಂದರೆ:— ಎಲ್ಲ ಅತ್ತೆಯರೂ ರಾಧಾಬಾಯಿಯ ವರ್ತನದವರೇ ಇರುತ್ತಾರೆಂದು ಹೇಳಲಿಕ್ಕಾಗದು; ಮತ್ತು ಎಲ್ಲ ಸೊಸೆಯರೂ ಯಮುನೆಯಂತೆ ಸುಶೀಲರೂ, ಸುಶಿಕ್ಷಿತರೂ, ಆಜ್ಞಾಧಾರಕರೂ ಇರುತ್ತಾರೆಂದು ಹೇಳಲಿಕ್ಕಾಗದು. ಹೆಚ್ಚು ಕಡಿಮೆ ಪ್ರಮಾಣದಿಂದ ಎಲ್ಲ ಸ್ಥಳದಲ್ಲಿ ಒಳ್ಳೇ ಕೆಟ್ಟ ಎಂಬ ಎರಡು ಪಕ್ಷಗಳು ಇರುವದು ಯಥಾಕ್ರಮವಾಗಿದೆ. ಸಮಾಜದಲ್ಲಿ ಸೂಕ್ಷ್ಮದೃಷ್ಟಿಯಿಂದ ನಿರೀಕ್ಷಿಸಿದರೆ, ೧೦೦ ಮಂದಿಯಲ್ಲಿ ೯೯ ಮಂದಿ ಸ್ತ್ರೀಯರು ತಮ್ಮ ಸೊಸೆಯರನ್ನು ಗುಲಾಮರಂತೆ ನಡಿಸಿಕೊಳ್ಳುತ್ತಾರೆ. ಸೊಸೆಯರ ಮನಸ್ಸಿನಲ್ಲಿ ಅತ್ತೆಯರು ತಮ್ಮನ್ನು ಪೀಡಿಸುತ್ತಾರೆಂಬ ಭಾವನೆಯು ಮೊದಲೇ ಬೇರು

ಗೊಂಡಿರುವದರಿಂದ, ಅತ್ತೆಯರು ತಮ್ಮ ಕ್ರೂರಕೃತ್ಯವನ್ನು ಪ್ರಾರಂಭಿಸಿದ ಕೂಡಲೆ ಸೊಸೆಯರೂ ಅತ್ತೆಯನ್ನು ಹೀಯಾಳಿಸುವ ತಮ್ಮ ಕಾರ್ಯವನ್ನು ಪ್ರಾರಂಭಿಸಬೇಕೆಂದು ಮುಂದಾಗಿಯೇ ಆಲೋಚಿಸಿರುತ್ತಾರೆ. ಅತ್ತೆಯು ಮಾತೃಸಮಾನವೆಂದು ಭಾವಿಸುವ ಸ್ತ್ರೀಯರು ೧೦೦ ಮಂದಿಯಲ್ಲಿ ಒಬ್ಬರಾದರೂ ದೊರೆಯುತ್ತಾರೋ ಇಲ್ಲೋ.

ಯಮುನೆಗೆ ಒಬ್ಬರ ಕಾಟವಂತಲ್ಲ. ಒತ್ತಟ್ಟಿಗೆ ಅತ್ತೆಯ ಕಾಟ, ಒತ್ತಟ್ಟಿಗೆ ಮಾವನ ಕಾಟ, ಒತ್ತಟ್ಟಿಗೆ ಗಂಡನ ಕಾಟ, ಒತ್ತಟ್ಟಿಗೆ ಮಾಧವರಾಯನ ಕಾಟ; ಹೀಗೆ ಅವಳನ್ನು ಸುತ್ತುಮುತ್ತು ಹರಿದುತಿಂಬುವ ಜನರೇ ಅವಳ ಪಾಲಿಗೆ ಗಂಟು ಬಿದ್ದಿದ್ದರು. ಮುಪ್ಪಿನ ಕಾಲದಲ್ಲಿ ತರುಣ ಪತ್ನಿಯ ಸಂಯೋಗವಾದ್ದರಿಂದ, ವಿಶ್ವನಾಥರಾಯನು ರಾಧಾಬಾಯಿಯ ಸೂತ್ರದ ಗೊಂಬೆಯಾಗಿದ್ದನು. ರಾಧಾಬಾಯಿಯು ಸೂತ್ರವನ್ನು ತಿರುವಿದಂತೆ ವಿಶ್ವನಾಥರಾಯನು ಕುಣಿಯುತ್ತಿದ್ದನು. ರಾಧಾಬಾಯಿಯು ಪ್ರತಿನಿತ್ಯ ತನಗೆ ಶಕ್ಯವಿದ್ದಷ್ಟು ಯಮುನೆಯನ್ನು ಹಲವು ರೀತಿಯಿಂದ ತಲ್ಲಣಗೊಳಿಸಿ, ಅಷ್ಟಕ್ಕೆ ತೃಪ್ತಳಾಗದೆ ಯಮುನೆಯ ಸಂಬಂಧವಾಗಿ ವಿಶ್ವನಾಥರಾಯನ ಕಡೆಗೆ ಫಿರ್ಯಾದಿಯನ್ನು ನಮೂದ ಮಾಡುತ್ತಿದ್ದಳು. ಅವಳು ವಿಶ್ವನಾಥರಾಯನ ಕಡೆಗೆ ಒಯ್ಯುವ ಅಸಲ ಅರ್ಜಿಯನ್ನು ಒಳ್ಳೇ ವಿಚಾರದಿಂದ ಸಿದ್ಧಪಡಿಸುತ್ತಿದ್ದಳು. ರಾಧಾಬಾಯಿಯು ತನ್ನ ಅರ್ಜಿಯನ್ನು ವಿಶ್ವನಾಥರಾಯನ ಕಡೆಗೆ ನಮೂದ ಮಾಡುವಾಗ, ವಿಶ್ವನಾಥರಾಯನ ವಿಶ್ರಾಂತಿಯ ಮನೆಯ ಬಾಗಿಲದ ಹತ್ತರ ನಿಂತು, ಕಣ್ಣಿಗೆ ಶೀರೆಯ ಸೆರಗನ್ನು ಹಚ್ಚಿ ಅಳುವದಕ್ಕೆ ಆರಂಭಿಸುತ್ತಿದ್ದಳು. ಆ ರೋದನ ಧ್ವನಿಯನ್ನು ಕೇಳಿ ವಿಶ್ವನಾಥರಾಯನು ಗಾಬರಿಯಾಗಿ ಬಾಗಿಲದ ಹತ್ತರ ಬಂದು ಏನಾಯಿತೆಂದು ವಿಚಾರಿಸುತ್ತಿದ್ದನು. ಈಪ್ರಕಾರ ಎರಡು ಮೂರು ಸಾರೆ ಕೇಳಿದ ಮೇಲೆ ರಾಧಾಬಾಯಿಯು ಮೆಲ್ಲನೆ ತನ್ನ ಪುರಾಣವನ್ನು ಹೇಳಲಿಕ್ಕೆ ಆರಂಭಿಸುತ್ತಿದ್ದಳು. "ಪ್ರಪಂಚದ ಕಡೆಗೆ ಸ್ವಲ್ಪಾದರೂ ಲಕ್ಷ್ಯಗೊಡುವಂತಿಲ್ಲ. ಇಂಥ ಅಪಮಾನಕಾರಕವಾದ ಮನೆಯಲ್ಲಿ ಇರುವದಕ್ಕಿಂತಲೂ ಮರಣವೇ ಯೋಗ್ಯವಾಗಿ ಕಾಣುತ್ತದೆ. ಕೆಲಸಕ್ಕೆ ಬಾರದ ಯಮುನೆಯು ಇವರು ಚಿಕ್ಕವರು, ಇವರು ಹಿರಿಯರು, ಇವರಿಗೆ ಆಡಬೇಕು—ಇವರಿಗೆ ಆಡಬಾರದು, ಎಂಬದನ್ನು

ಸ್ವಲ್ಪವಾದರೂ ಆಲೋಚಿಸದೆ, ಮನಬಂದಂತೆ ನನ್ನ ಮೊದಲಾಗಿ ಮನೆಯು ಜನರನ್ನೆಲ್ಲ ನಿಂದಿಸುತ್ತಾಳೆ. ಇಂಥ ಮರ್ಯಾದೆಯಿಲ್ಲದ ಹಿರಿಯತನವಾದರೂ ನನಗೆ ಯಾತಕ್ಕೆ ಬೇಕಾಗಿದೆ. ನೀವೇ ಸೊಸೆಯನ್ನಿಟ್ಟುಕೊಂಡು ಸುಖದಿಂದ ಇರ್ರಿ. ಹೊರಗಿನ ದೆವ್ವ ಬಂದು ಮನೆಯ ದೇವರನ್ನು ಓಡಿಸಿದಂತೆ ನನ್ನ ಸ್ಥಿತಿ ಇರುವದು. ನನಗೆ ಕಾಶೀಯಾತ್ರೆಗೆ ಕಳುಹಿಸಿಕೊಡಿರಿ. ಅವಳೇ ಮನೆಯ ಯಜಮಾನಿಯಾಗಿ ಸಂಸಾರ ರಥವನ್ನು ಸಾಗಿಸಲಿ! ಮನೆಯಲ್ಲಿ ನಾನೇ ಸೊಸಿ, ಅವಳೇ ಅತ್ತೆಯಾಗಿರುತ್ತಾಳೆ." ಎಂಬ ಪ್ರಸ್ತಾವನೆಯು ಮುಗಿದ ಕೂಡಲೆ ವಿಶ್ವನಾಥರಾಯನು ಕೂಡಲೆ ಯಮುನೆಯ ಹತ್ತರ ಬಂದು, ಅವಳನ್ನು ನಿಂದ್ಯದ ಮಾತುಗಳಿಂದಲೂ, ಹೊಡತಗಳಿಂದಲೂ ತಲ್ಲಣಗೊಳಿಸುತ್ತಿದ್ದನು. ಪ್ರತಿನಿತ್ಯ ಹೀಗೆಯೇ ವಿಶ್ವನಾಥರಾಯನಿಂದ ಕಡಿಮೆ ಕಡಿಮೆಯೆಂದರೆ ನೂರಾರು ನಿಂದ್ಯೋಕ್ತಿಗಳ ಪ್ರಸಾದವಾದರೂ ಯಮುನೆಗೆ ಸಿಕ್ಕೇ ಸಿಗುತ್ತಿತ್ತು. ಯುಮುನೆಯು ತನ್ನ ಕೆಲಸದಲ್ಲಿ ಬಳ್ಳೇ ದಕ್ಷಳಿದ್ದಳು. ಅವಳು ತನ್ನ ಕೆಲಸವನ್ನು ವೇಳೆ ವೇಳೆಗೆ ಮಾಡಿ ಮುಗಿಸುತ್ತಿದ್ದಳು. ಆದರೆ ಅವಳು ಮಾಡಿದ ಕೆಲಸದಲ್ಲಿ ಅವಳ ಕಣ್ಣುಮರೆಯಲ್ಲಿ ರಾಧಾಬಾಯಿಯು ಏನಾದರೂ ಹೆಚ್ಚುಕಡಿಮೆ ಮಾಡುತ್ತಿದ್ದಳು. ವಿಶ್ವನಾಥರಾಯನ ಸ್ನಾನವಾದ ಕೂಡಲೆ ಸಂಧ್ಯಾ-ವಂದನೆಗಳಿಗೆ ಬೇಕಾದ ಸಾಹಿತ್ಯವನ್ನು ಯಮುನೆಯು ಸಿದ್ಧಪಡಿಸಿರುತ್ತಿದ್ದಳು. ಆಗ ರಾಧಾಬಾಯಿಯು ಯಮುನೆಯನ್ನು ಯಾವ ಹೊರಗಿನ ಕೆಲಸಕ್ಕಾದರೂ ಕಳುಹಿಸಿ, ಸಿದ್ಧಪಡಿಸಿಟ್ಟ ಸಾಹಿತ್ಯದಲ್ಲಿ ಏನಾದರೂ ಹೆಚ್ಚುಕಡಿಮೆ ಮಾಡುತ್ತಿದ್ದಳು. ಅದನ್ನು ನೋಡಿ ವಿಶ್ವನಾಥರಾಯನು ನಿರಪರಾಧೆಯಾದ ಯಮುನೆಯನ್ನು ಮನಬಂದಂತೆ ಬಯ್ಯುತ್ತಿದ್ದನು. ಆಗ ರಾಧಾಬಾಯಿಯು ಸಂತೋಷಸಾಗರದಲ್ಲಿ ಮುಳುಮುಳುಗೇಳುತ್ತಿದ್ದಳು. ಇರಲಿ.

ಒಂದು ದಿವಸದ ರಾತ್ರಿಯ ಸುದ್ದಿಯು. ಯಮುನೆಯು ತನ್ನ ಕೋಣೆಯಲ್ಲಿ ಮಲಗಿದ್ದಳು. ಧೋಂಡೀರಾಜನು ಯಮುನೆಯ ಕೋಣೆಯಲ್ಲಿ ಬಂದು ಅವಳನ್ನು ಮನಬಂದಂತೆ ಬಯ್ಯುವದೂ, ಹೊಡೆಯುವದೂ ಮಾಡಹತ್ತಿದನು. ರಾಧಾಬಾಯಿಯು ಓರೆಗೆ ನಿಂತುಕೊಂಡು, ಯಮುನೆಯ ಅವಸ್ಥೆಯನ್ನು ಕಂಡು ಹಿಗ್ಗಿದಳು. ಅವಳು ಮಗನ ಯಮುನೆಗೆ ಅನ್ನುವ

ಹೀನೋಕ್ತಿಗಳನ್ನೂ ಯಮುನೆಗೆ ಹೊಡೆಯುವ ಹೊಡತಗಳನ್ನೂ ಅತ್ಯಾ ನಂದದಿಂದ ಆಲಿಸುತ್ತಿದ್ದಳು. ಅವಳಿಗೆ ಯಮುನೆಯ ಅಳುವ ಸ್ವರವು ಚನ್ನಾಗಿ ಕೇಳುತ್ತಿತ್ತು. ಆದರೆ ರಾಧಾಬಾಯಿಗೆ ಸ್ವಲ್ಪಾದರೂ ಕರುಣವು ಬರಲಿಲ್ಲ. ಗಾಯನಲುಬ್ಧ ಮನುಷ್ಯನಿಗೆ ಗಾಯನ ಸ್ವರದಿಂದ ಆನಂದವಾ ಗುವಂತೆ ಯಮುನೆಯ ಅಳುವ ಸ್ವರದಿಂದ ರಾಧಾಬಾಯಿಗೆ ಬಳ್ಳೇ ಆನಂದ ವಾಗುತ್ತಿತ್ತು. ಧೋಂಡೀರಾಜನ ಕಾಯಕವು ಮುಗಿದ ಕೂಡಲೆ ನಡೆದ ಸಂಗತಿಯ ಬಗ್ಗೆ ಪ್ರಾತಃಕಾಲದಲ್ಲಿ ವಿಚಾರಿಸಬೇಕೆಂದಾಲೋಚಿಸಿ, ರಾಧಾ ಬಾಯಿಯು ತನ್ನ ಮಲಗುವ ಮನೆಗೆ ಹೋಗಿ ಸ್ವಸ್ಥವಾಗಿ ಮಲಗಿದಳು. ಎರಡನೇ ದಿವಸದ ಪ್ರಾತಃಕಾಲ. ಯಮುನೆಯು ತನ್ನ ಕೋಣೆಯಲ್ಲಿ ಬರೇ ನೆಲದ ಮೇಲೆ ಬಿದ್ದುಕೊಂಡಿದ್ದಳು. ಆ ಕೋಮಲಾಂಗಿಯು ರಾಕ್ಷಸೀರೂ ಪಿಯಾದ ಧೋಂಡೀರಾಜನ ಹೊಡತಗಳಿಂದ ಹಣ್ಣುಹಣ್ಣಾಗಿದ್ದಳು. ಪ್ರಭಾ ತಕಾಲದ ಶಾಂತವೇಳೆಯಿಂದ ಅವಳ ಮೈಯಲ್ಲಿ ಸ್ವಲ್ಪ ಚೈತನ್ಯವು ಉತ್ಪನ್ನ ವಾದ್ದರಿಂದ, ಅವಳು ತನ್ನ ದುಃಖದ ಸ್ಥಿತಿಯ ಬಗ್ಗೆ ಆಲೋಚಿಸುತ್ತಿದ್ದಳು. ಈಶ್ವರನ ಹೊರ್ತು ತನಗೆ ಯಾರ ಆಶ್ರಯವೂ ಇಲ್ಲ, ಅವನ ಹೊರ್ತು ಯಾರಿಂದಲೂ ನನ್ನ ದುಃಖ ನಿವಾರಿಸುವದಾಗುವದಿಲ್ಲ, ಅವನ ಹೊರ್ತು ನನ್ನ ಸಲುವಾಗಿ ಯಾರಿಗೂ ಅಂತಃಕರುಣವು ಹುಟ್ಟುವದಿಲ್ಲ; ಎಂದು ಮನ ದಲ್ಲಿ ಆಲೋಚಿಸುತ್ತ ಅವಳು ಜಗನ್ನಿಯಾಮಕನಾದ ಶಂಭುವಿನ ಸ್ತೋತ್ರ ವನ್ನು ಮಾಡುತ್ತ ಕುಳಿತಿದ್ದಳು. ಅವಳು ಅತಿ ಕರುಣಸ್ವರದಿಂದ:—
"ಮಾತೇ, ಕಾಳಿಕಾಭವಾನೀ—"

ಯಮುನೆಯು ಇದರ ಮುಂದಿನ ಶಬ್ದವನ್ನು ಉಚ್ಚರಿಸುವ ಅವಶ್ಯಕ ತೆಯೇ ಉಳಿಯಲಿಲ್ಲ. ಅವಳು 'ಕಾಳಿಕಾಭವಾನೀ' ಇಷ್ಟನ್ನುತ್ತಿರಲಿಕ್ಕೆ ಪ್ರತ್ಯಕ್ಷ ಮಹಾಕಾಳಿಯೇ ಎದುರಾದಳು. ಮಹಾಕಾಳಿಯೆಂದರೆ ರಾಧಾಬಾ ಯಿಯೆಂಬುವದನ್ನು ಚಾಣಾಕ್ಷರಾದ ವಾಚಕರು ಈ ಮೊದಲೇ ತರ್ಕಿಸಿರ ಬಹುದು. ಆ ಚಾಂಡಾಳಿಣಿಯು ಬಂದ ಕೂಡಲೆ ಹಣ್ಣುಹಣ್ಣಾಗಿದ್ದ ಯಮುನೆಯ ಬೆನ್ನ ಮೇಲೆ ಬಂದು ಸಾರೆ ಗಟ್ಟಿಯಾಗಿ ಗುದ್ದಿ:—"ಎಲೈ ದುಷ್ಟಳಾದ ಯಮುನೇ, ನೀನು ಇನ್ನೂ ಏಳುವಂತಿಲ್ಲವೇನು? ಹೊರಗೆ ಇಷ್ಟು ಬಿಸಿಲು ಬಿದ್ದಿರುವದೆಂಬುವದು ನಿನಗೆ ಇನ್ನೂ ಗೊತ್ತಿಲ್ಲೇ? ಮೂ

ರ್ಖಳೇ, ನೀನು ಎಲ್ಲ ಲಜ್ಜೆಯನ್ನು ತೊರೆದಂತೆ ಕಾಣುತ್ತದೆ. ಏಳು! ನೀಚಳೇ ಏಳು!!" ಎಂದಳು.

ಯಮುನೆಗೆ ಪ್ರಾಣಾಂತಿಕ ವೇದನೆಯಾಗಿತ್ತು. ಅವಳ ಸರ್ವಾಂಗವು ವೇದನೆಯಿಂದ ನರಳುತ್ತಿತ್ತು. ತಲೆಯು ಒಡೆದದ್ದರಿಂದ ಮೈಮೇಲೆ ರಕ್ತಪ್ರವಾಹವು ಹರಿಯುತ್ತಿತ್ತು. ಶರೀರದಲ್ಲಿ ಎಷ್ಟೋ ರಕ್ತವು ಕಡಿಮೆಯಾದ್ದರಿಂದ ಅವಳು ಅತ್ಯಂತ ನಿಪ್ರಾಣಿಯಾಗಿದ್ದಳು. ಅದರಲ್ಲಿ ಮತ್ತೆ ರಾಧಾಬಾಯಿಯು ಹೊಡೆದದ್ದರಿಂದ, ಯಮುನೆಗೆ ತೀರ ಕಸವಿಸಿಯಾಯಿತು. ಆದರೂ ಅವಳು ಬಳ್ಳೇ ಕಷ್ಟದಿಂದ ಎದ್ದು ಕುಳಿತು, ತನ್ನ ಅತ್ತೆಯ ಪಾದಗಳನ್ನು ಗಟ್ಟಿಯಾಗಿ ಹಿಡಿದು, ಅತ್ಯಂತ ದಯಾಜನಕ ಸ್ವರದಿಂದ ಅಂದದ್ದೇನಂದರೆ:—"ಅತ್ತೆಯವರೇ, ನಿರಪರಾಧಳಾದ ನನ್ನನ್ನು ಸುಮ್ಮನೆ ಗೋಳಾಡಿಸಬೇಡಿರಿ. ನನ್ನನ್ನು ಗೋಳಾಡಿಸುವದರಿಂದ ನಿಮಗಾದರೂ ಆಗುವ ಲಾಭವೇನು? ನಾನಾದ್ದರಿಂದಲೇ ನಿಮ್ಮ ಕಾಟವನ್ನು ತಾಳಿಕೊಂಡಿರುವೆನು. ಈ ಪ್ರಕಾರ ಮೇಲೆ ಮೇಲೆ ನನ್ನನ್ನು ಬಾಧಿಸದೆ, ಒಮ್ಮೆಲೇ ಈ ಜಗತ್ತಿನಲ್ಲಿ ಇಲ್ಲದಂತೆ ಮಾಡಿದರೆ ತಮ್ಮ ಉಪಕಾರವು ನನ್ನ ಮೇಲೆ ಬಹಳವಾಗುತ್ತದೆ. ಈ ಪ್ರಕಾರ ಮಾಡಿದ ನಿಮ್ಮ ಉಪಕಾರವನ್ನು ಈ ಜನ್ಮದಲ್ಲಿ ತೀರಿಸದಿದ್ದರೂ, ಮುಂದಿನ ಜನ್ಮದಲ್ಲಿಯಾದರೂ ತೀರಿಸುವೆನು" ಎಂದಳು.

ಕಲ್ಲು ಅಂದರೆ ರಾಧಾಬಾಯಿಯೇ ಕಲ್ಲು. ವಜ್ರವು ಕಾಠಿಣ್ಯವಾದ ಪದಾರ್ಥವಲ್ಲ. ನಿಜವಾದ ಕಾಠಿಣ್ಯವಾದ ವಸ್ತುವೆಂದರೆ ರಾಧಾಬಾಯಿಯೇ ಸರಿ. ಯಮುನೆಯ ದೀನೋಕ್ತಿಗಳಿಂದ ಮತ್ತಿಷ್ಟು ರಾಧಾಬಾಯಿಗೆ ಕೋಪವು ತಲೆಗೇರಿತು. ಅವಳು ಯಮುನೆಯ ಎರಡೂ ಗಲ್ಲಗಳನ್ನು ಎರಡು ಸಾರೆ ತಟ್ಟಿ, ಅಂದದ್ದೇನಂದರೆ:—"ಅಹಹ! ಯಮುನೇ ಏನು ನಿನ್ನ ಸುವಿಚಾರವು!! ನಿನಗೆ ಒಮ್ಮೆಲೇ ಇಷ್ಟು ಜೀವದ ಮೇಲೆ ವೈರಾಗ್ಯವು ಉತ್ಪನ್ನವಾಗಲಿಕ್ಕೆ ಒದಗಿದ ಅಂಥ ಮಹಾ ದುಃಖವಾದರೂ ಯಾವ್ದು? ಸವಿಸವಿಯಾದ ಅನ್ನವನ್ನು ಉಣ್ಣಲಿಕ್ಕೂ, ಚಪ್ಪರ ಪಲಂಗದ ಮೇಲೆ ಮೊಳದಪ್ಪವಾದ ತಡಿಯನ್ನು ಹಾಸಿಕೊಂಡು ಮಲಗಲಿಕ್ಕೂ, ಕುದುರೆ, ಮೋಟಾರಗಳನ್ನು ಹತ್ತಿಕೊಂಡು ಓಡ್ಯಾಡಲಿಕೂ ನಿನಗೆ ಅನುಕೂಲವಿರಲು ನೀನು ಜೀವಕ್ಕೆ ಬೇಸರವಾದಿಯಾಕೆ? ನೀನು ಮನಬಂದಂತೆ ವೇಶ್ಯಳ ಹಾಗೆ ತಿರು

ಗಾಡಲಿಕ್ಕೆ ಹವಣಿಸುವಂತೆ ಕಾಣುತ್ತದೆ. ಆದರೆ ಈ ನಮ್ಮ ದೊಡ್ಡ ಮನೆತನದಲ್ಲಿ ಆ ಪದ್ಧತಿಯು ಯೋಗ್ಯವಾಗಲಾರದು" ಎಂದಳು.

ಯಮುನೆಯು ತನ್ನ ಎಲ್ಲ ಶಕ್ತಿಯನ್ನು ಒಂದು ಮಾಡಿ ಬಳ್ಳೇ ಕಷ್ಟದಿಂದ ಶಿಷ್ಟಾಚಾರದಂತೆ ಎದ್ದು ನಿಂತಿದ್ದಳು. ಅವಳು ರಾಕ್ಷಸಿಯಾದ ರಾಧಾಬಾಯಿಯ ಹೊಡತಗಳಿಂದ ತಿರುಗಿ ಹೊತ್ತುಕೊಂಡು ನೆಲಕ್ಕೆ ಬಿದ್ದಳು. ವಾಚಕರೇ, ಎಷ್ಟು ಯಮುನೆಯ ಕಷ್ಟ! ಎಷ್ಟು ಅವಳ ವಿಲಕ್ಷಣ ಯಾತನೆ!! ಎಷ್ಟು ಅವಳ ಭಯಂಕರ ಸ್ಥಿತಿಯು. ಅವಳ ಸರ್ವಾಂಗಕ್ಕೆ ಸ್ವಲ್ಪ ಕೈ ಮುಟ್ಟಿದರೆ ಅವಳಿಗೆ ಬಳ್ಳೇ ವ್ಯಥೆಯಾಗುತ್ತಿತ್ತು. ಇಂಥದರಲ್ಲಿ ರಾಧಾಬಾಯಿಯು ಹೊಡೆದದ್ದರಿಂದ, ಅವಳಿಗೆ ಪ್ರಾಣಾಂತಿಕ ವೇದನೆಯಾಗಿ ಅವಳು ಒಂದು ನಿಟ್ಟುಸುರನ್ನು ಬಿಟ್ಟು ಅಳಲಿಕ್ಕೆ ಆರಂಭಿಸಿದಳು. ಅವಳ ಕಣ್ಣುಗಳಿಂದ ಕಣ್ಣೀರು ಸುರಿಯಲಾರಂಭಿಸಿದವು. ಅವಳು ದೀನ ಸ್ವರದಿಂದ:—"ಅತ್ತೆಯರೇ, ನಿಮ್ಮ ಪಾದಗಳಿಗೆ ಬಿದ್ದು ಬೇಡಿಕೊಳ್ಳುತ್ತೇನೆ. ನನಗೆ ಸುಮ್ಮನೆ ಗೋಳಾಡಿಸಬೇಡಿರಿ. ನನ್ನಿಂದ ಅಪರಾಧವೇನಾದರೂ ಆಗಿದ್ದರೆ, ಕ್ಷಮಿಸಿ ನನ್ನನ್ನು ಉದ್ಧರಿಸಿರಿ. ನೀವೇ ನನ್ನನ್ನು ಹೀಗೆ ಗೋಳಾಡಿಸಿದರೆ, ನನ್ನನ್ನು ಸಂರಕ್ಷಿಸುವವರಾದರೂ ಯಾರು? ನನ್ನ ಮೊರೆಯನ್ನು ಕೇಳುವವರಾದರೂ ಯಾರು? ಸರ್ವಕ್ಕೂ ನೀವೇ ನನ್ನ ಆಧಾರಸ್ತಂಭಿಗಳು. ಹಡೆದ ತಾಯಿಯನ್ನಗಲಿ ಬಂದ ನನಗೆ ನೀವೇ ಜನನಿಯರು" ಎಂದಳು.

ಯಮುನೆಯ ಅಂತಃಕರಣದಿಂದ ಹೊರಟ ಶಬ್ದಗಳಿಂದ ಕೋಣೆಯಲ್ಲಿದ್ದ ಗೋಡೆಯ ಕಲ್ಲುಗಳು ದ್ರವಿಸಿದವು; ಆದರೆ ರಾಧಾಬಾಯಿಯ ಮನಸ್ಸು ಸ್ವಲ್ಪಾದರೂ ಕರಗಲಿಲ್ಲ. ಅವಳು ಮನಸ್ಸಿಗೆ ಬಂದಂತೆ ಯಮುನೆಯನ್ನು ಬೈಯ್ಯುತ್ತ:—"ಯಮುನೇ, ನಿನ್ನ ಸಂರಕ್ಷಣೆ ಮಾಡಲಿಕ್ಕೆ ನಾನು ಯಾರು? ನಾನು ನಿನ್ನ ಜನನಿಯಾಗಲಿಕ್ಕೇನು ಸಂಬಂಧ? ನಿನ್ನ ತಿಂಕ ತಂದೆತಾಯಿಗಳಿಗೆ ನಿನ್ನನ್ನು ಸಂರಕ್ಷಿಸಲಿಕ್ಕೆ ಅವರಿಗೇನು ಕಡಿಮೆಯಾಗಿದೆ. ಆಹಹ! ಏನು ನಮಗೆ ನೀವು ಹಾಳಾದ ಬೀಗರು ದೊರೆತಿರಿ!! ಎಂದೂ ನಿಮ್ಮ ಮನೆಯಲ್ಲಿ ಹಬ್ಬ ಮಾಡುವದಿಲ್ಲ, ವಾರ ಮಾಡುವದಿಲ್ಲ, ಎಂದೂ ಏನೂ ಮಾಡುವಂತಿಲ್ಲ. ಬಂಗಾರದಂಥ ಅಳಿಯನನ್ನು ಲಗ್ನವಾದಂದಿನಿಂದ ಎಂದಾದರೂ

ನಿನ್ನ ತಂದೆ-ತಾಯಿಗಳು ಊಟಕ್ಕೆ ಕರಕೊಂಡು ಹೋಗಿದ್ದರೆ ಅವರಿಗೆ ಆಣೆ. ಭಿಲ್ಲ-ಕೊರಜರ ಸ್ಥಿತಿಯು ನಿಮಗಿಂತಲೂ ಎಷ್ಟೋ ಮಟ್ಟಿಗೆ ಒಳ್ಳೇದು. ಅವರು ಸ್ವಲ್ಪಾದರೂ ತಮ್ಮ ಬೀಗರಿಗೆ ಮರ್ಯಾದೆ ಮಾಡುತ್ತಾರೆ, ಹಬ್ಬ ಮಾಡುತ್ತಾರೆ, ವಾರ ಮಾಡುತ್ತಾರೆ. ಆದರೆ ನಿನ್ನ ತಾಯಿತಂದೆಗಳು ಶುದ್ಧ ಕುಂಬಾರ ಕತ್ತೆಗಳಂತಿದ್ದಾರೆ. ಅವರನ್ನು ನೋಡಿದ ಕೂಡಲೆ ನನ್ನ ಮೈಯೆಲ್ಲ ಉರಿಯುತ್ತದೆ. ನಮಗಾದರೂ ಇರುವವನು ಒಬ್ಬನೇ ಒಬ್ಬ ಮಗನೆಂದೂ, ನಮ್ಮ ಬೀಗರಾದರೂ ಬಡವರಿರುವರೆಂದೂ ನೆನಿಸಿ, ನಿನ್ನ ತಂದೆ-ತಾಯಿಗಳಿಗೆ ಒಂದು ಪೈ ಖರ್ಚಾಗದಂತೆ ನಾವೇ ಬೇಕಾದಷ್ಟು ದುಡ್ಡು ಖರ್ಚು ಮಾಡಿದೆವು. ಆದರೆ ಅದರಲ್ಲಿ ನಮಗೆ ಸ್ವಲ್ಪಾದರೂ ಮರ್ಯಾದೆಯು ಬರಲಿಲ್ಲ. ನಿನ್ನ ತಂದೆ-ತಾಯಿಗಳು ಮರ್ಯಾದಾರ್ಥವಾಗಿ ನನಗೆ ಒಂದು ಶೀರೆಯನ್ನು ಉಡಿಸದಿದ್ದರೂ ಚಿಂತೆಯಿಲ್ಲ. ಗೇಣು ಕುಬ್ಬಸವನ್ನಾದರೂ ಮಾಡಲಿಲ್ಲ. ಇಂಥ ತಿರಕರೆಂಬುವದೂ-ಮಾನಗೇಡಿಗಳೆಂಬುವದೂ ನನಗೆ ಮೊದಲೇ ಗೊತ್ತಿದ್ದರೆ, ನಿಮ್ಮೊಡನೆ ಎಂದೂ ನಾನು ಬೀಗತನ ಮಾಡಗೊಡಿಸುತ್ತಿದ್ದಿಲ್ಲ. ಮುಖ್ಯವಾಗಿ ನಿನ್ನ ಹಣೆಯಲ್ಲಿ ಒಳ್ಳೇದು ಬರೆದಿತ್ತು. ಅದರಿಂದಲೇ ನಿನಗೆ ಇಂಥ ಶ್ರೀಮಂತರ ಮನೆಯು ಸಿಕ್ಕಿರುವದು. ಹೀಗಿದ್ದರೂ ನೀನು ಆ ಬಗ್ಗೆ ಸ್ವಲ್ಪಾದರೂ ಉಪಕಾರ ಮಾನಿಸುವಂತಿಲ್ಲ. ಬಡವರ ಮನೆಗೆ ಬಿದ್ದಿದ್ದರೆ ನಿನಗೆ ಗೊತ್ತಾಗುತ್ತಿತ್ತು" ಎಂದಳು.

ಯಮುನೆಯು ನಿರ್ಮಲವಾದ ಮನಸ್ಸಿನಿಂದ ನುಡಿದಳೇನಂದರೆ:— "ಶ್ವಶ್ರೂದೇವಿಯರೇ, ಐಶ್ವರ್ಯವು ಮನುಷ್ಯನ ಸುಖ-ಸಮಾಧಾನಗಳಿಗೆ ಕಾರಣವಾದದ್ದಲ್ಲ. ಮುರಕಹರಕ ಚಪ್ಪರದಲ್ಲಿ ವಾಸಮಾಡುವಂಥ, ಕಡಕಲರೊಟ್ಟಿ, ಕಾರದ ಹಿಂಡಿಯನ್ನು ತಿನ್ನುವಂಥ, ಚಿನ್ನಾಚಿದರಿ ಅರಿವೆಯನ್ನು ಸುತ್ತಿಕೊಂಡಂಥ ಕೊರಚ-ಕುಂಚೀ ಜೋಗಿಯರು ಮೊದಲಾದವರಿಗೆ ನಿಮ್ಮಷ್ಟು ಸಂಪತ್ತು ಎಲ್ಲಿ ಇರುತ್ತದೆ? ಆದರೂ ನಿಶ್ಚಯವಾಗಿ ಅವರು ಸುಖ-ಸಮಾಧಾನಗಳಿಂದ ಕಾಲಹರಣ ಮಾಡುತ್ತಾರೆ. ಅವರ ಮುರಕ ಚಪ್ಪರದಲ್ಲಿ ಎಷ್ಟು ಸುಖವದೆಯೋ, ಅದರ ಒಂದು ಲಕ್ಷಾಂಶವಾದರೂ ನಿಮ್ಮ ಭವ್ಯವಾದ ಮಂದಿರದಲ್ಲಿ ಕಾಣಿಸುವದಿಲ್ಲ! ಯಾವಾಗಲೂ ಕಣ್ಣಿಗೆ

ಮಾತ್ರ ಮನೋಹರವಾಗಿ ಕಾಣುವ ನಿಮ್ಮ ಮನೆಯಲ್ಲಿ ಕೆಟ್ಟ ಶಬ್ದಗಳ ಉಚ್ಚಾರಣೆಯೂ, ಕಲಹದ ರಾಶಿಯೂ, ಪರನಿಂದ್ಯೋಕ್ತಿಯೂ ತುಂಬಿ ತುಳುಕುತ್ತವೆ. ನಿಮ್ಮ ಇಷ್ಟು ಶ್ರೀಮಂತಿಕೆಯಿದ್ದರೂ, ಅದರಿಂದ ನನಗೆ ತಿಲಾಂಶವಾದರೂ ಸುಖವಿಲ್ಲ. ನಾನು ಒಂದು ವೇಳೆ ಬಡವರ ಪದರಿನಲ್ಲಿ ಬಿದ್ದಿದ್ದರೆ, ನನಗೆ ಸುಖವಾಗುತ್ತಿದ್ದಿಲ್ಲವೆಂದನ್ನುವದು ಯಾತರ ಮೇಲಿಂದ? ಅಲ್ಲಿ ಆದರೆ ಹೊಟ್ಟೆತುಂಬುವಷ್ಟು ಕೂಳಿನ ಸಲುವಾಗಿಯೂ, ಮೈಮುಚ್ಚು ವಷ್ಟು ಬಟ್ಟೆಯ ಸಲುವಾಗಿಯೂ ಅಲ್ಪಸ್ವಲ್ಪ ತೊಂದರೆಯಾಗುತ್ತಿತ್ತೇ ಹೊ ರತು ಸುಖ-ಸಮಾಧಾನಗಳಿಗೆ ಎಂದೂ ತೊಂದರೆಯಾಗುತ್ತಿದ್ದಿಲ್ಲ. ದರಿದ್ರ ರ ಮನೆಯಲ್ಲಿ ಸುಖವಿಲ್ಲೆಂದು ನಿಮ್ಮ ಕಲ್ಪನೆಯಿದ್ದರೆ, ನಿಮ್ಮ ಕಲ್ಪನೆಯಂತೆ ಪ್ರತಿದಿವಸ ನನಗೆ ದುಃಖಸಾಧನವಾದ ಮೆಣಸಿನಕಾಯಿಯ ಹಿಂಡಿಯನ್ನು ಹಚ್ಚಿ ತಂಗುಳ ರಾಗಿಯ ರೊಟ್ಟಿಯನ್ನು ತಿನ್ನಲಿಕ್ಕೆ ಕೊಡಿರಿ. ಹರಕಪರಕ ಶೀರೆಯನ್ನು ಉಡಲಿಕ್ಕೆ ಕೊಡಿರಿ. ಮಂಗಳಸೂತ್ರದ ಹೊರತು ಇತರ ದಾಗೀನುಗಳನ್ನೆಲ್ಲ ತಕ್ಕೊಳ್ಳಿರಿ. ನನ್ನನ್ನು ಹೊಲಗೆಲಸ ಮಾಡಲಿಕ್ಕೆ ಹಚ್ಚಿ ರಿ. ಆದರೆ ನನಗೆ ನಿಂದ್ಯೋಕ್ತಿಗಳನ್ನು ಮಾತ್ರ ಆಡಬೇಡಿರಿ, ಜನಾವರ ದಂತೆ ನನ್ನನ್ನು ಹೊಡೆಯಬೇಡಿರಿ, ನನ್ನ ಸಂಗಡ ನನ್ನ ತಂದೆತಾಯಿಗಳ ನ್ನು ನಿಂದಿಸಬೇಡಿರಿ; ಈ ಪ್ರಕಾರದ ವರ್ತನವು ನಿಮ್ಮ ಶ್ರೀಮಂತಿಕೆಗೆ ಎಳ್ಳ ಷ್ಟಾದರೂ ಒಪ್ಪುವದಿಲ್ಲ. ಈ ವರ್ತನದಿಂದ ನನಗೂ ನಿಮಗೂ ಕೂಡೇ ಸುಖವಿಲ್ಲ. ಜನರು ನಿಮಗೆ ಹೆಸರಿಡುತ್ತಾರೆ. ಯಮುನೆಯು ಇಷ್ಟು ದೊಡ್ಡ ವಳಾದರೂ ಇನ್ನೂ ಹಾಗೆಯೇ ಇರುವಳೆಂದು ಜನರು ಗುಜುಗುಜು ಮಾ ಡುತ್ತಾರೆ. ಪತಿಪ್ರಭುಗಳ ವರ್ತನವನ್ನು ಕಂಡು ಪ್ರತಿಯೊಬ್ಬರು ನಗು ತ್ತಾರೆ. ಇಂಥ ದುರವಸ್ಥೆಯಲ್ಲಿ ನಾನು ಜೀವಂತಳಾಗಿ ಇರುವದಕ್ಕಿಂತ ನನಗೆ ಮರಣವು ಆಗುವದು ಯೋಗ್ಯವಾಗಿ ಕಾಣುತ್ತದೆ" ಎಂದಳು.

ಅತ್ತೆಯ ಮನಸ್ಸಿಗೆ ಸ್ವಲ್ಪ ಹತ್ತಿ ಅವಳ ವರ್ತನದಲ್ಲಿ ಸ್ವಲ್ಪಾದರೂ ಹೆಚ್ಚುಕಡಿಮೆಯಾಗುವದಕ್ಕಾಗಿಯೂ, ಅಂತಃಕರಣದ ತಲ್ಲಣವನ್ನು ಬೈಲಿ ಗೆಳೆಯುವದಕ್ಕಾಗಿಯೂ, ಯಮುನೆಯು ಒಳ್ಳೇ ಧೈರ್ಯದಿಂದ ಇಷ್ಟು ಮಾ ತಾಡಿದಳು. ಆದರೆ ಯಮುನೆಯ ಮಾತುಗಳಿಂದ ರಾಧಾಬಾಯಿಯ ತಿಳು ವಳಿಕೆಯಲ್ಲಿ ಸ್ವಲ್ಪಾದರೂ ಹೆಚ್ಚುಕಡಿಮೆಯಾಗಲಿಲ್ಲ. ಯಮುನೆಯು ಪ್ರತಿ

ಯೊಂದು ಶಬ್ದಗಳು ರಾಧಾಬಾಯಿಯ ಕ್ರೋಧಾಗ್ನಿಯ ಮೇಲೆ ಕಲ್ಲೆಣ್ಣೆಯ ನ್ನು ಚಲ್ಲಿದಂತಾದವು. ಅವಳು ಹಲ್ಲು ಕಡಿಯುತ್ತ ಯಮುನೆಯನ್ನು ಕುರಿ ತು:–"ಕತ್ತೆಯ ಮಗಳೇ, ಯಾರಿಗೆ ನಿನ್ನ ಬ್ರಹ್ಮಜ್ಞಾನವನ್ನು ಹೇಳುತ್ತೀ; ಸವತಿಯ ಮಗಳೇ, ಎಂದು ನೀನು ಸಾಯುತ್ತೀಯೋ ಏನೋ" ಎಂದನ್ನು ತ್ತ ಧಡಧಡ ಕಾಲಿನ ಸಪ್ಪಳವನ್ನು ಮಾಡುತ್ತ ಕೆಳಗೆ ಹೊರಟು ಹೋದಳು. ಅನಾಥ ಯಮುನೆಯು ಆಸನ್ನಮರಣಳಾಗಿ, ಮೃತ್ಯುವಿನ ಮಾರ್ಗವನ್ನು ನಿರೀಕ್ಷಿಸುತ್ತ ಬಿದ್ದುಕೊಂಡಳು!

## ೯ನೆಯ ಪ್ರಕರಣ—ಮಠ.

ಅವಂತೀಪುರದಿಂದ ಒಂದು–ಒಂದೂಕಾಲ ಹರದಾರಿಯ ಮೇಲೆ ದಿಗಂಬರ ಮಠವಿತ್ತು. ಈಮಠವು ದಟ್ಟವಾದ ಅರಣ್ಯದಲ್ಲಿ ಒಂದು ಗುಡ್ಡದ ತುದಿಯ ಮೇಲಿತ್ತು. ಈ ಮಠಕ್ಕೆ ದಿಗಂಬರ ಮಠವೆಂಬ ಹೆಸರುಬೀಳುವ ಕಾರಣವೇನಂದರೆ:— ಪೂರ್ವದಲ್ಲಿ ಆ ಅಡವಿಯಲ್ಲಿ ಒಬ್ಬ ದಿಗಂಬರ ಸಾಧುವು ಇರುತ್ತಿದ್ದನು. ಅವನು ಬಹಳ ಕಷ್ಟದಿಂದ ಅಲ್ಲಿ ಆ ಮಠವನ್ನು ಕಟ್ಟಿಸಿದ್ದನು. ಸಾಧುವಿನ ದಿಗಂಬರಾವಸ್ಥೆಯಿಂದ ಮಠಕ್ಕೆ ದಿಗಂಬರಸಾಧು ಮಠವೆಂಬ ಹೆಸರು ಬಿದ್ದಿತ್ತು. ಬರಬರುತ್ತ 'ಸಾಧು' ಶಬ್ದವು ಲೋಪವಾಗಿ 'ದಿಗಂಬರ ಮಠ' ಎಂಬ ಹೆಸರಿನಿಂದಲೇ ಅದು ಪ್ರಸಿದ್ಧವಾಯಿತು. ಮಠದ ಸಮೀಪದಲ್ಲಿ ಒಂದು ಹಳ್ಳವು ಹನ್ನೆರಡು ತಿಂಗಳೂ ಝುಳಝುಳ ಹರಿಯು ವದು. ಆ ಹಳ್ಳದ ನೀರು ನಿರ್ಮಲವಾಗಿಯೂ, ಪಾಚಕವಾಗಿಯೂ ಇರು ವವು. ದಿಗಂಬರ ಸಾಧುವಿನ ಕಾಲದಲ್ಲಿ ಮಠದ ಎದುರಿಗೆ ಒಂದು ಉತ್ಕೃಷ್ಟವಾದ ತೋಟವಿತ್ತು. ಅದರಲ್ಲಿ ಸಣ್ಣದೊಡ್ಡ ಹೂಗಿಡಗಳೂ, ಹಣ್ಣಿನ ಗಿಡಗಳೂ, ಹೂವಿನ ಬಳ್ಳಿಗಳೂ ಅಸಂಖ್ಯವಾಗಿದ್ದವು. ಮಠದಲ್ಲಿ ದತ್ತಾತ್ರಯ ದೇವರ ಸುಂದರ ಮೂರ್ತಿಯಿದ್ದು, ಆ ಮೂರ್ತಿಯ ದರ್ಶನಕ್ಕೆ ಸಾವಿರಾರು ಜನರು ನಿತ್ಯಶಃ ಬರುತ್ತಿದ್ದರು. ಸಾಧುವು ಮಠದ ವ್ಯವಸ್ಥೆಯನ್ನು

ಚನ್ನಾಗಿ ಇಟ್ಟಿದ್ದನು. ಆ ಮಹಾತ್ಮನು ಪ್ರತಿವರ್ಷ ದತ್ತಾತ್ರಯ ದೇವರ
ಉತ್ಸವವನ್ನು ಮಾಡಿಸುತ್ತಿದ್ದನು. ಅತಿಥಿಗಳೂ, ಅಭ್ಯಾಗತರೂ, ಸಾಧು
ಸಂತರೂ ಮೊದಲಾಗಿ ಬೇಕಾದವರು ಮಠಕ್ಕೆ ಬಂದರೂ, ಆ ಸಾಧುವು
ಅವರ ಸಂಬಂಧವಾಗಿ ತಕ್ಕ ವ್ಯವಸ್ಥೆಯನ್ನು ಮಾಡುತ್ತಿದ್ದನು. ಆ ಮಹಾ
ತ್ಮನೇ ಸ್ವತಃ ಬಂದವರ ಆದರಾತಿಥ್ಯವನ್ನು ಅಭೇದವಾಗಿ ಮಾಡುತ್ತಿದ್ದನು.
ದಿಗಂಬರ ಸಾಧುವಿನ ಪವಿತ್ರಾಚರಣೆಯಿಂದ ಸುತ್ತುಮುತ್ತು ೧೦-೧೫ ಹರ
ದಾರಿತನಕ ಆಮಠದ ಪ್ರಭಾವವು ಹರಡಿತು. ಪ್ರವಾಸಿಕರು ಎರಡನೆ
ಕಡೆಯ ಸುಲಭ ಮಾರ್ಗಗಳನ್ನು ಬಿಟ್ಟು, ಮಠದ ಮೇಲೆ ಹಾಯ್ದು ಹೋಗ
ಹತ್ತಿದರು. ಮಠದಲ್ಲಿ ಯಾವಾಗಲೂ ಜನಸಂಚಯುವಿರುತ್ತಿತ್ತು. ಎಷ್ಟೋ
ಶ್ರೀಮಂತರು ಆ ಮಠಕ್ಕೆ ಅಮೌಲ್ಯ ಕಿಮ್ಮತ್ತಿನ ದೇಣಿಗೆಯನ್ನು ಕೊಟ್ಟದ್ದ
ರಿಂದ, ಅದಕ್ಕೆ ರಮ್ಯಸ್ವರೂಪವು ಪ್ರಾಪ್ತವಾಗಿತ್ತು. ಆದರೆ ಆ ಸುಸ್ಥಿತಿಯು
ಬಹು ದಿವಸ ಉಳಿಯಲಿಲ್ಲ. ದಿಗಂಬರ ಸಾಧುವು ಜೀವಂತವಿರುವತನಕ
ಆ ಮಠದ ವ್ಯವಸ್ಥೆಯು ನೆಟ್ಟಗಿತ್ತು. ದಿಗಂಬರ ಸಾಧುವು ಮೃತಪಟ್ಟ
ಕೂಡಲೆ ಮಠದಲ್ಲಿ ಅವ್ಯವಸ್ಥೆಯು ಪ್ರಾರಂಭವಾಯಿತು. ಮಠದಲ್ಲಿ ಅವ್ಯವ
ಸ್ಥೆಯಾದ ಕೂಡಲೆ ಜನರೂ ಮಠದ ಕಡೆಗೆ ದುರ್ಲಕ್ಷ್ಯ ಮಾಡಹತ್ತಿದರು.
ದಿಗಂಬರ ಸಾಧುವು ನಿರ್ವ್ಯಸನಿಯಿದ್ದು, ಆತನ ಆಚರಣೆಯು ಪವಿತ್ರವಾ
ಗಿತ್ತು; ಆದರೆ ಅವನ ಶಿಷ್ಯರು ದುರ್ವ್ಯಸನಿಗಳೂ, ಮದಾಂಧರೂ, ಲೋಭಿ
ಗಳೂ ಆಗಿದ್ದರು. ದಿಗಂಬರ ಸಾಧುವಿನ ಮರಣವಾದ ಕೂಡಲೆ ಮಠದಲ್ಲಿ
ಗಾಂಜಿಯ ಹೊಗೆಯು "ಗಿರಣಿಯೊಳಗಿನ ಪಂಪಿನಂತೆ" ಬುಸುಬುಸು
ಹೊರಡಹತ್ತಿತು. ಕ್ರಮೇಣ ಮಠದ ಲೌಕಿಕ ಸ್ಥಿತಿಯು ಲೋಪವಾಗಿ ರಾ
ಕ್ಷಸೀ ಸ್ಥಿತಿಯು ಪ್ರಾಪ್ತವಾದ್ದರಿಂದ, ಮಠದ ಮೇಲಿಂದ ಹಾಯ್ದು ಹೋಗ
ಲಿಕ್ಕೆ ಜನರು ಭೀತರಾದರು. ಈವೇಳೆಯಲ್ಲಿ ಒಬ್ಬ ಡೋಂಗೀ ಸನ್ಯಾಸಿಯೇ
ಮಠಕ್ಕೆ ಅಧಿಪತಿಯಾಗಿದ್ದನು. ಡೋಂಗೀ ಸನ್ಯಾಸಿಯ ಕೈಯಲ್ಲಿ ಮಠದ
ಸ್ವಾಮಿತ್ವವು ಬಂದ ಕೂಡಲೆ ಅವಂತೀಪುರದ ಎಷ್ಟೋ ಪುಂಡಜನರಿಗೆ ಪರ
ಮಾನಂದವಾಯಿತು; ಇಚ್ಛಾನುಸಾರ ಅಸನ್ವಿತಕೃತ್ಯವನ್ನು ಮಾಡಲಿಕ್ಕೆ ಅವ
ರಿಗೆ ಮಠವು ಒಳ್ಳೇ ಅನುಕೂಲವಾಯಿತು; ದುರ್ವ್ಯಸನದ ಜನರಿಗೆ ಒಳ್ಳೇ
ಸೌಲಭ್ಯವಾಯಿತು; ತುಡುಗ, ತುಂಟ, ಘಟಂಗ ಜನರಿಗೆ ಒಳ್ಳೇ ಆಶ್ರಯ

ಸ್ಥಾನವು ಸಿಕ್ಕಿತು. ವಿಶ್ವನಾಥರಾಯನ ಚಿರಂಜೀವಿಯಾದ ಧೋಂಡೀರಾಜನೂ, ಬೇಗ ಮಾಧವರಾಯನೂ ಯಾವಾಗಲೂ ಆಮಠದಲ್ಲಿ ಇರಹತ್ತಿದರು.

ಪೂರ್ವದಲ್ಲಿ ಮಠದ ವ್ಯವಸ್ಥೆಯು ಹೇಗಿದ್ದಿತೆಂಬುವದನ್ನು ವಾಚಕರಿಗೆ ನಿವೇದನ ಮಾಡಿಕೊಂಡಿದೆ. ಈಗ ಮಠದ ಮಧ್ಯಭಾಗದಲ್ಲಿ ಒಂದು ಮಣ್ಣಿನ ದೊಡ್ಡ ಕಟ್ಟೆಯಿತ್ತು. ಆದರ ಮೇಲೆ ಡೋಂಗೀ ಸನ್ಯಾಸಿಯು ಯಾವಾಗಲೂ ಮಲಗಿಯೇ ಇರುತ್ತಿದ್ದನು. ಯಾರ ಸಂಗಡಲೂ ಮಾತಾಡುವದಾದರೆ, ಆ ಸನ್ಯಾಸಿಯು ಆಕಟ್ಟೆಯ ಮೇಲೇ ಕುಳಿತು ಮಾತಾಡುತ್ತಿದ್ದನು. ಅವನ ಹತ್ತರ ಒಂದು ದೊಡ್ಡ ಚಿಲಿಮೆಯೂ, ನೀರಿನಿಂದ ತುಂಬಿದ ಒಂದು ಕಲ್ಲಿನ ಬಾನಿಯೂ, ಗಾಂಜಿಯ ಒಂದು ದೊಡ್ಡ ಪೆಟ್ಟಿಗೆಯೂ ಇರುತ್ತಿದ್ದವು.

ಮೊದಲು ಮಠದ ಎದುರಿಗೆ ಶೋಭಾಯಮಾನವಾಗಿದ್ದ ಫಲವೃಕ್ಷ, ಪುಷ್ಪಲತೆ ಮೊದಲಾದವುಗಳು ಲೋಪವಾಗಿ, ಗಾಂಜಿಯ ಗಿಡಗಳು ಸಂದಟತವಾಗಿದ್ದವು. ಮಠದ ಸರ್ವಸಂಪತ್ತು ನಾಶವಾಯಿತು. ಡೋಂಗೀ ಸನ್ಯಾಸಿಯು ಮಠದಲ್ಲಿದ್ದ ನಾನಾತರದ ಪಾತ್ರೆಗಳನ್ನೂ, ಪುಸ್ತಕಗಳನ್ನೂ, ಮೂರ್ತಿಯ ಮೈಮೇಲಿನ ಬೆಳ್ಳಿ-ಬಂಗಾರದ ಒಡವೆಗಳನ್ನೂ ದುರ್ವ್ಯಸನದ ಸಲುವಾಗಿ ಮಾರಿಬಿಟ್ಟನು. ಧೋಂಡೀರಾಜನಂಥ ಎಷ್ಟೋ ಸಧನರು ಶಿಷ್ಯರಾದ್ದರಿಂದ, ಸನ್ಯಾಸಿಯ ವಿನೋದಕ್ಕೆ ತೊಂದರೆಯಾಗಲಿಲ್ಲ.

ಇಂದು ಸನ್ಯಾಸಿಯ ಮಠದಲ್ಲಿ ಒಳ್ಳೇ ಗಡಬಡಿಯು ಪ್ರಾರಂಭವಾಗಿತ್ತು. ಸನ್ಯಾಸಿಯ ಎದುರಿಗೆ ನಾಲ್ವರು ಗಾಂಜಿಯನ್ನು ಸೇದುತ್ತ ಕುಳಿತಿದ್ದರು. ಆನಾಲ್ವರಲ್ಲಿ ವಾಚಕರಿಗೆ ಪರಿಚಯವಿರುವಂಥ ಧೋಂಡೀರಾಜನೂ ಮಾಧವರಾಯನೂ ಸಮಾವೇಶವಾಗಿದ್ದರು. ಇನ್ನಿಬ್ಬರು ಸನ್ಯಾಸಿಯ ಶಿಷ್ಯರಿದ್ದರು. ಗಾಂಜಿಯ ಚಿಲಿಮೆಯನ್ನು ಸೇದಿ ತಕ್ಕಿಗಡುತರ ಹೊಗೆ ಬಿಡುತ್ತ ಧೋಂಡೀರಾಜನು ಕೆಳಗೆ ಬರೆದಂತೆ ಮಾತಾಡಿದನು.

ಧೋಂಡೀರಾಜ:— "ಗುರುಪ್ರಭುವೇ, ಏನು ಹೇಳಲಿ! ನಾಲ್ಕುದಿವಸದಿಂದ ಒಂದೇಸವನೆ ಪ್ರಯತ್ನಮಾಡುತ್ತೇನೆ; ಆದರೆ ಅದರಿಂದ ಏನೂ ಫಲವಾಗಲೊಲ್ಲದು. ಆವಳಂತೂ ತನ್ನನ್ನು ಯಾರಾದರೂ ಮುಟ್ಟಿದರೆ ತಲೆಯನ್ನು ಒಡಕೊಂಡು ಪ್ರಾಣಕೊಡುತ್ತೇನೆಂದು ಹೇಳುತ್ತಾಳೆ."

ಸನ್ಯಾಸಿ:—(ತನ್ನ ಉದ್ದನ್ನ ಗಡ್ಡದಮೇಲೆ ಕೈಹಾಕುತ್ತ) "ಎರಡು ಮೂರು ದಿವಸದಲ್ಲಿ ಕಾರ್ಯಸಾಧನೆಯಾಗುವದು ಕಠಿಣ. ಸ್ತ್ರೀಯರ ಸ್ವಭಾವವು ಬಹಳ ಹಟತ್ವಾಗಿರುತ್ತದೆ. ಅವರು ತೀವ್ರ ವಶೀಕರಣವಾಗುವದು ದುಃಸಾಧ್ಯವಾಗಿದೆ. ಹೀಗೆಯೇ ಪ್ರಯತ್ನ ಮಾಡಿದರೆ ಅವಳು ವಶವಾಗೇ ವಶವಾಗುತ್ತಾಳೆ."

ಮಾಧವರಾಯ:—(ಸೊಟ್ಟ ಮೂಗನ್ನು ತಿರುವುತ್ತ) "ಧೋಂಡೀರಾಜ, ನೀವು ಒಂದು ವೇಳೆ ನಾನು ಹೇಳಿದಂತೆ ನಡೆದದ್ದಾದರೆ, ಈಗಿಂದೀಗಲೆ ನಿಮ್ಮ ಕೆಲಸವು ನಿಮ್ಮಂತೆ ಆಗುತ್ತದೆ. ಅವಳ ಬಾಯಿ ಹೆದರಿಕೆಯನ್ನು ಕೇಳದೆ, ನಾಲ್ಕು ಸಾರೆ ಚಪ್ಪರಿಸಿದರೆ ಸಾಕು, ಅವಳ ಮನೆಯ ದೇವರು ಥರಥರ ಕಂಪಿಸುತ್ತಾನೆ ಒಳ್ಳೇದು. ಅವಳನ್ನು ನೀವು ಇಲ್ಲಿಗೆ ಹೇಗೆ ತಂದಿರಿ?"

ಧೋಂಡೀರಾಜ:—"ಮಾಧವರಾವ, ಅವಳ ಕಥೆಯು ಬಹಳ ವಿಲಕ್ಷಣವಾದದ್ದದೆ. ಅವಳ ರೂಪಕ್ಕೆ ಸರಿಯಾಗಿ ಅವಳ ಹೆಸರು ಮನೋರಮೆಯೆಂದು ಇರುತ್ತದೆ. ನನಗೆ ಅವಳ ಬುಡಬೇರೆಲ್ಲ ಗೊತ್ತಿರುತ್ತದೆ. ಅವಳು ಮಠದ ದಕ್ಷಿಣ ಭಾಗಕ್ಕೆ ಇರುವ ಲೋಹಪಾತ ಗ್ರಾಮದ ಶ್ರೀಧರಪಂತರ ಸೊಸಿಯು. ಅವಳ ಗಂಡನು ಅವಳ ಚಿಕ್ಕತನದಲ್ಲಿಯೇ ಮೃತಪಟ್ಟನು. ತವರಮನೆಗೆ ಹೋಗುವದಕ್ಕಾಗಿ ಹೊರಟ ಅವಳು, ನಾಲ್ಕು ದಿವಸದ ಹಿಂದೆ ಮಠದ ಕೆಳಗಿರುವ ಹಾದಿಯಲ್ಲಿ ನನಗೆ ಕೂಡಿದಳು. ಅವಳ ಮನೋಹರ ರೂಪವನ್ನು ನೋಡಿದ ಕೂಡಲೆ ನಾನು ಕಾಮಪೀಡಿತನಾದೆನು. ಏನಾದರೂ ಯುಕ್ತಿಪ್ರಯುಕ್ತಿ ಮಾಡಿದ ಹೊರತು ಕೆಲಸವು ಸಾಧಿಸುವದಿಲ್ಲವೆಂದು ತಿಳಿದು, ನಾನು ಅವಳಿಗೆ ಹೇಳಿದ್ದೇನಂದರೆ:—"ಈಗ ಈ ಮಠದಲ್ಲಿ ಒಬ್ಬ ಸಾಧುಪುರುಷನಿದ್ದಾನೆ. ಅವನ ಪ್ರಭಾವವನ್ನು ನಾನೆಷ್ಟು ವರ್ಣಿಸಲಿ! ಪ್ರತಿ ಈಶ್ವರಾವತಾರಿಯಾಗಿದ್ದಾನೆ!! ಸಾವಿರಾರು ಜನರು ಆತನ ದರ್ಶನಕ್ಕೆ ಹೋಗುತ್ತಾರೆ. ನಾನೂ ಆತನ ದರ್ಶನರೂಪವಾದ ಅಮೃತವನ್ನು ಪಾನಮಾಡಲಿಕ್ಕೆ ಹೋಗುತ್ತೇನೆ. ನೀವು ಕರೆಕಳುಹಿಸಿದಂತೆ ಇಲ್ಲಿಗೆ ಬಂದಿರುವಿರಿ. ಮಠಕ್ಕೆ ಬಂದರೆ ನಿಮಗೂ ಆ ಮಹರ್ಷಿಯು ದರ್ಶನವಾಗುತ್ತದೆ. ಎಂದು ಹೇಳಿ ಅವಳನ್ನು ಭ್ರಾಂತಿಗೊಳಿಸಿ ಮೇಲಕ್ಕೆ ತಂದೆ

ನು. ಮಠದ ಹಿಂದಿನ ಭಾಗದಲ್ಲಿರುವ ಕೋಣೆಯಲ್ಲಿ ಅವಳನ್ನು ಕೂಡಿಸಿರುವೆನು."

ಮಾಧವರಾಯ:—"ಧೋಂಡೀರಾಜ, ನಿಮ್ಮ ಜಾಣತನಕ್ಕೆ ನಾನು ಮೆಚ್ಚಿದೆನು. ನನ್ನ ಮಾತಿನಂತೆ ನಡೆದರೆ ನಿಮ್ಮ ಕಾರ್ಯವು ಸಿದ್ಧಿಸುತ್ತೆಂದು ಭಾವಿಸಿರಿ. ಆದರೆ ವೇಣುವಿನ ಸಂಬಂಧವಾಗಿ ಏನು ಮಾಡಬೇಕು. ಅವಳು ಮಹಾ ಚಮತ್ಕಾರಳೂ, ದುರಾಗ್ರಹಳೂ ಇರುತ್ತಾಳೆ."

ಧೋಂಡೀರಾಜ:—"ಮಾಧವರಾವ, ಅವಳ ಸಲುವಾಗಿ ನೀವು ಚಿಂತಿಸುವ ಕಾರಣವಿಲ್ಲ. ನಿನ್ನಿನ ದಿವಸ ತಂದೆಯವರು ನಿಮ್ಮೊಡನೆ ವೇಣುವಿನ ಲಗ್ನವನ್ನು ಮಾಡಿಯೇ ತೀರಬೇಕೆಂದು ಅಂದರು. ಲಗ್ನವಾಗುವತನಕ ಅವಳ ಹಾರಾಟ, ನಂತರ ಅವಳೇ ಹೇಳಿದಂತೆ ಕುಣಿಯುತ್ತಾಳೆ. ಇದೇ ವೈಶಾಖಮಾಸದಲ್ಲಿಯೇ ನೀವು ನಾಲ್ಕು ಕೈಯವರಾಗುತ್ತೀರೆಂದು ನಾನು ನಿಶ್ಚಯವಾಗಿ ಹೇಳುತ್ತೇನೆ. ಮಾಧವರಾವ, ನೀವು ನಿಜವಾಗಿ ಭಾಗ್ಯಶಾಲಿಗಳು. ಜಗತ್ತಿನಲ್ಲಿ ವೇಣುವಿನಂತೆ ಸುಂದರಳೂ, ಸುಶಿಕ್ಷಿತಳೂ ಆದ ಸ್ತ್ರೀಯು ಸಿಗುವದು ದುರ್ಲಭವಾಗಿದೆ."

ಮಾಧವರಾಯ:—(ಅತ್ಯಾನಂದದಿಂದ) "ಇದೆಲ್ಲ ನಿಮ್ಮ ಮತ್ತು ನಿಮ್ಮ ತಂದೆಯವರ ಕೃಪೆಯು. ನನ್ನ ಸಲುವಾಗಿ ನೀವು ಬಹಳ ಪರಿಶ್ರಮ ಮಾಡಿದಿರಿ. ನೀವೇ ಅವಳನ್ನು ಯುಕ್ತಿಯಿಂದ ಹಿಡಿದು ತಂದಿರಿ. ನೀವೇ ಅವಳನ್ನು ಯುಕ್ತಿಯಿಂದ ಶರೆಮನೆಯಲ್ಲಿ ಕೂಡದಿದ್ದರೆ, ವಿಶ್ವನಾಥರಾಯರಾದರೂ ಏನು ಮಾಡುತ್ತಿದ್ದರು? ಆದ್ದರಿಂದ ವಿಶ್ವನಾಥರಾಯರಿಗಿಂತ ನಿಮ್ಮ ಉಪಕಾರವು ನನ್ನ ಮೇಲೆ ಬಹಳವಾಯಿತು. ಆದರೂ ಲಗ್ನವಾಗಲಿಕ್ಕೆ ಇನ್ನೂ ಎಷ್ಟು ತೊಂದರೆಗಳು ಬರುತ್ತವೆಯೋ ಏನೋ ಯಾರಿಗೆ ಗೊತ್ತು!"

ಧೋಂಡೀರಾಜ:—(ಅಭಿಮಾನದಿಂದ) "ಮಾಧವರಾಯ, ಈಗೆ ತೊಂದರೆಯ ಸುದ್ದಿಯನ್ನೇ ತೆಗೆಯಬೇಡಿರಿ. ಬೇಟೆಯು ಕೈಯಲ್ಲಿ ಸಿಕ್ಕಿರಲು ಕಾರ್ಯವಾಗುವದಿಲ್ಲವೆಂದನ್ನುವದು ತೀರ ಹುಚ್ಚತನದ ಮಾತಾಗಿದೆ. ಅವಳನ್ನು ಹಿಡಿದು ತರುವದರ ಸಲುವಾಗಿ ಆಲೋಚನೆ ಮಾಡಿ ಮಾಡಿ ನನ್ನ ಮಿದುಳೆಲ್ಲ ಕೆಟ್ಟು ಹೋಯಿತು. ನೀವು ಭಾಗ್ಯಶಾಲಿಗಳಾಗಿದ್ದರಿಂದ, ನನ್ನ

ಕಾರ್ಯಕ್ಕೆ ಬೇಗನೆ ಜಯವು ಪ್ರಾಪ್ತವಾಯಿತು. ಸದ್ಯಕ್ಕೆ ಸಮೀಪದ ಯಾವದೊಂದು ಸುಮುಹೂರ್ತವನ್ನು ತೆಗೆದು ಲಗ್ನಮಾಡುವದೊಂದು ಉಳಿದದೆ"

ಮಾಧವದಾಯ:—" ಧೋಂಡೀರಾಜ, ನಾನು ೩-೪ ದಿವಸದ ಹಿಂದೆ ವೇಣುವಿನ ಸಂಗಡ ಭಾವೀ ವಿಚಾರದ ಬಗ್ಗೆ ಆಲೋಚಿಸಬೇಕೆಂದು ಅವಳ ಕೋಣೆಯಲ್ಲಿ ಹೋಗಿದ್ದೆನು. ನಾನು ಆ ಕೋಣೆಯಲ್ಲಿ ಕಾಲಿಟ್ಟ ಕೂಡಲೆ ಹೆಣ್ಣು ಹುಲಿಯಂತೆ ವೇಣುವು ನನ್ನ ಮೈಮೇಲೆ ಬಂದಳು. ಅವಳು:— " ಇಂದು ನನ್ನ ಕೋಣೆಯಲ್ಲಿ ಕಾಲಿಟ್ಟದ್ದೇ ಇಟ್ಟದ್ದು, ಇನ್ನು ಮೇಲೆ ಈ ಕೋಣೆಯಲ್ಲಿ ನೀನು ಎಂದು ಬರಬಾರದು." ಎಂದಳು. ನಾನು ಇನ್ನಷ್ಟು ಮಾತಾಡಿ ಅವಳನ್ನು ಒಲಿಸಿಕೊಳ್ಳಬೇಕೆಂದು ಹವಣಿಸುವಷ್ಟರಲ್ಲಿ ಯಮುನೆಯು ಅಲ್ಲಿಗೆ ಬಂದಳು. ಆಗ ನನಗೆ ಅಲ್ಲಿ ನಿಲ್ಲಲಿಕ್ಕೆ ಆಸ್ಪದವಿಲ್ಲವಾಯಿತು. ಒಳ್ಳೇದು. ಧೋಂಡೀರಾಜ, ಯಮುನೆಯು ತೀರ ಕೃಶವಾಗಿದ್ದಾಳೆ. ವಿಶ್ವನಾಥರಾಯರು ನಿಮಗೆ ಹೀಗೆ ಮಾಡುವದು ಯೋಗ್ಯವಾದದ್ದಲ್ಲವೆಂದು ಅಂದರು."

ಧೋಂಡೀರಾಜ:—" ಅವಳ ನಡತೆಯೇ ಅವಳನ್ನು ಬಾಧಿಸುತ್ತದೆ. ಕ್ಷುಲ್ಲಕ ಸಂಗತಿಯಿಂದ ಅವಳು ಮಿತಿಗೆಟ್ಟು ಒಡಿಸಿಕೊಳ್ಳುತ್ತಾಳೆ. ಅವಳು ಒಂದು ದಿವಸ ತಲೆಯಲ್ಲಿ ಬಂಗಾರದ ಗುಲಾಬೀ ಹೂವನ್ನು ಹಾಕಿಕೊಂಡಿದ್ದಳಂತೆ. ಅದು ರಂಗುವಿನ ದೃಷ್ಟಿಗೆ ಬಿದ್ದ ಕೂಡಲೆ ಅವಳು ಆ ಹೂವನ್ನು ತಂದು ಕೊಡಲಿಕ್ಕೆಬೇಕೆಂದು ನನಗೆ ಮಿತಿಮೀರಿ ಕಾಡಿದಳು. ಆಗ ನಾನು ಯಮುನೆಗೆ ಹೂವನ್ನು ಕೊಡೆಂದು ಕೇಳಿದೆನು. ಅವಳು ಕೊಡದ್ದರಿಂದ ನನಗೆ ಸಿಟ್ಟು ಬಂದು ನಾನು ಅವಳನ್ನು ಚನ್ನಾಗಿ ತಳಿಸಿದೆನು. ನಿನ್ನಿನಿಂದ ರಂಗುವು ನನ್ನ ಮೈಮೇಲೆ ಬಿಗಿದುಕೊಂಡಿದ್ದಾಳೆ. ಇಂದು ಅವಳನ್ನು ಒಳ್ಳೇ ಕಷ್ಟದಿಂದ ಈ ಮಠಕ್ಕೆ ಕರಕೊಂಡು ಬಂದಿದ್ದೇನೆ."

ಈಪ್ರಕಾರ ಗಾಂಜಿಯನ್ನು ಸೇದುತ್ತ ಮಾತಾಡುತ್ತಿರುವಾಗ್ಗೆ ಒಬ್ಬ ಮನುಷ್ಯನು ಧಸಧಸ ತೇಕುತ್ತ ಬಂದು—" ಮಹಾರಾಜ, ಗಡಿಗೆಯು ಒಡೆಯಿತು. ಇಷ್ಟು ಹೊತ್ತು ಮಾಡಿದ್ದೆಲ್ಲ ನಿರರ್ಥಕವಾಯಿತು." ಎಂದಂದನು. ಆಗ ಗಾಂಜಿಯನ್ನು ಸೇದುತ್ತ ಕುಳಿತಿದ್ದ ನಾಲ್ವರು ಒಮ್ಮೆಲೆ ಮೇಲಕ್ಕೆ ಎದ್ದರು. ಡೋಂಗೀ ಸನ್ಯಾಸಿಯ ಶಿಷ್ಯರಲ್ಲಿ ಒಬ್ಬನು

ಕಣ್ಣು ಕೆಂಪಗೆ ಮಾಡಿ, ಬಂದ ಮನುಷ್ಯನ ಬೆನ್ನಮೇಲೆ ಎರಡು ಸಾರೆ ಗುದ್ದಿ:—"ಎಲೈ ಕತ್ತೆಯ ಮಗನೇ, ನಿನಗೆ ಒಳ್ಳೇ ಹುಷಾರಿಯಿಂದ ಕೆಲಸ ಮಾಡಲಿಕ್ಕೆ ಹೇಳಿದ್ದು, ನೀನು ಇಂದು ಹೀಗೆ ಯಾಕೆ ಮಾಡಿದಿ?" ಎಂದನು.

ಮಠದಲ್ಲಿದ್ದ ಎಲ್ಲ ಜನರು ಏನಾಗಿದೆಯೆಂಬುವದನ್ನು ನೋಡುವದಕ್ಕಾಗಿ ಮಠದ ಹಿಂದಿನ ಭಾಗಕ್ಕೆ ಹೋದರು. ಅಲ್ಲಿ ಹೋಗಿ ನೋಡುತ್ತಾರೆ ಭಟ್ಟಿಯನ್ನು ಇಳಿಸಿದ ಸೆರೆಯ ಗಡಿಗೆಯು ತುಣುತುಣುಕಾಗಿ ಬಿದ್ದಿತ್ತು. ಆ ಗಡಿಗೆಯಲ್ಲಿದ್ದ ಸೆರೆಯೆಲ್ಲ ನೆಲದ ಮೇಲೆ ಪಸರಿಸಿತ್ತು. ಅದರ ದುರ್ಗಂಧವು ನಾಲ್ಕೂ ಕಡೆಗೆ ಹಬ್ಬಿತ್ತು. ಈ ಸ್ಥಿತಿಯನ್ನು ನೋಡಿ ಅವರೆಲ್ಲರಿಗೆ "ಇದ್ದ ಒಬ್ಬನೇ ಒಬ್ಬ ಮಗನು ತೀರಿಕೊಂಡರೆ ಆಗುವ ದುಃಖದಷ್ಟು" ದುಃಖವಾಯಿತು. ಕಡೆಗೆ ಡೋಂಗೀ ಸನ್ಯಾಸಿಯ ಶಿಷ್ಯರಲ್ಲೊಬ್ಬನು ತಾನು ಸೆರೆಯನ್ನು ಸಿದ್ಧಮಾಡುತ್ತೇನೆಂದು ಹೇಳಿ, ಆಪ್ರಕಾರ ಜೇಗನೆ ಉತ್ತಮ ರೀತಿಯಿಂದ ಸೆರೆಯನ್ನು ಸಿದ್ಧಮಾಡಿದನು. ಸೆರೆಯು ಸಿದ್ಧವಾದ ಮೇಲೆ ಎಲ್ಲ ಜನರು ಮಠದ ಮೇಲ್ಮಾಳಿಗೆಯ ಮೇಲೆ ಹೋದರು. ಅಲ್ಲಿ ರಂಗುವು ಸುರಾಪಾನ ಸಂಗಡ ತಿನ್ನಲಿಕ್ಕೆ ಮಾಂಸ ಮೊದಲಾದ ಪದಾರ್ಥಗಳನ್ನು ಸಿದ್ಧಮಾಡಿದ್ದಳು. ಮತ್ತು ಮೇಲ್ಮಾಳಿಗೆಯ ಮೇಲೆ ಒಂದು ಚೌಕಾದ ಟೇಬಲಿದ್ದು, ಅದರ ಮೇಲೆ ಶುಭ್ರಗಾದಿಯು ಹಾಸಿತ್ತು. ಟೇಬಲ್ಲಿನ ಸುತ್ತುಮುತ್ತು ಚಂದವಾದ ೭-೮ ಖುರ್ಚೆಗಳಿದ್ದವು. ಟೇಬಲ್ಲಿನ ಮೇಲೆ ಒತ್ತಟ್ಟಿಗೆ ಸೆರೆಯಿಂದ ತುಂಬಿದ ಒಂದು ದೊಡ್ಡ ಕಾಜಿನ ಪಾತ್ರೆಯೂ, ಒತ್ತಟ್ಟಿಗೆ ಖಾದ್ಯಪದಾರ್ಥದಿಂದ ತುಂಬಿದ ಚಿನಯೀಮಣ್ಣಿನ ಒಂದು ದೊಡ್ಡ ತಾಟು ಒತ್ತಟ್ಟಿಗೆ ೧೦-೧೨ ಕಾಜಿನ ಕಪ್ಪುಗಳೂ ಇದ್ದವು. ರಂಗೂ ಮೊದಲಾಗಿ ಎಲ್ಲ ಜನರು ತಮ್ಮ ತಮ್ಮ ಸ್ಥಾನದಲ್ಲಿ ಕುಳಿತುಕೊಂಡ ಮೇಲೆ ಧೋಂಡೀ ರಾಜನು ನುಡಿದನೇನಂದರೆ:—"ಗುರು ಮಹಾರಾಜ, ತಾವು ಮೊದಲು ಆರಂಭಿಸಿದಿರೆಂದರೆ ನಮಗೆ ಅಪ್ಪಣೆಯನ್ನು ಮಾಡಿದಂತಾಗುತ್ತದೆ." ಎಂದನು. ಆಗ ಡೋಂಗೀ ಸನ್ಯಾಸಿಯು 'ಒಳ್ಳೇದು' ಎಂದು ತಲೆಹಾಕುತ್ತ, 'ಜಯ ಜಗದಂಬ ಜಯಜಗದಂಬ' ಎಂದು ಅನ್ನುತ್ತ ಕಾಜಿನ ಕಪ್ಪಿನಲ್ಲಿ ಮಧ್ಯವನ್ನು ಹಾಕಿಕೊಂಡು, ಸೊಟ್ಟ ಮೋರೆಯನ್ನು ಮಾಡಿ ಅದನ್ನೆಲ್ಲ ಕುಡಿದನು, ಖಾದ್ಯಪದಾರ್ಥವನ್ನು ತಿನ್ನಹತ್ತಿದನು. ಸನ್ಯಾಸಿಯು ಆರಂಭಿಸಿದ ಕೂಡಲೆ

ಎಲ್ಲರೂ ಸುರಾಪಾನವನ್ನು ಆರಂಭಿಸಿದರು. ಆದರೆ ಧೋಂಡೀರಾಜನ ಪ್ರಿಯಳಾದ ರಂಗುವು ಒಂದು ಪದಾರ್ಥಕ್ಕೂ ಕೈಹಚ್ಚದೆ, ಕ್ರುದ್ಧಮುದ್ರೆಯಿಂದ ಸುಮ್ಮನೆ ಕುಳಿತಿದ್ದಳು. ಅವಳ ಈ ಸ್ಥಿತಿಯನ್ನು ನೋಡಿ ಧೋಂಡೀರಾಜನು ಚಡಪಡಿಸಹತ್ತಿದನು. ಪೂರ್ಣವಾಗಿ ಒಂದು ಕಾಜಿನ ಕಪ್ಪಿನಲ್ಲಿ ಮಧ್ಯವನ್ನು ತುಂಬಿಕೊಂಡು ಧೋಂಡೀರಾಜನು ರಂಗುವನ್ನು ಕುರಿತು ಅಂದದ್ದೇನಂದರೆ:—“ಸರಕಾರವು ಇಂದು ದೀನನ ಮೇಲೆ ಸಿಟ್ಟಿಗೇರಿದಂತೆ ಕಾಣುತ್ತದೆ. ಹಾಗೆ ಈ ದಾಸನ ಮೇಲೆ ವಕ್ರದೃಷ್ಟಿಯನ್ನಿಡದೆ, ಸ್ವಲ್ಪ ನನ್ನ ಸ್ಥಿತಿಗತಿಗಳ ವಿಷಯಕ್ಕೆ ಆಲೋಚಿಸು. ನಾನು ಪರಾಧೀನವೆಂಬ ಪಂಜರದಲ್ಲಿ ಸಿಕ್ಕಿರುತ್ತೇನೆಂಬುವದು ನೀನು ತಿಳಿಯದ್ದಲ್ಲ. ಆದರೂ ಇವತ್ತಿಲ್ಲ ನಾಳೆ, ಬಹಳವಾದರೆ ೭-೮ ದಿನಗಳಲ್ಲಿ ನಿನ್ನ ಅಪೇಕ್ಷೆಯನ್ನು ಪೂರ್ಣಮಾಡುತೇನೆ. ದಯಮಾಡಿ ಇಂದಿನ ವಿನೋದಕಾರ್ಯವನ್ನು ಪ್ರತಿಬಂಧಿಸಬಾರದೆಂದು ಕರಮುಗಿದು ಬೇಡುವೆನು. ಇಂದು ನಿನ್ನ ಸಲುವಾಗಿಯೇ ಈ ಪ್ರಕಾರದ ವ್ಯವಸ್ಥೆ ಮಾಡಿರುತ್ತದೆ” ಎಂದನು.

ಆ ಕುರುಪಿಯಾದ ರಂಗುವು ಧೋಂಡೀರಾಜನ ವಿನವಣಿಯಿಂದ ಕ್ರುದ್ಧಳಾದಳು. ಖಾದ್ಯ-ಪೇಯ ವಸ್ತುಗಳು ಅವಳ ಬಾಯಿಗೆ ನೀರು ಬಿಟ್ಟಿದ್ದರೂ, ಅವಳು ತನ್ನ ಕಾರ್ಯಸಾಧನೆಗಾಗಿ ಒಳ್ಳೇ ಕೋಪದಿಂದ ಧೋಂಡೀರಾಜನನ್ನು ಕುರಿತು ಅಂದದ್ದೇನಂದರೆ—“ತಾವು ಎಷ್ಟು ಅಂತಃಕರಣಪೂರ್ವಕವಾಗಿ ಮಾತಾಡುತ್ತೀರೆಂಬುವದನ್ನು ನಾನು ಪೂರ್ಣವಾಗಿ ತಿಳಿದುಕೊಂಡಿರುತ್ತೇನೆ. ಮುಖ್ಯವಾಗಿ ನಾವು ಕಾರ್ಯಸಾಧಕರು. ರಾತ್ರಿಯಲ್ಲಿ ಮನಬಂದಂತೆ ಒದರಿದಂತೆ ಕೈಯಿಂದ ಒಂದೂ ಕೆಲಸವಾಗುವಂತಿಲ್ಲ. ನೀವು ನಮಗೆ ಕೊಡುವ ವಸ್ತುವನ್ನು ಅಮಾವಾಸ್ಯೆಯ ದಾನಕ್ಕೇನೂ ಕೊಡಬೇಕಾಗಿಲ್ಲ. ನಾಳಿನ ದಿವಸ ಕಾಲುಗಳಲ್ಲಿ ಹಾಕುವ ಸರಪಳಿಗಳನ್ನೂ, ನಾಗಪುರದ ಚಂದ್ರಕಳೆಯನ್ನೂ, ಆ ಬಂಗಾರದ ಗುಲಾಬಿಯ ಹೂವನ್ನೂ ತಂದು ಕೊಡದಿದ್ದರೆ, ನಾನು ನಿಶ್ಚಯವಾಗಿ ನಿಮ್ಮವಳಲ್ಲವೆಂದು ಭಾವಿಸಿರಿ! ನಿಮ್ಮ ಸಲುವಾಗಿ ಮನೆಯನ್ನು ಬಿಟ್ಟೆನು, ಬಾಗಿಲವನ್ನು ಬಿಟ್ಟೆನು, ಮೊದಲಿನ ಪ್ರಿಯನನ್ನು ಬಿಟ್ಟೆನು. ಆದರೆ ಇದೆಲ್ಲ ಸಂಗತಿಯು ನಿಮ್ಮ ಲಕ್ಷದಲ್ಲಿಯೇ ಇಲ್ಲ. ಮೊದಲು ಅಷ್ಟು ಕೊಡುತ್ತೇನೆ-ಇಷ್ಟು ಕೊಡುತ್ತೇನೆ, ನಾನು

ಅಂಥವರ ಮಗ-ಇಂಥವರ ಮಗ ಎಂದು ಹೇಳಿ ಕರಕೊಂಡು ಬಂದಿರಿ. ನಾನಾದರೂ ಇಂದು ಕೊಟ್ಟಾರು-ನಾಳೆ ಕೊಟ್ಟಾರು ಎಂದು ನೋಡಿ ನೋಡಿ ಬೇಸತ್ತಿರುವೆನು. ನಿಮಗೆ ಸಾಕಾಗಿದ್ದರೆ ಸುಮ್ಮನೆ ನನ್ನ ಸಂಗತಿಯನ್ನು ಬಿಟ್ಟುಬಿಡಿರಿ" ಎಂದೆನ್ನಲು, ಧೋಂಡೀರಾಜನು ಅಂದದ್ದೇನಂದರೆ:— "ರಂಗೂ, ನನ್ನದು ತಪ್ಪಾಯಿತು. ನನಗೆ ಕ್ಷಮೆಯನ್ನು ಮಾಡು. ನೀನು ಬೇಡಿದ ಎಲ್ಲ ದಾಗೀನುಗಳನ್ನು ನಾಳೆ ಸಾಯಂಕಾಲದೊಳಗೆ ನಿಶ್ಚಯವಾಗಿ ತಂದು ಕೊಡುತ್ತೇನೆ. ಯಮುನೆಯು ಆ ದಾಗೀನೆಯನ್ನು ಸುಮ್ಮನೆ ಕೊಟ್ಟರೆ ತೀರಿತು, ಇಲ್ಲವಾದರೆ ಅವಳನ್ನು ಯಮಪುರಿಗೆ ಕಳಿಸಿ ಆ ಮೇಲೆ ಅದೊಂದು ಗುಲಾಬಿಯ ಹೂವು ಯಾಕೆ, ಅವಳ ಮೈಮೇಲಿದ್ದ ಎಲ್ಲ ಆಭರಣಗಳನ್ನು ತಂದು ಕೊಡುತ್ತೇನೆ. ಮುಖ್ಯವಾಗಿ ನೀನೇ ನನ್ನ ಭಾಗ್ಯವಿಥಿಯು-ಪ್ರೀತಿಯ ಕಣಿಯು-ಮೋಹದ ಅರಗಿಳಿಯು ಆಗಿರುವಾಗ ನಿನಗೆ ಯಾವದಕ್ಕೂ ಕೊರತೆ ಮಾಡುವದಿಲ್ಲ. ನನ್ನ ಜೀವವನ್ನಾದರೂ ಅಡವು ಇಟ್ಟು, ನಿನ್ನ ಅಪೇಕ್ಷೆಯನ್ನು ಪೂರ್ತಿಸುತ್ತೇನೆ. ಬೇಗ ಬಂದು ಬಾಟ್ಲೀ ತಕ್ಕೋ ಅನುಮಾನ ಮಾಡಬೇಡ" ಎಂದನು.

ರಂಗುವು ಹೆಚ್ಚು ಎಳೆದು ಹಿಡಿಯಲಿಲ್ಲ. ಅವಳು ತನ್ನ ಉದ್ಯೋಗದಲ್ಲಿ ಬಹು ಚತುರಳಿದ್ದಳು. ಇದೊಂದು ನೆವದಿಂದ ತನ್ನ ಕಾರ್ಯಸಾಧನೆ ಮಾಡಿಕೊಳ್ಳಬೇಕೆಂದು ಅವಳು ಪೂರ್ವಾಲೋಚನೆ ಮಾಡಿದ್ದಳು. ಹಿಂಗ್ಗುವ ಪದಾರ್ಥವೆಂದು ಹೆಚ್ಚಿಗೆ ಜಗ್ಗಿದರೆ ಹರಿದು ಹೋಗುವ ಪ್ರಕಾರ ತಾನು ಇನ್ನು ಹೆಚ್ಚು ಎಳೆದು ಹಿಡಿಯುವದು ಯುಕ್ತವಲ್ಲವೆಂದು ಭಾವಿಸಿ, ಅವಳು ಧೋಂಡೀರಾಜನ ಕೈಯಲ್ಲಿದ್ದ ಬಾಟ್ಲಯನ್ನು ತಕ್ಕೊಂಡು ಅದರಲ್ಲಿದ್ದ ಮದ್ಯವನ್ನು ಉದರಸ್ಥ ಮಾಡಿದಳು. ಮಾಧವರಾಯನು ಮಿತಿಮೀರಿ ಮದ್ಯಪಾನ ಮಾಡಿ ಮನಬಂದಂತೆ ಬಡರಹತ್ತಿದನು.

ಮಾಧವರಾವ—"ಧೋಂಡೀರಾಜ, ರಂಗುವಿಗೆ ಮದ್ಯಪಾನ ಮಾಡಿಸಿದಂತೆ ಮನೋರಮೆಗೂ ಮಾಡಿಸಿದರೆ, ನಿಮ್ಮ ಬಯಕೆಯು ನಿಸ್ಸಂದೇಹವಾಗಿ ಈಡೇರುವದು."

ಧೋಂಡೀರಾಜ—( ಘೋರಸ್ವರದಿಂದ ) "ಹೋ-ಹೋ-ಹೋ! ಮಾಧವರಾಯರ ಯುಕ್ತಿಯು ಹದಿನಾರು ಆಣೆ ನಿಜವದೆ. ಆದರೆ ಮಾಧವ

ರಾವ. ನನ್ನೊಬ್ಬನಿಂದಲೇ ಅವಳನ್ನು ಇಲ್ಲಿಗೆ ತರುವದಾಗುವದಿಲ್ಲ. ನೀವೂ ಬಂದರೆ, ಇಬ್ಬರೂ ಕೂಡಿ ಅವಳನ್ನು ಅಡ್ಡೇ ಹೊತ್ತುಕೊಂಡು ಬರಲಿಕ್ಕೆ ಅನುವಾಗುತ್ತದೆ.”

ಮಾಧವರಾವ—(ಖುರ್ಚಿಯಿಂದ ಇಳಿದು) “ನಡೆಯಿರಿ. ಆ ಕೈಲಾಗದ ನಾರಿಯನ್ನು ಮೇಲಕ್ಕೆ ತರುವದೇನು ಅಗಾಧ ಸಂಗತಿಯು!” ಹೀಗನ್ನುತ್ತ ಮಾಧವರಾವ-ಧೋಂಡೀರಾಜರು ಕೆಳಗೆ ಇಳಿದು ಹೋದರು.

ಮನೋರಮೆಯು ಹೆಸರಿನಂತೆ ಮನೋರಮವಾಗಿದ್ದಳು. ಅವಳ ಲಕ್ಷಣವು ಚಿತ್ತಾಕರ್ಷಕವಾಗಿದ್ದು, ಸೌಜನ್ಯಯುಕ್ತವಾಗಿತ್ತು; ಅವಳ ವರ್ಣವು ಗೌರವರ್ಣದ್ದು; ಅವಳಿಗೆ ಯೌವನವು ಪ್ರಾಪ್ತವಾಗಿ ವರ್ಷಾರು ತಿಂಗಳಾಗಿದ್ದಿಲ್ಲ; ಅವಳ ವಯಸ್ಸು ೧೭–೧೮ ವರ್ಷದ್ದಿತ್ತು; ಅವಳ ಕಣ್ಣುಗಳು ದೊಡ್ಡವು; ಮೂಗು ಸರಳವೂ, ಉದ್ದವೂ ಆದದ್ದಿತ್ತು; ತುಟಿಗಳು ಅಚ್ಚಗೆಂಪು; ಹಲ್ಲುಗಳು ವಜ್ರದ ಕಣಿಯಂತೆ ಥಳಥಳಿಸುತ್ತಿದ್ದ[illegible] ಗಲ್ಲಗಳು ಗುಲಾಬಿಯ ವರ್ಣದವು; ಮಸ್ತಕದ ಮೃದುವಾದ ಕೂದಲುಗಳು ಕಪ್ಪು ಬಣ್ಣದವು. ಅವಳು ವಿಧವೆಯಾದ್ದರಿಂದ ಅವಳ ಮೈಮೇಲೆ ಹೆಚ್ಚಿನ ಆಭರಣಗಳಿದ್ದಿಲ್ಲ. ಅವಳು ನೀಲವರ್ಣದ ಸಾದಾ ವಸ್ತ್ರವನ್ನು ಉಟ್ಟುಕೊಂಡಿದ್ದಳು. ಆದರೂ ಸ್ವಭಾವಸುಂದರಿಯಾದ ಅವಳು ಬಹಳೇ ಮನೋಹರಳಾಗಿ ಕಾಣಿಸುತ್ತಿದ್ದಳು. ತನ್ನನ್ನು ಈ ಮಠಕ್ಕೆ ತಂದಿರುವ ಕಾರಣವನ್ನು ಅವಳು ಚನ್ನಾಗಿ ಮನವರಿಕೆ ಮಾಡಿಕೊಂಡಿದ್ದಳು. ತನ್ನ ಸಂರಕ್ಷಣೆಯ ಮಾರ್ಗವನ್ನು ಅವಳು ಪ್ರತಿನಿತ್ಯ ಶೋಧಿಸುತ್ತಿದ್ದಳು. ಆದರೆ ಎಲ್ಲ ರೀತಿಯಿಂದ ಅವಳ ಆಶೆಯು ನಿರಾಶೆಯಾಗುತ್ತಿತ್ತು. ಆ ಮಠದಲ್ಲಿಯ ಚಾಂಡಾಲರು ಪ್ರತಿನಿತ್ಯ ತೊಂದರೆಗೊಡುತ್ತಿದ್ದದರಿಂದ ಅವಳಿಗೆ ಜೀವವು ಬೇಶಾಗಿತ್ತು. ಅವಳಿಗೆ ಆ ಶರೆಮನೆಯಲ್ಲಿ ಆತ್ಮಹತ್ಯ ಮಾಡಿಕೊಳ್ಳುವ ಒಂದು ಸಾಧನವಾದರೂ ದೊರೆಯುವಂತಿಲ್ಲ. ಮರಣದ ಸಂಬಂಧವಾಗಿ ಜಗತ್ತಿನಲ್ಲಿ ಒಂದು ಸರ್ವಸಾಧಾರಣ ನಿಯಮವೇನೆಂದ—ಯಾರು, ಮರಣವನ್ನು ಬಯಸುತ್ತಾರೋ, ಅವರನ್ನು ಬಿಟ್ಟು ಮರಣವು ದೂರ ದೂರ ಸರಿದು ಹೋಗುತ್ತದೆ. ಯಾರು ಮರಣಕ್ಕೆ ಅಂಜುತ್ತಾರೋ, ಅವರಿಗೆ ಮರಣವು ಎದುರಿಗೆ ಬಂದೇ ನಿಲ್ಲುತ್ತದೆ. ಮನೋರಮೆಯು ಅಂತಃಕರಣಪೂರ್ವಕವಾಗಿ

ಮರಣವನ್ನು ಬಯಸುತ್ತಿದ್ದರೂ, ಯಮನು ಅವಳ ಮನೋಭೀಷ್ಟವನ್ನು ಪೂರ್ಣ ಮಾಡಲಿಲ್ಲ.

ಶರೆಮನೆಯಲ್ಲಿ ಯಾವಾಗಲೂ ಕತ್ತಲೆಯು ಇರುತ್ತಿತ್ತು. ಆ ಕತ್ತಲೆಯಲ್ಲಿ ಮನೋರಮೆಯು ತನ್ನ ದುರ್ದೈವದ ಸಲುವಾಗಿ ವಿಚಾರಿಸುತ್ತ ಕುಳಿತಿದ್ದಳು. ಅವಳು ಆ ಕೋಣೆಯಲ್ಲಿ ಸೇರಿದಂದಿನಿಂದ ಅವಳ ಕಣ್ಣುಗಳಿಂದ ಒಂದೇಸವನೆ ಕಣ್ಣೀರಿನ ಹನಿಗಳು ಸುರಿಯುತ್ತಿದ್ದವು. ಈವಳು ಕಣ್ಣೀರನ್ನು ಒರೆಸಿಕೊಳ್ಳುತ್ತ ತನ್ನ ಸ್ಥಿತಿಯ ಬಗ್ಗೆ ವಿಚಾರಿಸುತ್ತಿರುವಾಗ್ಗೆ ಯಮದೂತರು ಅವಳ ಎದುರಿಗೆ ಹೋಗಿ ನಿಂತರು. ಆ ಈರ್ವರು ರಾಕ್ಷಸರನ್ನು ಕಂಡಕೂಡಲೆ ಗಾಬರಿಯಾಗಿ ಮನೋರಮೆಯು ಒಳ್ಳೇ ಆವೇಶದಿಂದ ಅಂದದ್ದೇನಂದರೆ— "ನೀವು ಯಾಕೆ ಇಲ್ಲಿಗೆ ಬಂದಿರುವಿರಿ? ಧೋಂಡೀರಾಜ, ಇದಕ್ಕಾಗಿ ನನ್ನನ್ನು ಇಲ್ಲಿಗೆ ಕರಕೊಂಡು ಬಂದಿಯೇನು? ಚಂಡಾಲನೇ, ಈ ಅಬಲೆಯನ್ನು ನಿಷ್ಕಾರಣ ಯಾಕೆ ಬಾಧಿಸುತ್ತೀ? ಮೂರ್ಖನೇ, ಮೊದಲು 'ಅವ್ವಾ ಅವ್ವಾ' ಎಂದು ಮೆತ್ತನ್ನ ಮಾತುಗಳನ್ನಾಡಿ, ಮಹರ್ಷಿಯ ದರ್ಶನಕ್ಕೆಂದು ನನ್ನನ್ನು ಮೇಲಕ್ಕೆ ಕರಕೊಂಡು ಬಂದಿ. ಈಗ ವಿರುದ್ಧಾಚರಣೆಯಿಂದ ನಡೆಯಲಿಕ್ಕೆ ಯತ್ನ ಮಾಡುವಿ. ಮನೆಯಲ್ಲಿ ಅವ್ವ-ಅಕ್ಕ-ತಂಗಿಯರು ಪೇಟೀ ಬಸವಿಯರಿದ್ದಾರು. ಆದರೆ ಅವರಂತೆ ಎಲ್ಲ ಸ್ತ್ರೀಯರೂ ಇರುತ್ತಾರೆಂದು ನಿನ್ನ ಭಾವನೆಯುದೆಯೋ ಹೇಗೆ? ಇನ್ನು ಮುಂದೆ ನನಗೆ ಹೆಚ್ಚಿನ ಮಾತಾಡಿದಲ್ಲಿ ನಾನು ಹಣೆಯನ್ನು ಹೊಡಕೊಂಡು ಜೀವ ಬಿಟ್ಟೇನು, ಎಂದಂದಳು.

ಮನೋರಮೆಯು ತನ್ನ ಸತೀತ್ವವನ್ನು ರಕ್ಷಿಸುವದಕ್ಕೋಸ್ಕರ ವ್ಯಾಕುಲೆಮಾಡಸ್ಟು ಸಂತಾಪದಿಂದ ವ್ಯಗ್ರಳಾಗಿದ್ದಳು. ಅವಳ ಕಣ್ಣುಗಳಲ್ಲಿ ಕ್ರೋಧಾಗ್ನಿಯ ಕಿರಣಗಳು ಪ್ರಜ್ವಲಿಸುತ್ತಿದ್ದವು. ಅವಳ ಮೋಹಕ ಮುದ್ರೆಯು ಭಯಂಕರವಾಗಿ ಕಾಣಿಸುತ್ತಿತ್ತು. ಅವಳ ಭಯಂಕರ ಸ್ವರೂಪವನ್ನು ನೋಡಿ, ಧೋಂಡೀರಾಜನು ಹೆದರಿ, ಕೋಣೆಯಿಂದ ಹೊರಗೆ ಬಂದನು. ಆದರೆ ನಿಜವಾಗಿ ಕಾಲನ ದೂತನಂತಿದ್ದ ಮಾಧವರಾಯನು ಧೋಂಡೀರಾಜನ ಕರಗಳನ್ನು ಬಿಗಿಯಾಗಿ ಹಿಡಿದುಕೊಂಡು, ಒಳಗೆ ಕರಕೊಂಡು ಬಂದು ಅಂದದ್ದೇನಂದರೆ:—"ಏನು! ಆ ದರಿದ್ರ ಸ್ತ್ರೀಯಳ ಕಠಿಣೋಕ್ತಿಗಳಿಗೆ

ಹೆದರಿದಿಯಾ!! ನಮ್ಮ ಆಧೀನವೆಂಬ ಪಂಜರದಲ್ಲಿ ಸಿಕ್ಕ ಇವಳು ಎಲ್ಲಿ ಹೋಗುವಳು? ಮತ್ತು ಈ ಭಯಂಕರವಾದ ಘೋರಾರಣ್ಯದಲ್ಲಿ ಇವಳನ್ನು ಬಿಡಿಸಿಕೊಂಡು ಹೋಗುವದಕ್ಕೆ ಇವಳ ತಂದೆತಾಯಿಗಳಾದರೂ ಬರುವದು ಹೇಗೆ? ನೀನು ಒಂದು ಕೈಯನ್ನು ಹಿಡಿ, ನಾನೊಂದು ಕೈಯನ್ನು ಹಿಡುಕೊಳ್ಳುತ್ತೇನೆ. ಇವಳನ್ನು ಮುಳ್ಳಿನ ಹೊರೆಯನ್ನು ದರದರ ಎಳೆದುಕೊಂಡು ಹೋಗುವಂತೆ ಎಳಕೊಂಡು ಹೋಗೋಣ."

ಹೀಗೆನ್ನುತ್ತ ಮಾಧವರಾಯನು ಮನೋರಮೆಯ ಒಂದು ಕೈಯನ್ನು ಅಗಳಾಡದಂತೆ ಹಿಡಿದನು. ಮಾಧವರಾಯನ ಆ ಸಾಹಸವನ್ನು ಕಂಡು ಧೋಂಡೀರಾಜನಿಗೂ ಧೈರ್ಯವು ಬಂದಿತು. ಅವನು ಮನೋರಮೆಯ ಮತ್ತೊಂದು ಕೈಯನ್ನು ಹಿಡಿದನು. ಆ ನರಪಿಶಾಚಿಗಳಿಬ್ಬರು ಅವಳನ್ನು ದರದರ ಎಳೆಯುತ್ತ ಮೇಲಕ್ಕೆ ತಂದರು. ಆ ಚಾಂಡಾಲರು ಅವಳನ್ನು ದರದರ ಎಳಕೊಂಡು ಓಡಿ ಬಂದದ್ದರಿಂದ, ಆ ಅನಾಥಳ ತಲೆಯು ಅಲ್ಲಲ್ಲಿ ಒಡೆದು, ರಕ್ತವು ಧಾರಾಳವಾಗಿ ಸುರಿಯಹತ್ತಿತು. ಅವಳು ಆ ವೇಳೆಯಲ್ಲಿ ಆರ್ತಸ್ವರದಿಂದ ಅಳಲಾರಂಭಿಸಿದಳು. ಆದರೆ ಅವಳ ಸಂಬಂಧವಾಗಿ ಯಾರಿಗೆ ದಯವು ಬರಬೇಕು! ಅವಳಿಗೆ ಆ ವೇಳೆಯಲ್ಲಿ ಆಕಾಶವೇ ತನ್ನ ಶರೀರದ ಮೇಲೆ ಹೊತ್ತುಕೊಂಡು ಬಿದ್ದಂತಾಯಿತು. ಸತಿತ್ವ-ಸಂರಕ್ಷಣೆಯ ಸಲುವಾಗಿ ಅವಳು ಮಾಡಬಾರದ ಆಲೋಚನೆಗಳನ್ನು ಮಾಡುತ್ತಿದ್ದಳು. ಪ್ರಸಂಗವು ಬಿದ್ದರೆ, ಆತ್ಮಹತ್ಯ ಮಾಡಿಕೊಳ್ಳುವದಕ್ಕಾಗಿ ಅವಳು ಯೋಗ್ಯವಾದ ಸ್ಥಳವನ್ನು ನೋಡುತ್ತಿದ್ದಳು. ಇಷ್ಟರಲ್ಲಿ ಸುರಾಪಾನದಿಂದ ಉನ್ಮತ್ತನಾದ ಧೋಂಡೀರಾಜನು ಒಂದು ಕೈಯಲ್ಲಿ ಖಾದ್ಯ ಪದಾರ್ಥದ ತಾಟನ್ನೂ, ಮತ್ತೊಂದು ಕೈಯಲ್ಲಿ ಮದ್ಯದ ಬಾಟ್ಲಯನ್ನೂ ಹಿಡಿದುಕೊಂಡು ಮನೋರಮೆಯ ಎದುರಿಗೆ ಬಂದು ನಿಂತು, ಮದ್ಯದ ಬಾಟ್ಲಯನ್ನು ಅವಳ ಮುಂದೆ ಇಟ್ಟು ಅಂದದ್ದೇನಂದರೆ—"ಮನೋರಮೆ, ನಿನ್ನ ತಲೆಯಲ್ಲಿ ಏನು ಹುಚ್ಚತನವು ಸೇರಿದೆ? ಈಶ್ವರನಾದರೂ ನಿನಗೆ ಸರ್ವೋತ್ಕೃಷ್ಟವಾದ ರೂಪವನ್ನು ದಯಪಾಲಿಸಿದ್ದಾನೆ; ಅದರಲ್ಲಿ ನಿನಗೆ ಇದೇ ಈಗ ತಾರುಣ್ಯಾವಸ್ಥೆಯು ಪ್ರಾಪ್ತವಾಗಿದೆ. ಈ ಪ್ರಕಾರವಾದ ದೇವರ ಅಮೌಲ್ಯ ದೇಣಿಗೆಯನ್ನು ನೀನು ವ್ಯರ್ಥ ಹರಣ ಮಾಡಿದರೆ, ದೇವರು ನಿನಗೆ ಎಂದೂ ಕಲ್ಯಾಣ ಮಾಡ

ಲಿಕ್ಕಿಲ್ಲ. ಈ ಬಾಟ್ಲಿಯಲ್ಲಿದ್ದ ಮದ್ಯವನ್ನು ನೀನು ಪಾನ ಮಾಡಿದರೆ, ಹೇಳಿ ಕೇಳಿ ನಿನ್ನ ತಲೆಯೊಳಗಿನ ಹುಚ್ಚುತನವು ಹೋಗುತ್ತದೆ. ಹಾಗೆಯೇ ಈ ತಾಟಿನಲ್ಲಿದ್ದ ಖಾದ್ಯ ಪದಾರ್ಥವನ್ನು ತಿಂದರೆ, ನೀನು ಅಪ್ಸರಳಾದರೂ ಆಗುವಿ ", ಎಂದಂದನು.

ಧೋಂಡೀರಾಜನ ಕರ್ಣಕಠೋರ ಶಬ್ದಗಳನ್ನು ಕೇಳಿಯೂ, ದುರ್ಗಂಧ ಪದಾರ್ಥಗಳನ್ನು ನೋಡಿಯೂ ಮನೋರಮೆಗೆ ಬಹಳ ಸಿಟ್ಟು ಬಂದಿತು. ಅವಳು ಜೋರಿನಿಂದ ಕರಸಂಪರ್ಕವನ್ನು ಮಾಡಿ, ಮದ್ಯದ ಬಾಟ್ಲಿಯನ್ನು ತುಣುಕುತುಣುಕಾಗಿ ಮಾಡಿಬಿಟ್ಟಳು. ಮತ್ತು ಧೋಂಡೀರಾಜನ ಕೈಯಲ್ಲಿದ್ದ ಖಾದ್ಯಪದಾರ್ಥದ ತಾಟಿಗೆ, ಒಂದು ಸಾರೆ ಕಾಲಿನ ಆಘಾತ ಮಾಡಲು ಅದೂ ದೂರ ಬಿದ್ದಿತು, ಅದರಲ್ಲಿದ್ದ ಖಾದ್ಯ ಪದಾರ್ಥವು ದಿಕ್ಕಾಪಾಲಾಗಿ ಹೋಯಿತು. ಆಗ ಮನೋರಮೆಯು ಕ್ರುದ್ಧ ಸ್ವರದಿಂದ:– "ಮೂರ್ಖನೇ, ನೀನು ಇಷ್ಟು ಯಾಕೆ ನನ್ನನ್ನು ಬಳಲಿಸುತ್ತೀ? ಇದರ ಪರಿಣಾಮವು ನಿನಗೆ ಒಳ್ಳೇದಾಗ ಲಿಕ್ಕಿಲ್ಲವೆಂಬುದನ್ನು ನೀನು ಮರೆಯಬೇಡ. ನಾನು ನಿಜವಾಗಿಯೇ ಈಗ ಹುಚ್ಚಿಯಂತೆ ಇದ್ದೇನೆ. ನಾನು ನಿಶ್ಚಯವಾಗಿ ಆತ್ಮಹತ್ಯ ಮಾಡಿಕೊಂಡು, ನಿಮ್ಮನ್ನು ದುಃಖಕ್ಕೆ ಗುರಿಮಾಡುತ್ತೇನೆ. ಚಾಂಡಾಲನೇ, ನಿನ್ನ ದುಷ್ಟತನಕ್ಕೆ ಸೀಮೆಯಿಲ್ಲನಲ್ಲ! ಈ ತರದ ಪಾಪಕೃತ್ಯದ ಪರಿಣಾಮವನ್ನು ನಿನಗೆ ಜನ್ಮ ಜನ್ಮಾಂತರದಲ್ಲಿಯಾದರೂ ಅನುಭೋಗಿಸುವ ಪಾಳಿಯು ಬಂದೇ ಬರುತ್ತದೆ. ನಿನ್ನ ಪಾಪಕೃತ್ಯದ ಸಲುವಾಗಿ ಯಮನು ನಿನಗೊಬ್ಬನಿಗೇ ಬೇರೊಂದು ನರಕವನ್ನು ಸಿದ್ಧಪಡಿಸುತ್ತಾನೆ. ಜೀವಂತನಿರುವಾಗ್ಗೇ ನಿನಗೆ ಆಗಬಾರದ ದುಃಖಗಳು ಆಗಬಹುದು. ಮೂಢನೇ, ಪಾಪದ ಫಲವು ಎಂದಾದರೂ ಆಗುವದೇ. ಧೋಂಡೀರಾಜ, ಸಾಧ್ವಿಯನ್ನು ಗೋಳಾಡಿಸುವದು ಯುಕ್ತವಲ್ಲ. ದುಷ್ಟನೇ, ಸುಮ್ಮನೆ ನರಕಪ್ರಾಪ್ತಿಯ ಸಾಮಗ್ರಿಯನ್ನು ಯಾಕೆ ಸಿದ್ಧಮಾಡಿಕೊಳ್ಳುತ್ತೀ!" ಎಂದಳು.

ಮನೋರಮೆಯು ಕ್ರೋಧವು ಅನಾವರವಾಗಿತ್ತು. ತಾನು ಅಬಲೆಯಾಗಿದ್ದರೂ ಸಬಲನಾದ ಧೋಂಡೀರಾಜನ ಗಲ್ಲಗಳನ್ನು ಹರಿದು ಬಿಡಬೇಕೆಂದು ಅವಳು ಇಚ್ಛಿಸುತ್ತಿದ್ದಳು. ಅವಳು ಪ್ರತಿಯೊಂದು ಶಬ್ದವನ್ನು ಸಿಟ್ಟಿನಿಂದಲೂ, ಆವೇಶದಿಂದಲೂ ಉಚ್ಚರಿಸುತ್ತಿದ್ದಳು. ಆದರೆ ಸುರಾಪಾನದಿಂದ

ಉನ್ಮತ್ತರಾದ ಘೋಂಡೀರಾಜ ಮೊದಲಾದವರ ಮನಸ್ಸಿನಲ್ಲಿ ಹೆಚ್ಚು ಕಡಿಮೆಯಾಗಲಿಲ್ಲ. ತಿರುಗಿ ಮಾಧವರಾವ-ಘೋಂಡೀರಾಜರು ಮತ್ತೆ ಸುರಾಪಾನ ಮಾಡಿ ತೀರ ಉನ್ಮತ್ತರಾಗಿ ಮನೋರಮೆಯು ಸತೀತ್ವವನ್ನು ನಾಶೀಕರಿಸಲಿಕ್ಕೆ ಪ್ರಯತ್ನಿಸಲು ಅವಳು ಗಟ್ಟಿಯಾಗಿ 'ಓಡಿಬರ್‍ರಿ ಓಡಿಬರ್‍ರಿ' ಎಂಬದಾಗಿ ಎಷ್ಟೋ ಸಾರೆ ಹಲಬಿದಳು. ಆದರೆ ಆತ್ಮಹತ್ಯ ಮಾಡಿಕೊಳ್ಳುವ ಹೊರ್ತು ಗತಿಯಿಲ್ಲವೆಂದು ಅವಳಿಗೆ ಪೂರ್ಣ ದೃಢವಾಯಿತು. ಕಡೆಗೆ ಮೇಲ್ಮಾಳಿಗೆಯ ಮೇಲಿಂದ ಕೆಳಗೆ ಧುಮುಕಿ ಬಿಡಬೇಕೆಂದು ಅವಳು ನಿಶ್ಚಯಿಸಿ, ಮಾಧವರಾವ-ಘೋಂಡೀರಾಜರು ತನ್ನ ಸಮೀಪದಲ್ಲಿ ಬರುತ್ತಲೇ ಆ ಅಬಲೆಯು ಗಟ್ಟಿ ಮನಸ್ಸು ಮಾಡಿ ಮೇಲ್ಮಾಳಿಗೆಯ ಮೇಲಿಂದ ಕೆಳಗೆ ಹಾರಿಕೊಂಡಳು.

## ೧೦ ನೆಯ ಪ್ರಕರಣ—ಶೋಧ.

ನಾಲ್ಕೈದು ದಿವಸವಾದರೂ ವೇಣುವಿನ ಶೋಧವಾಗಲಿಲ್ಲ. ಅವಳ ಹೊಂದಿದವರೆಲ್ಲ ಅವಳ ಸಂಬಂಧವಾದ ಚಿಂತೆಯಲ್ಲಿ ಕೊರಗುತ್ತಿದ್ದರು. ಅವಳ ಮಾತೆಗೂ, ಅವಳ ತಮ್ಮನಿಗೂ ಆದ ದುಃಖವನ್ನು ವರ್ಣಿಸಲಸಾಧ್ಯವಾಗಿತ್ತು. ವೇಣುವಿನ ಮಾತೆಗೆ ಯಾವತ್ತೂ ಜಗತ್ತು ಶೂನ್ಯಮಯವಾಗಿ ಕಾಣಿಸುತ್ತಿತ್ತು. ವೇಣೂ, ವೇಣೂ ಎಂದು ಹಲುಬಿ ಅವಳ ಧ್ವನಿಯು ಕುಗ್ಗಿಹೋಗಿತ್ತು. ವೇಣುವು ಇಲ್ಲದ್ದರಿಂದ ಮನೆ, ತೋಟ ಮೊದಲಾದವುಗಳಿಗೆ ಔದಾಸೀನ್ಯವು ಪ್ರಾಪ್ತವಾಗಿತ್ತು. ವೇಣುವಿನ ವಿಶ್ರಾಂತಿಯ ಕೋಣೆಯು ಭಯಂಕರವಾಗಿ ಕಾಣಿಸುತ್ತಿತ್ತು. ಅವಳು ಓದುವ ಪುಸ್ತಕಗಳು ಅತ್ತೊಂದು ಇತ್ತೊಂದು ಬಿದ್ದಿದ್ದವು. ಅವಳ ಎಲ್ಲ ವಸ್ತುಗಳು ಧೂಳವನ್ನು ತಿಂದು ತಿಂದು ಕೆಲಸವಿಲ್ಲದೆ ಪುಷ್ಟಿಯಾಗಿ ಮೂಲೆಮೂಲೆಗೆ ಬಿದ್ದಿದ್ದವು. ವೇಣುವಿನ ಪುಸ್ತಕ-ಪಲಂಗ ಮೊದಲಾದವುಗಳು ಇಂದಿರಾಬಾಯಿಯ ದೃಷ್ಟಿಗೆ ಬಿದ್ದವೆಂದರೆ, ಅವಳಿಗೆ ಒಮ್ಮೆಲೇ ದುಃಖರೂಪವಾದ ಭಾರವು ಶರೀರದ ಮೇಲೆ ಬಿದ್ದಂತಾಗಿ ಅವಳು ಗಕ್ಕನೆ ನೆಲ ಹಿಡಿದು ಕುಳಿತುಕೊಳ್ಳುತ್ತಿದ್ದಳು. ವೇಣುವಿನ ಧ್ಯಾಸದಿಂದ ಇಂದಿರಾಬಾಯಿಗೆ ಅನ್ನ-ನೀರು-ನಿದ್ರೆಗಳ ಸ್ಮರಣೆಯಾಗುತ್ತಿದ್ದಿಲ್ಲ. ಕೃಷ್ಣರಾಯನಂತೂ ಪ್ರಿಯ ವೇಣೂ

ವಿಯೋಗದಿಂದ ತೀಶ ನಿದ್ರಾ-ಹಾರಗಳನ್ನು ಮರೆತುಬಿಟ್ಟಿದ್ದನು. ವೇಣುವು ಎಲ್ಲಿ ದೊರೆತಾಳು, ಹೇಗೆ ದೊರೆತಾಳು, ಯಾವಾಗ್ಗೆ ದೊರೆತಾಳು ಎಂಬ ಕಲ್ಪನೆಗಳ ಹೊರ್ತು ಅವನಿಗೆ ಇತರ ಕಲ್ಪನೆಯಿದ್ದಿಲ್ಲ. ಅವನ ಪ್ರಕಾಶಿತ ವಾದ ಮುಖವು ಶ್ರೀಹೀನವಾಗಿತ್ತು. ನಾಲ್ಕೈದು ದಿವಸಗಳ ಚಿಂತೆಯಿಂದ ಅವನು ಉತ್ಸಾಹಹೀನನಾಗಿದ್ದನು. ಅವನು ೨೪ ತಾಸಿನ ದಿವಸವನ್ನು ವೇಣುವಿನ ಧ್ಯಾಸದಲ್ಲಿಯೇ ಕಳೆಯುತ್ತಿದ್ದನು.

ಒಂದು ದಿವಸ ಸಂಧ್ಯಾಕಾಲದಲ್ಲಿ ಕೃಷ್ಣರಾಯನು ಬೇಸರ ಪರಿಹಾರಾ ರ್ಥವಾಗಿ ತಮ್ಮ ಪುಷ್ಪವಾಟಿಕೆಯಲ್ಲಿ ಕುಳಿತಿದ್ದನು. ಆ ವೇಳೆಯು ಬಹಳ ಮನೋಹರವಾಗಿತ್ತು. ಸಂಧ್ಯಾಕಾಲದ ಸೂರ್ಯನ ಕಿರಣಗಳು ಸರ್ವತ್ರ ಹರಡಿದ್ದವು. ಮಂದವಾಯುವು ಸುಳಿದಾಡುತ್ತಿತ್ತು. ಗಾಳಿಯ ಯೋಗದಿಂ ದ ಗಿಡಗಳು ಅಗಳಾಡುತ್ತಿದ್ದವು; ಬಳ್ಳಿಗಳು ಕುಣಿಯುತ್ತಿದ್ದವು. ಸುವಾಸಿಕ ಪುಷ್ಪವೃಕ್ಷಗಳ ಕಡೆಯಿಂದ ಗಾಳಿಯು ಬೀಸುತ್ತಿದ್ದದರಿಂದ, ಎಲ್ಲ ಕಡೆಗೂ ಸುಗಂಧವು ತಲೆದೋರುತ್ತಿತ್ತು. ನಾನಾತರದ ಪಕ್ಷಿಗಳು ಕಿಲಿಕಿಲಿ ಸ್ವರವ ನ್ನು ಮಾಡುತ್ತ ಅತ್ತಿತ್ತ ಹಾರಾಡುತ್ತಿದ್ದವು. ನೀರಿನ ಸಣ್ಣ ಸಣ್ಣ ಕುಂಡಲ ಗಳಲ್ಲಿ ಜಲಚರ ಪ್ರಾಣಿಗಳು ಆನಂದದಿಂದ ಕ್ರೀಡಿಸುತ್ತಿದ್ದವು. ಆ ತೋಟ ದಲ್ಲಿ ನಾಲ್ಕು ಮಂಗಗಳು ಆ ಗಿಡದಿಂದ ಈ ಗಿಡಕ್ಕೆ, ಈ ಗಿಡದಿಂದ ಆ ಗಿಡ ಕ್ಕೆ ಹಾರಾಡುತ್ತಿದ್ದವು. ಇಂಥ ಅನೇಕ ಕಾರಣಗಳಿಂದ ಆ ತೋಟಕ್ಕೆ ಸನ್ಮನೋಹರತೆಯು ಪ್ರಾಪ್ತವಾಗಿತ್ತು. ಸಂಧ್ಯಾಕಾಲದಲ್ಲಿ ಬೇಕಾದವರು ಆ ತೋಟದಲ್ಲಿ ಹೋಗಲಿಕ್ಕೆ ಅಡ್ಡಿಯಿದ್ದಿಲ್ಲ. ಆದ್ದರಿಂದ ಅನೇಕ ಜನರು ವಿಶ್ರಾಂತಿಗಾಗಿ ಈ ತೋಟದಲ್ಲಿ ಬಂದು ತಿರುಗಾಡಿ ಹೋಗುತ್ತಿದ್ದರು. ಈ ವೇಳೆಯಲ್ಲಿ ಕೃಷ್ಣರಾಯನು ತನ್ನ ಪ್ರೇಮದ ಬಕುಲವೃಕ್ಷದ ಬುಡದಲ್ಲಿ ಆರಾ ಮದ ಖುರ್ಚಿಯ ಮೇಲೆ ವೇಣುವಿನ ವಿಷಯವಾಗಿ ವಿಚಾರ ಮಾಡುತ್ತ ಕುಳಿ ತಿದ್ದನು. ಅವನ ಪ್ರೀತಿಯ ನಾಯಿಯು ಅವನ ಬಳಿಯಲ್ಲಿಯೇ ಆಡುತ್ತಿತ್ತು. ಆದರೂ ಆ ನಾಯಿಯ ಆಟದಿಂದ ಅವನಿಗೆ ವಿನೋದವೆನಿಸುತ್ತಿದ್ದಿಲ್ಲ. ತೋ ಟದಲ್ಲಿ ಹಿಂಡುಗಟ್ಟಿ ಜನರು ತಿರುಗಾಡುತ್ತಿದ್ದರು. ಕೆಲವರು ಖುರ್ಚಿಗಳ ಮೇಲೆ ಕುಳಿತುಕೊಂಡು, ವಿನೋದದ ಮಾತುಗಳನ್ನಾಡುತ್ತಿದ್ದರು. ಕೆಲ ವರು ಅಡಿಕೆ-ಎಲೆ-ತಂಬಾಕಗಳನ್ನು ಚರ್ವಣ ಮಾಡುತ್ತ ಕುಳಿತಿದ್ದರು.

ಕೆಲವರು ಹಣ್ಣು-ಹಂಪಲಗಳನ್ನು ತಿನ್ನುತ್ತ ಕುಳಿತಿದ್ದರು. ಕೆಲವರು ಶಿಷ್ಟ ಸಾಂಪ್ರದಾಯದಂತೆ ಕೃಷ್ಣರಾಯನ ಹತ್ತರ ಬಂದು, ಅವನ ಕ್ಷೇಮಲಾಭ ಗಳನ್ನು ವಿಚಾರಿಸುತ್ತಿದ್ದರು. ಆಗ ಕೃಷ್ಣರಾಯನು ಅವರ ಕೃತಜ್ಞತೆಯನ್ನು ವ್ಯಕ್ತಪಡಿಸಿ, ತಿರುಗಿ ಅವರ ಕ್ಷೇಮಲಾಭಗಳನ್ನು ವಿಚಾರಿಸುತ್ತಿದ್ದರೂ, ಆ ಕಡೆಗೆ ಅವನ ವಿಶೇಷ ಲಕ್ಷವಿರುತ್ತಿದ್ದಿಲ್ಲ. ವೇಣುವಿನ ಹೊರ್ತು ಅವನ ಮನಸ್ಸಿನಲ್ಲಿ ಎರಡನೆಯ ವಿಷಯವಿದ್ದಿಲ್ಲ. ಯವಾಗಲೂ ವೇಣುವಿನ ವಿಷ ಯವಾಗಿ ವಿಚಾರ ಮಾಡಿ ವಿಚಾರ ಮಾಡಿ, ಅವನ ತಲೆಯು ಕೆಟ್ಟು ಹೋಗಿ ತ್ತು. ಅವನ ಮುಖದ ಮೇಲೆ ನಿರಾಶೆಯ ಲಕ್ಷಣವು ಉತ್ಪನ್ನವಾಗಿತ್ತು. ಅವನಿಗೆ ಯಾವತ್ತೂ ಜಗತ್ತಿನ ವ್ಯಾಪಾರಗಳು ಬೇಡಾಗಿದ್ದವು.

ಇಂದು ವಿಶ್ವನಾಥರಾಯನ ಬೀಗನಾದ ಮಾಧವರಾಯನೂ ಈ ತೋಟಕ್ಕೆ ಬಂದಿದ್ದನು. ಮಾಧವರಾಯನು ಐಟಾದ ಪೋಟಾಕು ಹಾಕಿ ಕೊಂಡಿದ್ದನು. ಅವನು ಇಸ್ತ್ರೀ ಮಾಡಿದ ಬೆಳ್ಳನ್ನ ಬಟ್ಟೆಗಳನ್ನು ಧರಿಸಿ ಕೊಂಡಿದ್ದನು. ತಲೆಯಲ್ಲಿ ಬೆಲೆಯುಳ್ಳ ಜರಿಯ ಪಟಕವನ್ನು ಸುತ್ತಿಕೊಂಡು, ಮೇಲೆ ತುರಾಯದಂತೆ ಪಟಕದ ಚುಂಗು ಬಿಟ್ಟದ್ದನು. ಕಾಲಿನಲ್ಲಿ ಎತ್ತರ ವಾದ ಬೂಟುಗಳನ್ನು ಹಾಕಿಕೊಂಡು, ಜಿರ್‌ಬರ್ ಸಪ್ಪಳವನ್ನು ಮಾಡುತ್ತ ನಗೆಯ ಮುಖದಿಂದ ತಿರುಗಾಡುತ್ತಿದ್ದನು. ತಾನು ಜಹಾಗೀರದಾರನ ಸಂ ಬಂಧಿಕನಾದ್ದರಿಂದ, ತೋಟದಲ್ಲಿ ಬಂದ ಕೂಡಲೆ ಕೃಷ್ಣರಾಯನು ತನ್ನನ್ನು ಕರೆದು ಹತ್ತರ ಕುಳ್ಳಿರಿಸಿಕೊಳ್ಳುತ್ತಾನೆಂದು ಅವನು ತಿಳಿದುಕೊಂಡಿದ್ದನು. ಆದರೆ ಅದರಂತೆ ಕೃಷ್ಣರಾಯನು ತನ್ನನ್ನು ಸನ್ಮಾನಿಸದ್ದರಿಂದಲೂ, ಸುರಾ ಪಾನ ಮಾಡಿದ್ದರಿಂದಲೂ, ಅವನಿಗೆ ಕೋಪವು ಬರಲಿಕ್ಕೆ ವೇಳೆಯು ಬೇಕಾ ಗಲಿಲ್ಲ. ಸ್ವಲ್ಪ ಹೊತ್ತು ತಿರುಗಾಡುವದು ಆದಮೇಲೆ ಕೃಷ್ಣರಾಯನು ಕುಳಿತ ಸ್ಥಳದ ಸಮೀಪದಲ್ಲಿ ತಿರುಗಾಡಹತ್ತಿದನು. ಆದರೂ ಅವನ ಕಡೆಗೆ ಕೃಷ್ಣ ರಾಯನ ಲಕ್ಷವು ಹೋಗಲಿಲ್ಲ. ಆದರಿಂದಂತೂ ಕೃಷ್ಣರಾಯನ ಕೋಪಬಾ ಹುಲ್ಯಕ್ಕೆ ಸೀಮೆಯಿರಲಿಲ್ಲ. ಆದರೆ ಮಾಡುತ್ತಾನೇನು ಮನಸ್ಸಿನಲ್ಲಿ ಉತ್ಪ ನ್ನವಾದ ಸಿಟ್ಟನ್ನು ಮನಸ್ಸಿನಲ್ಲಿಯೇ ಅಡಕುಮೆಟ್ಟುತ್ತ ತಿರುಗಾಡುತ್ತಿದ್ದನು. ದುರ್ಜನರಿಗೆ ಅಪಮಾನವನ್ನು ಸಹಿಸಿಕೊಳ್ಳುವದಾಗುವದಿಲ್ಲವೆಂಬುವದೂ, ಅವರಿಗೆ ಮೊದಲು ಶರಣಾರ್ಥಿ ದೂಪಾರ್ಥಿ ಮಾಡಬೇಕೆಂಬುವದೂ ಕೃಷ್ಣ

ರಾಯನಿಗೆ ಗೊತ್ತಿತ್ತು. ಆದರೆ ಅವನು ತನ್ನ ಚಿಂತೆಯಲ್ಲಿ ಮಗ್ನನಾದ್ದರಿಂದ ಅವನ ಲಕ್ಷವು ಸ್ವಲ್ಪಾದರೂ ಮಾಧವರಾಯನ ಕಡೆಗೆ ಬೀಳಲಿಲ್ಲ. ಎಷ್ಟೋ ಹೊತ್ತು ತನ್ನನ್ನು ಕೃಷ್ಣರಾಯನು ಮಾತಾಡಿಸ್ಯಾನು ಮಾತಾಡಿಸ್ಯಾನು ಎಂದು ಹಾದಿಯನ್ನು ನೋಡಿ ನೋಡಿ ಬೇಸತ್ತು, ತಾನೇ ಮೊದಲು ಕೃಷ್ಣರಾಯನನ್ನು ಮಾತಾಡಿಸಬೇಕೆಂದೂ, ಮಾತುಮಾತಾಡುತ್ತ ಅವನನ್ನು ನಿಂದಿಸಬೇಕೆಂದೂ ಆಲೋಚಿಸಿ, ಮಾಧವರಾಯನು ಕೃಷ್ಣರಾಯನ ಹಿಂದೆ ನಿಂತುಕೊಂಡು ಗಟ್ಟಿಯಾಗಿ ಖೋಖೋಖೋ ಎಂದು ನಕ್ಕನು. ಆ ನಗೆಯನ್ನು ಕೇಳಿ ಕೃಷ್ಣರಾಯನು ಒಮ್ಮೆಲೇ ಹಿಂದಕ್ಕೆ ತಿರುಗಿ ನೋಡಿದನು. ಮಾಧವರಾಯನು ಖೋಖೋಖೋ ಎಂದು ನಗುತ್ತ ನಿಂತಿದ್ದನು. ಕೃಷ್ಣರಾಯನ ದೃಷ್ಟಿಯು ತನ್ನ ಕಡೆಗೆ ಹೊರಳಿದ್ದನ್ನು ನೋಡಿ ಮಾಧವರಾಯನು ಅಂದದ್ದೇನಂದರೆ:—“ ಹೇಗೆ ಅದೆ ಕೃಷ್ಣರಾವ ” ಹೀಗನ್ನುತ್ತ ಮಾಧವರಾಯನು ತಿರುಗಿ ನಗಹತ್ತಿದನು. ಅವನ ಶಿಷ್ಟಾಚಾರವನ್ನು ನೋಡಿ ಕೃಷ್ಣರಾಯನಿಗೆ ಬಹಳೇ ಆಶ್ಚರ್ಯವಾಯಿತು. ಆದರೂ ಅಸಂಬಂಧವಾಗಿ ತಿರಸ್ಕಾರವನ್ನು ತೋರಿಸದೆ ಕೃಷ್ಣರಾಯನು ಕೆಳಗೆ ಬರೆನಂತೆ ಮಾತಾಡಿದನು.

ಕೃಷ್ಣರಾಯ—“ ತಮ್ಮ ಕೃಪೆಯಿಂದ ನೆಟ್ಟಗದೆ. ಇಂದು ಯಾಕೆ ದಾರಿತಪ್ಪಿ ಇಲ್ಲಿಗೆ ಬಂದಿರಿ. ”

ಮಾಧವರಾಯ:—“ ನಾನು ಯಾಕೆ ದಾರಿತಪ್ಪಲಿ. ನಿಮ್ಮ ಹತ್ತರ ಅವಶ್ಯವಾದ ಕೆಲಸವಿದ್ದದರಿಂದ, ನಾನು ಇಲ್ಲಿಗೆ ಬಂದೆನು. ”

ಕೃಷ್ಣರಾಯ:—“ ಮಾಧವರಾವ, ಇಷ್ಟಾದರೆ ನಮ್ಮ ಮೇಲೆ ಅನುಗ್ರಹ ಮಾಡಿದಂತಾಗುತ್ತದೆ. ನಡೆಯಿರಿ. ಮನೆಗೆ ಹೋಗಿ ಉಪ್ಪರಿಗೆಯ ಕೋಣೆಯಲ್ಲಿ ಕುಳಿತು ಮಾತಾಡೋಣ. ”

ಮಾಧವರಾಯ:—( ತಿರಸ್ಕಾರದಿಂದ ) ನನಗೆ ಕುಳಿತುಕೊಳ್ಳಲಿಕ್ಕೆ ವೇಳೆಯಿಲ್ಲ. ನಾನು ಬೇಗನೆ ಮುಂಬಯಿಗೆ ಹೋಗುವ ಕೆಲಸವದೆ.

ಕೃಷ್ಣರಾಯ:—( ನಗುತ್ತ ) “ ಒಳ್ಳೇದು ” ಇಷ್ಟು ತ್ವರೆಯಿಂದ ಮುಂಬಯಿಗೆ ಹೋಗುವ ಕೆಲಸವಾದರೂ ಏನದೆ ? ”

ಮಾಧವರಾಯ:—“ ಕೆಲಸವೇನೂ ಅಷ್ಟು ಮಹತ್ವದ್ದಿಲ್ಲ. ಅದೇನೇ ಇರಲಿ. ವಿಶ್ವನಾಥರಾಯರು ನಿಮಗೆ ಏನೋ ಒಂದು ಕೆಲಸದ ಸಲುವಾಗಿ ಬರಹೇಳಿದ್ದಾರೆ. ಕಾರಣ ತೀವ್ರ ನೀವು ಅವರಿಗೆ ಭೆಟ್ಟಿಯಾಗಿರಿ. ”

ಕೃಷ್ಣರಾಯ:—" ಒಳ್ಳೇದು. ಸ್ವಲ್ಪ ತಡೆದು ಹೋಗುತ್ತೇನೆ."

ಮಾಧವರಾಯ:—" ನೀವು ಈಗಿಂದೀಗಲೇ ಹೋಗಿ ಅವರ ಭೆಟ್ಟಿಯಾಗಲಿಕ್ಕೆ ಬೇಕು. ತಡಮಾಡಬಾರದು."

ಕೃಷ್ಣರಾಯ:—" ನಾನು ಚಿಂತೆಯಲ್ಲಿ ಮಗ್ನನಾಗಿರುವೆನು. ಅದರಲ್ಲಿ ನನಗೆ ಈಗ ಮಾಡುವ ಕೆಲಸಗಳಾದರೂ ಅನೇಕ ಇರುತ್ತವೆ. ಒಂದರಕ್ಷಣ ಹೊರಗೆ ಹೋಗಲಿಕ್ಕೆ ನನಗೆ ಅವಕಾಶವೂ ಇಲ್ಲ—ಮನಸ್ಸೂ ಇಲ್ಲ. ಆದರೂ ಸ್ವಲ್ಪ ಹೊತ್ತು ತಡೆದು ಆ ಮಹನೀಯರಿಗೆ ಭೆಟ್ಟಿಯಾಗುತ್ತೇನೆ."

ಮಾಧವರಾಯ:—( ಸ್ವಲ್ಪ ಸಿಟ್ಟಿನಿಂದ ) " ತಮಗೆ ಅಂಥ ಕೆಲಸಗಳಾದರೂ ಯಾವು ಇರುವವು. ವಿಶ್ವನಾಥರಾಯರ ಆಜ್ಞೆಯನ್ನು ಉಲ್ಲಂಘಿಸುವವರು ಈ ಅವಂತೀಪುರದಲ್ಲಿ ಯಾರೂ ಇಲ್ಲ. ನೀವು ಮಾತ್ರ ಅವರ ಆಜ್ಞೆಯನ್ನು ಮುರಿಯಲಿಕ್ಕೆ ಯತ್ನಮಾಡುತ್ತೀರಿ? ಇದರಿಂದ ನಿಮ್ಮ ಉದ್ಧಾಮತನಕ್ಕೆ ಅಳತೆಯಿಲ್ಲದಾಯಿತು. ನಿಮಗೆ ಯಾವ ಚಿಂತೆಯದೆಯೆಂದು ಅನ್ನುತ್ತೀರೋ, ಅದು ವೇಣುವಿನ ಚಿಂತೆಯಿರಬಹುದು. ಕೃಷ್ಣರಾವ ವೇಣುವು ನಿಮ್ಮವಳೇ ಏನು? ಅವಳನ್ನು ನಿಮ್ಮವಳನ್ನಾಗಿ ಮಾಡಿಕೊಳ್ಳುವದು ನಿಮ್ಮಿಂದ ಯಾಕೆ, ನಿಮ್ಮ ಅಜ್ಜ—ಮುತ್ತಜ್ಜರಿಂದಲೂ ಆಗದು. ಅವಳು ನಿಮ್ಮ ಕೈಯಲ್ಲಿ ಬೋಕಿಯನ್ನು ಕೊಟ್ಟು, ಹಲ್ಲಮೇಲೆ ಹೆಂಡಿಯನ್ನು ಹೇರಿಕೊಂಡು ಹೋದಳು."

ಕೃಷ್ಣರಾಯ:—( ಶಿಟ್ಟಿಗೆ ಆಸ್ಪದಗೊಡದೆ ) " ನೀವು ಜಹಾಗೀರದಾರರ ಸಂಬಂಧಿಕರಿದ್ದು ಬಾಯಿಗೆ ಬಂದಂತೆ ಮಾತಾಡುವದು ನಿಮ್ಮ ದೊಡ್ಡಿಸ್ತನಕ್ಕೆ ಭೂಷಣವಲ್ಲ."

ಮಾಧವರಾಯ:—" ನನಗೆ ಸಭ್ಯಮನುಷ್ಯನೆಂದಾದರೂ ಅನ್ನಿರಿ. ಅಸಭ್ಯ ಮನುಷ್ಯನೆಂದಾದರೂ ಅನ್ನಿರಿ. ನಾನಂತೂ ನಿಜವಾದ ಮಾತುಗಳನ್ನೇ ಹೇಳುತ್ತೇನೆ. ನಿಮ್ಮನ್ನು ವೇಣುವು ಮನಸಾ ಪ್ರೀತಿಸುತ್ತಾಳೆಂದು ನೀವು ತಿಳಿದುಕೊಳ್ಳುವದು ಬಣಭ್ರಾಂತಿಯೇ ಸರಿ. ವಂಚಕಳಾದ ಅವಳು ಯಾವನನ್ನು ಮೆಚ್ಚಿ ಹೋದಳೋ ಏನೋ."

ಕೃಷ್ಣರಾಯ:—( ಸಿಟ್ಟಿನಿಂದ ) " ಮಾಧವರಾವ, ನಿನ್ನ ಮೈಮೇಲೆ ಎಚ್ಚರವಿದ್ದಂತೆ ಕಾಣುವದಿಲ್ಲ. ಮೂರ್ಖನೇ, ಅಭದ್ರವಾದ ಮಾತುಗಳ

ನ್ನಾಡಲಿಕ್ಕೆ ನಿನಗೆ ಸ್ವಲ್ಪವಾದರೂ ನಾಚಿಕೆಯಿದ್ದಂತೆ ಕಾಣುವದಿಲ್ಲ. ನೀನು ಇಲ್ಲಿಗೆ ಬರುವಾಗ್ಗೆ ಸುರಾಪಾನ ಮಾಡಿಬಂದಂತೆ ಕಾಣುತ್ತದೆ. ವೇಣುವು ನಿನ್ನನ್ನು ಲಗ್ನವಾಗಲಿಲ್ಲವೆಂಬ ನೆವದಿಂದ ಆ ಸಾಧ್ವಿಯನ್ನು ಯಾಕೆ ನಿಂದಿಸುತ್ತೀ? ನಿನಗೆ ಸಿಟ್ಟು ಬಂದರೆ, ಅಥವಾ ಸುರಾಪಾನದಿಂದ ನಿನ್ನ ಬುದ್ಧಿಯು ಭ್ರಮಿಷ್ಟವಾಗಿದ್ದರೆ ನನಗೆ ಸಾವಿರಾರು ನಿಂದ್ಯೋಕ್ತಿಗಳನ್ನಾಡು; ಆದರೆ ಆ ಸುಶೀಲಳಾದ ವೇಣುವಿಗೆ ಮಾತ್ರ ನಿಂದ್ಯದ ಮಾತುಗಳನ್ನಾಡಬೇಡ."

ಆಕಾಲದಲ್ಲಿ ಮಾಧವರಾಯನು ಸುರಾಪಾನದಿಂದ ಉನ್ಮತ್ತನಾಗಿದ್ದನು. ಏನು ಮಾತಾಡಬೇಕು, ಏನು ಮಾತಾಡಬಾರದು ಎಂಬದು ಅವನಿಗೆ ಸ್ವಲ್ಪಾದರೂ ತಿಳಿಯುವಂತಿದ್ದಿಲ್ಲ. ಯಾವ ರೀತಿಯಿಂದಾದರೂ ಕೃಷ್ಣರಾಯನಿಗೆ ಅಪಮಾನ ಮಾಡಬೇಕೆಂದೂ, ಅವನ ಗುಪ್ತಾಲೋಚನೆಯನ್ನು ಹೊರಗೆಡವಬೇಕೆಂದೂ ಮಾಧವರಾಯನ ಸದುದ್ದೇಶವಿತ್ತು. ಕೃಷ್ಣರಾಯನು ಬೇಕಾದಷ್ಟು ಹೃದಯಭೇದಕವಾದ ಮಾತುಗಳನ್ನಾಡಿದರೂ, ಮಾಧವರಾಯನಿಗೆ ನಾಚಿಕೆಯು ಬರಲಿಲ್ಲ.

ಮಾಧವರಾಯ:—"ಅಹಹಾ! ಏನು ವೇಣುವಿನ ಪತಿವ್ರತೆ!! ಅವಳ ಪಾತಿವ್ರತ್ಯವನ್ನು ವರ್ಣಿಸಲಿಕ್ಕೆ ಬರುವಂತಿಲ್ಲ. ಕೃಷ್ಣರಾವ, ನೀವು ನನಗೆ 'ಮೂರ್ಖ ಮೂರ್ಖ' ಎಂದು ಬೊಗಳುತ್ತೀಯಲ್ಲ. ನಾನು ಮೂರ್ಖನೇ? ವೇಣುವು ನಿಜವಾದ ಸಾಧ್ವಿಯಾಗಿದ್ದರೆ, ಮುಂಬಯಿಯಲ್ಲಿ ಪೇಟೇಬಸವಿಯತನವನ್ನು ಮಾಡಲಿಕ್ಕೆ ಯಾಕೆ ಹೋಗುತ್ತಿದ್ದಳು? ಸೂಳಿಗಾರಿಕೆಯನ್ನು ಮಾಡಲಿಕ್ಕೆ ಹೋದ ಆ ನೀಚಳಿಗೆ—ಆಕುಲಹೀನಳಿಗೆ—ಆದುಷ್ಟಳಿಗೆ ಸಾಧ್ವಿ. ಅದರಲ್ಲಿ ಸಾಧ್ವೀಶಿರೋಮಣಿಯೆಂದು ಬೊಗಳುವವನು ನೀನು ಮಹಾ ಮೂರ್ಖನಲ್ಲವೇ—ಅಜ್ಞಾನಿಯಲ್ಲವೇ."

ಸುರಾಪಾನ ಮಾಡಿದ ಮನುಷ್ಯನ ಕೂಡ ಮಾತಾಡುವದರಲ್ಲಿ ಅರ್ಥವಿಲ್ಲೆಂದು ತಿಳಿದು, ಕೃಷ್ಣರಾಯನು ತಣ್ಣಗೆ ಕುಳಿತನು. ಆದರೆ ಮಾಧವರಾಯನು ಹಳಿಹಳಿ ಬೊಗಳುವ ನಾಯಿಯಂತೆ ಬೊಗಳಹತ್ತಿದನು. ಆಗ ಕೃಷ್ಣರಾಯನಿಗೆ ಸುಮ್ಮನೆ ಕೂಡ್ರುವದಾಗಲಿಲ್ಲ.

ಕೃಷ್ಣರಾಯ:—"ಮಾಧವರಾವ, ಸ್ವಲ್ಪ ನಾಲಿಗೆಯನ್ನು ಬಿಗಿಹಿಡಿ. ಬೊಗಳುವ ನಾಯಿಯಂತೆ ಹಳಿಹಳಿ ಬೊಗಳಬೇಡ. ನಿನ್ನ ಮೈಮೇಲೆ

ಎಚ್ಚರವಿಲ್ಲದಿದ್ದರೆ ನಿನ್ನ ಮನೆಗೆ ಹೋಗಿ ಸ್ವಸ್ಥವಾಗಿ ಬಡಿಬಡಿಸುತ್ತ ಕುಳಿತುಕೋ. ಇಷ್ಟು ಹೇಳಿಯೂ ಇನ್ನೂ ಒದರುತ್ತ ಕುಳಿತರೆ ನನ್ನಿಂದ ತಡೆಯುವದಾಗುವದಿಲ್ಲ. ನಿಶ್ಚಯವಾಗಿ ನಿನ್ನನ್ನು ನಮ್ಮ ಆಳು ಮನುಷ್ಯರಿಂದ ಹೊರಗೆ ದೂಡಿಸುತ್ತೇನೆ."

ಕೃಷ್ಣರಾಯನ ಕಠಿಣೋಕ್ತಿಗಳನ್ನು ಕೇಳಿ ಮಾಧವರಾಯನ ಸಂತಾಪಾಗ್ನಿಯು ಪ್ರಜ್ವಲಿಸಿತು. ಸುರಾಪಾನದ ಮದದಿಂದ ಅವನ ಬಾಯಲ್ಲಿ ನಿಚ್ಚಳವಾಗಿ ಶಬ್ದೋಚ್ಚಾರಣೆಯಾಗುತ್ತಿದ್ದಿಲ್ಲ. ಅದರಲ್ಲಿ ಲಗುಲಗು ಮಾತಾಡಲಿಕ್ಕೆ ಮೊದಲು ಬರುತ್ತಿದ್ದಿಲ್ಲ. ಅವನು ಗಳಿಗೆಗೊಂದು ತಾಸಿಗೊಂದು ಶಬ್ದಗಳನ್ನು ಉಚ್ಚರಿಸುತ್ತಿದ್ದನು.

ಮಾಧವರಾಯ:—"ಕೃಷ್ಣರಾವ, ವಿಶ್ವನಾಥರಾಯರಿಗೆ ಗ್ರಾಮದ ಹುಳ-ಹುಪ್ಪಡಿ ಮೊದಲಾಗಿ ಥರಥರ ನಡುಗುತ್ತವೆ. ಅಂಥ ಅಧಿಕಾರವಂತರ ಸಂಬಂಧಿಕನಾದ ನನ್ನನ್ನು ಆಳುಗಳಿಂದ ದೂಡಿಸುವಿಯಾ! "ಬೊಗಳುವ ನಾಯಿಯು ಕಚ್ಚುವದಿಲ್ಲ, ಕಚ್ಚುವ ನಾಯಿಯು ಬೊಗಳುವದಿಲ್ಲ" ಎಂಬಂತೆ ಹೊರಗೆ ದೂಡಿಸುವೆನೆಂದು ಬಾಯಿಂದ ಅಂದಂತೆ ಕೈಯಿಂದ ಮಾಡುವದು ಬಹಳ ಕಠಿಣವದೆ. ಮೂರ್ಖನೇ, ನನ್ನನ್ನು ಹೊರದೂಡುವವನ-ಹೊರದೂಡಿಸುವವನ ಒಂದು ಹಲ್ಲಾದರೂ ಔಷಧಕ್ಕೆ ಬೇಕೆಂದರೆ ಉಳಿಯಲಿಕ್ಕಿಲ್ಲ. ಈಗ ಮತ್ತೊಮ್ಮೆ ವೇಣುವು ಮುಂಬಯಿಯಲ್ಲಿ ವೇಶ್ಯೆಯು ಬಸವಿಯಾಗಿದ್ದಾಳೆಂದು ಅನ್ನುತ್ತೇನೆ. ಇಷ್ಟೇ ಯಾಕೆ ಗ್ರಾಮದಲ್ಲಿ ಈ ಪ್ರಕಾರವಾಗಿ ಡಂಗುರ ಹೊಡೆದು ಹೇಳಲಿಕ್ಕೆ ತಿಳಿಸುತ್ತೇನೆ."

ಮಾಧವರಾಯನ ಹೀನೋಕ್ತಿಗಳನ್ನು ಕೇಳಿ, ಕೃಷ್ಣರಾಯನು ತನ್ನಲ್ಲಿ ಮೂರ್ತಿಮಂತವಾದ ಸರ್ವಕ್ಷಮತೆಯನ್ನು ಒಂದು ಬದಿಗಿಟ್ಟನು. ಅವನು ತನ್ನ ಇಬ್ಬರು ಆಳುಗಳನ್ನು ಕರೆದು:—"ಈ ನೀಚನನ್ನು ಒದ್ದೊದ್ದು ಹೊರಗೆ ಹಾಕಿರಿ." ಎಂದು ತಿಳಿಸಿದನು. ಕೃಷ್ಣರಾಯನ ಆಜ್ಞೆಯಾಗುತ್ತಲೇ 'ಹುಚ್ಚು ನಾಯಿಯನ್ನು ಹೊಡೆಯುವದಕ್ಕೆ ಮುಕ್ಕುರುವಂತೆ' ಅವನ ಆಳುಗಳು ಮಾಧವರಾಯನನ್ನು ಮುತ್ತಿ ಹೊರಗೆ ಹಾಕಲಾರಂಭಿಸಿದರು. ಸುರಾಪಾನದಿಂದ ಮದೋನ್ಮತ್ತನಾದ್ದರಿಂದ ಮಾಧವರಾಯನಿಗೆ ಶಕ್ತಿ-ವಿವೇಕಗಳಿದ್ದಿಲ್ಲ. ಅವನು ಆಳುಮಕ್ಕಳಿಗೂ, ಕೃಷ್ಣರಾಯನಿಗೂ, ವೇಣುವಿಗೂ ಆಡ

ಬಾರದ-ಕೇಳಬಾರದ ಮಾತುಗಳನ್ನಾಡುತ್ತಿದ್ದನು. ಮನಸ್ಸಿಗೆ ತಿಳಿದಂತೆ ಒದರುತ್ತಿದ್ದನು. ತಾನು ಏನು ಮಾಡುತ್ತೇನೆಂಬುವದೂ, ತಾನು ಏನು ಮಾತಾಡುತ್ತೇನೆಂಬುವದೂ, ತಾನು ಎಲ್ಲಿ ಇದ್ದೇನೆಂಬುವದೂ ಅವನಿಗೆ ಸ್ವಲ್ಪವಾದರೂ ಅರುವು ಇದ್ದಿಲ್ಲ. ಆಳುಗಳು ಅವನನ್ನು ಎಳಕೊಂಡು ಬಂದು ಉದ್ಯಾನವನದ ಹೆಬ್ಬಾಗಿಲಿನ ಹತ್ತರ ತಂದರು. ಮಾಧವರಾಯನಿಗೆ ಎದ್ದು ನಿಲ್ಲಲಿಕ್ಕೆ ಶಕ್ತಿಯಿದ್ದಿಲ್ಲ. ಆಳುಗಳು ಅವನ ಕೈಗಳನ್ನು ಬಿಡುವದೊಂದೇ ತಡ, ಅವನು ದೊಪ್ಪನೆ ನೆಲಕ್ಕೆ ಬಿದ್ದನು. ಮಾಧವರಾಯನ ಮೂರ್ತಿಯು ಬೀದಿಯಲ್ಲಿ ಬಿದ್ದ ಕೂಡಲೆ ವಿನೋದಗಾರರ ಹಾಸ್ಯಕ್ಕೆ ಅಳತೆಯಿಲ್ಲದಾಯಿತು. ಮಾಧವರಾಯನು ಏನೋ ಬಾಯಿಂದ ವಟವಟ ಅನ್ನುತ್ತಿದ್ದನು. ಮೆಲ್ಲನೆ ಮೆಲ್ಲನೆ ಮಾಧವರಾಯನ ಕೂಗಾಟವೂ, ಒದರಾಟವೂ, ಚೀರಾಟವೂ, ಮನ ಬಂದಂತೆ ಪದಗಳನ್ನು ಹಾಡುವದೂ ಪ್ರಾರಂಭವಾದವು. ಜನರಿಗೆ ಇದೊಂದು ಬೇಸರ ಪರಿಹಾರದ ಆಟವು ಸಿಕ್ಕಂತಾಯಿತು. ಕೆಲವರು ಅವನಿಗೆ ತರ ತರದ ಪ್ರಶ್ನೆಗಳನ್ನು ಮಾಡುತ್ತಿದ್ದರು, ಕೆಲವರು ಅವನ ಮೈಮೇಲಿನ ಅರಿವೆಗಳನ್ನು ಎಳೆಯಹತ್ತಿದರು, ಕೆಲವರು ತಿರಸ್ಕಾರವನ್ನು ದರ್ಶಿಸುತ್ತ ಹೊರಟು ಹೋಗುತ್ತಿದ್ದರು. ಮಾಧವರಾಯನು ಬೀದಿಯಲ್ಲಿ ಕತ್ತೆಯಂತೆ ಗುಡುಗುಡು ಹೊರಳಾಡುತ್ತಿದ್ದನು. ಬೀದಿಯಲ್ಲಿ ಬಿದ್ದ ಮಣ್ಣಿನ ಹುಡಿಯೆಲ್ಲ ಮಾಧವರಾಯನ ಮೈಮೇಲೆ ಆದ್ದರಿಂದ ಅವನು ಮಣ್ಣಿನ ಗೊಂಬೆಯಂತೆ ಕಾಣಿಸುತ್ತಿದ್ದನು. ಈ ಸ್ಥಿತಿಯನ್ನು ನೋಡಿ ಕೃಷ್ಣರಾಯನಿಗೆ ಬಹಳ ದುಃಖವೆನಿಸಿತು. ಅವನು ತನ್ನ ಮನೆಯ ಗಾಡಿಯಲ್ಲಿ ಮಾಧವರಾಯನನ್ನು ಒಗೆಯಿಸಿ, ವಿಶ್ವನಾಥರಾಯನ ಮನೆಗೆ ತಲುಪುವಂತೆ ಮಾಡಿದನು.

ಇಂದಿನ ದಿವಸ ರಾತ್ರಿ ಕೃಷ್ಣರಾಯನ ಕಣ್ಣಿಗೆ ಕಣ್ಣು ಹತ್ತಲಿಲ್ಲ. ಮಾಧವರಾಯನು ಸುರಾಪಾನದ ಮದದಲ್ಲಿ ಮಾತಾಡಿದ್ದರ ವಿಚಾರವನ್ನು ಕೃಷ್ಣರಾಯನು ರಾತ್ರಿ ಹನ್ನೆರಡು ತಾಸು ಮಾಡಿದನು. ಮಾಧವರಾಯನು ಸುರಾಪಾನದ ಮತ್ತಿನಲ್ಲಿ ಮಾತಾಡಿದ್ದರ ಕಡೆಗೆ ಕೃಷ್ಣರಾಯನು ಲಕ್ಷ್ಯಗೊಡುವ ಕಾರಣವಿದ್ದಿಲ್ಲ. ಆದರೆ ವೇಣುವಿನ ವಿಷಯವಾಗಿ ಪೂಜ್ಯಬುದ್ಧಿಯುಳ್ಳ ಕೃಷ್ಣರಾಯನು ವೇಣುವಿನ ಸಂಬಂಧವಾದ ಬಿರುನುಡಿಗಳನ್ನು ಕಿವಿಯಾರೆ ಕೇಳಿದ್ದರಿಂದ, ಅವನಿಗೆ ವಿಶೇಷ ತಲ್ಲಣವಾಗಿತ್ತು. ನೀರಿನಿಂದ ಹೊರಗೆ

ತೆಗೆದ ಮೀನವು ಕಾದ ಉಸುಬಿನ ಮೇಲೆ ಹೇಗೆ ತಳಮಳಿಸುತ್ತದೆಯೋ ಹಾಗೆ ಕೃಷ್ಣರಾಯನು ಹಾಸಿಗೆಯ ಮೇಲೆ ತಳಮಳಿಸುತ್ತ ಬಿದ್ದಿದ್ದನು. ಸಂತಾಪಾತಿಶಯದಿಂದ ಅವನ ತಲೆಯು ತೀರ ಭ್ರಮಿಷ್ಟವಾಗಿ ಹೋಗಿತ್ತು. ತನ್ನ ಸಂತಾಪವು ಮಾಧವರಾಯನ ಮೇಲಿನದೋ, ಅಥವಾ ವೇಣುವಿನ ಮೇಲಿನದೋ ಎಂಬುವದು ಅವನಿಗೇ ತಿಳಿಯುವಂತಿದ್ದಿಲ್ಲ. ಶರೀರದಲ್ಲಿಯ ರಕ್ತವು ಕಾದು ಸಳಸಳ ಹರಿಯುತ್ತಿತ್ತು; ತಲೆಯ ನರಗಳು ಬಂದೇಸವನೆ ಹಾರುತ್ತಿದ್ದವು; ಪ್ರತಿಕ್ಷಣಕ್ಕೆ ಅವನ ತಲೆಯಲ್ಲಿ ಹೊಸಹೊಸ ವಿಚಾರಗಳು ಹುಟ್ಟುತ್ತಿದ್ದವು. ಮಾಧವರಾಯನ ಮೇಲೆ ಹಲ್ಲು ಕಡಿಯುತ್ತ ಕೃಷ್ಣರಾಯನು ತನ್ನಷ್ಟಕ್ಕೆ ತಾನೇ ಮನಸ್ಸಿನಲ್ಲಿ:—" ನೀಚಾ, ಮಾಧವಾ, ನನ್ನ ಪ್ರತ್ಯಕ್ಷದಲ್ಲಿಯೇ ನನ್ನ ಮುದ್ದು ವೇಣುವಿಗೆ ಅಭದ್ರವಾದ ಮಾತುಗಳನ್ನಾಡಿದಿಯಾ! ನಾನು ಜೀವಂತನಿದ್ದು ವೇಣುವಿಗೆ ಆಡಿದ ನಿಂದ್ಯೋಕ್ತಿಗಳನ್ನು ಕಿವಿಯಾರೆ ಕೇಳಿ ಸುಮ್ಮನೆ ಇರಲಿಕ್ಕೆ ನಾನು ಹೆಸರಿಗೆ ಮಾತ್ರ ಪುರುಷನಲ್ಲ; ಪುರುಷರಿಗೆ ಇರುವ ನಿಜವಾದ ಪೌರುಷವು ನನ್ನಲ್ಲಿಯೂ ಇರುತ್ತದೆ. ತುಡಗಾ, ಕ್ಷಣಮಾತ್ರದಲ್ಲಿ ಬಂದೇ ಗುದ್ದಿನಿಂದ ನಿನ್ನ ಪ್ರಾಣವನ್ನು ಕಳೆಯುವ ಸಾಮರ್ಥ್ಯವು ನನ್ನಲ್ಲಿ ಅಡಗಿದೆ. ಯಾಕೆ ನಿನ್ನನ್ನು ಆಗ್ಗೇ ಜೀವನ್ಮುಕ್ತನನ್ನಾಗಿ ಮಾಡುತ್ತಿದ್ದೆನು: ಆದರೆ ಜನರು ನನಗೆ ಹೆಸರಿಟ್ಟಾರೆಂದೂ, ನನ್ನ ಮನೆತನಕ್ಕೆಲ್ಲ ಕಲಂಕವು ಪ್ರಾಪ್ತವಾದೀತೆಂದೂ ತಿಳಿದು ನಿನಗೆ ಹಾಗೇ ಬಿಟ್ಟೆನು. ಇದು ನಿನ್ನ ಸುದೈವವೆಂದು ತಿಳಿ. ನನ್ನ ಮನಸ್ಸಿನಲ್ಲಿ ನಿನ್ನನ್ನು ಚನ್ನಾಗಿ ತಳಿಸಿಕಳಿಸಬೇಕೆಂದು ಆಲೋಚನೆಯು ಬಂದಿತ್ತು; ಆದರೆ ಸುರಾಪಾನದಿಂದ ಉನ್ಮತ್ತನಾದ ಮನುಷ್ಯನನ್ನು ತಳಿಸುವದು ಯುಕ್ತವಲ್ಲೆಂದು ತಿಳಿದು, ನಿನ್ನನ್ನು ಸುಮ್ಮನೆ ಬಿಟ್ಟೆನು." ಈ ಪ್ರಕಾರ ಆಲೋಚಿಸುತ್ತ ಅವನು ಎಷ್ಟೋ ವೇಳೆಯ ವರೆಗೆ ಸ್ವಸ್ಥವಾಗಿ ಬಿದ್ದುಕೊಂಡನು. ಆದರೆ ಇಷ್ಟರಿಂದ ಅವನಿಗೆ ಸಮಾಧಾನವಾಗಲಿಲ್ಲ. ಅವನ ತಲೆಯಲ್ಲಿ ಮತ್ತೆ ಬಂದರಹಿಂದೊಂದು ವಿಚಾರಗಳು ಉತ್ಪನ್ನವಾಗಹತ್ತಿದವು. ಈಗ ಅವನ ಮನಸ್ಸಿನಲ್ಲಿ ಬಂದು ತೀರ ವಿಲಕ್ಷಣವಾದ ವಿಚಾರವು ಉತ್ಪನ್ನವಾಯಿತು. ಆ ವಿಚಾರವು ಉತ್ಪನ್ನವಾದ ಕೂಡಲೆ ಅವನು ಹಾಸಿಗೆಯ ಮೇಲಿಂದ ಎದ್ದು ಕುಳಿತನು. ಅವನು ಕೈಯಿಂದ ಹಣೆಯನ್ನು ಹೊಡೆದುಕೊಂಡು, ಮನಸ್ಸಿನಲ್ಲಿ:—" ಕೃಷ್ಣ

ರಾವ, ನೀನು ಆ ವೇಣುವಿನ ಸಲುವಾಗಿ ಯಾಕೆ ಕಳವಳಗೊಳ್ಳುತ್ತೀ?
ಮಾಧವರಾಯನು ತಿರುತಿರುಗಿ ಕೂಗಿ ಹೇಳಿದ ಸಂಗತಿಯು ಯಾಕೆ ನಿಜವಾ
ಗಿರಲಿಕ್ಕಿಲ್ಲ! ವೇಣುವು ನಿಜವಾಗಿ ಮುಂಬಯಿಯ ಶಂಕರಶೇಠಿನಲ್ಲಿ ಸೂ
ಳೆಗಾರಿಕೆಯನ್ನು ಮಾಡುತ್ತಿದ್ದರೆ ಅವಂತೀಪುರದಲ್ಲಿಯೇ ಯಾಕೆ? ಇಡೀ
ಜಗತ್ತಿನಲ್ಲಿ ನಿನಗೆ ಅಪಮಾನವಾಯಿತು. ಛೇ ಛೇ ಕೃಷ್ಣರಾವ, ನೀನೆಂಥ
ಹುಚ್ಚನು! ವೇಣುವಿನ ಕಡೆಯಿಂದ ಇಂಥ ಅವಿಚಾರದ ಪ್ರಸಂಗವು ಆಗು
ವದುಂಟೇ? ಬೇಕಾದಂಥ ಪ್ರಾಣಸಂಕಟವು ಪ್ರಾಪ್ತವಾದರೂ, ಅವಳು ದು
ರ್ಮಾರ್ಗವನ್ನು ಹಿಡಿಯುವವಳಲ್ಲ. ಛೇ ಛೇ ಸದ್ಯಕ್ಕೆ ಅವಳ ಕಡೆಯಿಂದ
ದುರಾಚಾರವಾಗಿರಲಿಕ್ಕಿಲ್ಲವೆಂಬುವದಾದರೂ ಯಾತರ ಮೇಲಿಂದ? ಹೊರ
ಹೊರಗೆ ಗರತಿಯಂತೆ ನಟಿಸಿ ಒಳಬಳಗೆ ವೇಶ್ಯಾವೃತ್ತಿಯನ್ನು ಸ್ವೀಕರಿಸಿದ್ದ
ರೂ ಸ್ವೀಕರಿಸಿರಬಹುದು. ಅಯ್ಯೋ! ನಾನು ಎಷ್ಟು ಮೂರ್ಖನು!! ವಿಶ್ವಾ
ಸಕ್ಕೆ ಯೋಗ್ಯಳೆಂದು ಭಾವಿಸಿದ ವೇಣುವು ನನ್ನನ್ನು ವಂಚಿಸಿದಳು. ಮಾಧ
ವರಾಯನು ಆಗ್ಗೆ ಆಡಿದ ಮಾತುಗಳು ಅಕ್ಷರಶಃ ನಿಜವಿದ್ದರೂ ಇರಬಹು
ದು. ಅವನೂ ವೇಣುವಿನೊಡನೆ ಲಗ್ನವಾಗಬೇಕೆಂಬ ಸದಪೇಕ್ಷೆಯುಳ್ಳವ
ನಾಗಿದ್ದನು. ಕಾರಣ ಅವನೂ ಅವಿಶ್ರಾಂತ ಶ್ರಮವನ್ನು ತಕ್ಕೊಂಡು, ವೇ
ಣುವಿನ ಶೋಧಮಾಡಲು ಪ್ರಯತ್ನಿಸಿರಬಹುದು. ಶೋಧಾಂತ್ಯದಲ್ಲಿ ಅವನಿಗೆ
ವೇಣುವಿನ ನಿಜವಾದ ಸಂಗತಿಯು ಗೊತ್ತಾಗಿರಬಹುದು. ಸುರಾಪಾನದ
ಮದದಲ್ಲಿ ಅವನು ತನಗೆ ಗೊತ್ತಾದ ಎಲ್ಲ ಸಂಗತಿಯನ್ನು ನನ್ನ ಮುಂದೆ
ತೂರಿಬಿಟ್ಟನು. ವೇಣೂ, ನಿನ್ನನ್ನು ನಾನು ಸುಜ್ಞಳೆಂದು ಭಾವಿಸಿದ್ದೆನಲ್ಲ,
ನೀನು ಎಷ್ಟು ಅಜ್ಞಾನಿಯು! ಎಷ್ಟು ಮೂರ್ಖಳು!! ಯಾವನೋ ಒಬ್ಬ
ಸವಿಮಾತಿನ ಚದುರನು ನಿನ್ನನ್ನು ಒಂದೆರಡು ಚುಟುಕೆ ಮಾತುಗಳಿಂದ
ಮೋಹಗೊಳಿಸಿ ಕರಕೊಂಡು ಹೋಗಿರುವನು. ಅಯ್ಯೋ! ನಮ್ಮದು ಸ್ತ್ರೀ
ಯರಲ್ಲಿ ಎಷ್ಟು ವಿಶ್ವಾಸ! ಎಷ್ಟು ನಮಗೆ ಅವರ ಭರವಸವು!! ಅವರ ಸಂ
ಬಂಧವಾಗಿ ನಮಗೆ ಎಷ್ಟು ಪೂಜ್ಯಭಾವವು!!! "ಹೆಂಗಸು ಮಾಯೆ, ಗಂ
ಡಸು ನಾಯಿ" ಎಂದು ಹಿರಿಯರು ಹೇಳುವದು ಸುಳ್ಳಲ್ಲ. ವೇಣೂ ನೀನು
ನಿಜವಾಗಿ ವೇಶ್ಯೆಯಾಗಿರುವಿಯಾ! ಅಹಹಾ!! ವೇಣುವಿನ ಮೇಲೆ ನನ್ನ
ಪ್ರೇಮವೆಷ್ಟು! ಆದರೆ ನನ್ನಂತೆಯೇ ಅವಳಿಗೆ ನನ್ನ ಮೇಲೆ ಸ್ವಲ್ಪಾದರೂ

ಪ್ರೇಮವಿಲ್ಲದೆ ಹೋಯಿತಲ್ಲ. ವೇಣುವು ನನ್ನ ಕೂಡ ಮಾತಾಡಲಿಕ್ಕೆ ಪ್ರಾರಂಭಿಸಿದಳೆಂದರೆ, ಆಗ ನನಗೆ ಅವಳಂಥ ಪವಿತ್ರಳಾದ ಸ್ತ್ರೀಯಳು ಜಗತ್ತಿನಲ್ಲಿ ಅವಳೇ ಎಂದು ನನಗೆ ಭಾಸವಾಗುತ್ತಿತ್ತು. ಆದರೆ ಆ ವೇಣುವೇ ನನ್ನ ಮೋರೆಗೆ ಕಪ್ಪುಹಚ್ಚಿದಳು; ನನ್ನ ಆಶಾವೃಕ್ಷವನ್ನು ಕಡಿದು ಚಲ್ಲಿದಳು; ನನ್ನ ಭಾಗ್ಯರಾಶಿಯನ್ನು ಕದ್ದೊಯ್ದಳು. ಅಹಹಾ! ಎಷ್ಟು ಪ್ರಾರಬ್ಧದ ವಿಲಕ್ಷಣ ಯೋಗಾಯೋಗವು!! ಜಗತ್ತಿನಲ್ಲಿ ಯಾರ ಮೇಲೆ ವಿಶ್ವಾಸವಿಡ ಬೇಕು, ಯಾರ ಕೂಡ ಪ್ರೇಮದಿಂದ ನಡೆಯಬೇಕು, ಯಾರಲ್ಲಿ ಪೂಜ್ಯಭಾವವನ್ನಿಡಬೇಕು. ನನಗೆ ಈ ಜಗತ್ತಿನಲ್ಲಿ ವಿಶೇಷ ಪ್ರೀತಿಯ ವಿಷಯವೆಂದರೆ ವೇಣುವಿನ ವಿಷಯವೇ ಆಗಿತ್ತು; ಆದರೆ ಆ ವಿಷಯವೇ ನನ್ನ ಸರ್ವಾಂಗಕ್ಕೆ ಜಲಾಲ-ವಿಷದಂತೆ ಬಾಧೆಯನ್ನು ಮಾಡಲಾರಂಭಿಸಿದೆ, ನನ್ನ ಅಂತಃಕರಣದಲ್ಲಿ ಒಂದೇಸವನೆ ಉರಿಯುರಿಯಾಗಹತ್ತಿದೆ. ವೇಣುವಿನ ಸಲುವಾಗಿ ಮಾಡಬಾರದವರ ಸಂಗಡ ವೈರತ್ವವನ್ನು ಸಂಪಾದಿಸಿಕೊಂಡೆನು. ಅವಳ ಸಲುವಾಗಿ ಅಮೌಲ್ಯವಾದ ವಿದ್ಯಾಭ್ಯಾಸದ ಹಾಸಿಯನ್ನು ಮಾಡಿಕೊಂಡೆನು. ಅವಳಿಗೆ ನನ್ನ ಕಿಮ್ಮತ್ತು ಸ್ವಲ್ಪಾದರೂ ತಿಳಿಯಲಿಲ್ಲ. ಸಾಕು ಇನ್ನು ವೇಣುವಿನ ವಿಚಾರವು ಸಾಕು. ಎಂಬದಾಗಿ ಆಲೋಚಿಸಿ ನಿದ್ರೆಯನ್ನು ಮಾಡುವದಕ್ಕಾಗಿ ಹಾಸಿಗೆಯ ಮೇಲೆ ಉರುಳಿದನು. ಆದರೆ ಅವನ ಹೃದಯಕ್ಕೆ ಹತ್ತಿದ ಬೆಂಕಿಯು ಅವನಿಗೆ ಸಂಪೂರ್ಣ ಚಿನ್ನೆರಡು ತಾಸು ರಾತ್ರಿ ನಿದ್ರೆಯನ್ನುಮಾಡಗೊಡಲಿಲ್ಲ.

ಮೆಲ್ಲಮೆಲ್ಲನೆ ರಾತ್ರಿಯು ಮುಗಿಯಿತು. ಪೂರ್ವದಿಕ್ಕಿನ ಆಕಾಶದಲ್ಲಿ ಆರಕ್ತತೆಯು ಉತ್ಪನ್ನವಾಗಹತ್ತಿತು. ಬೇಗನೆ ಸೂರ್ಯೋದಯವಾಗಿ ನಾಲ್ಕೂಕಡೆಗೆ ಸೂರ್ಯಪ್ರಕಾಶವು ಹಬ್ಬಿತು. ಇರುಳೆಂಬ ಕಪ್ಪುವಸ್ತ್ರದಿಂದ ಆಚ್ಛಾದಿತವಾದ ಸೃಷ್ಟಿಯು ಹಗಲೆಂಬ ಶುಭ್ರವಸ್ತ್ರದ ಹೊದಿಕೆಯಿಂದ ಚಮಕಿಸಲಾರಂಭಿಸಿತು. ಸೃಷ್ಟಿಯಲ್ಲಿ ಪ್ರಾಪ್ತವಾಗಿದ್ದ ಸ್ತಬ್ಧತೆಯು ನಾಶವಾಯಿತು. ಕೃಷ್ಣರಾಯನು ಸೂರ್ಯೋದಯದ ಮಾರ್ಗವನ್ನೇ ನೋಡುತ್ತಿದ್ದನು. ಆಕಾಶವು ತಾಮ್ರವರ್ಣವಾದ ಕೂಡಲೆ ಅವನು ಎದ್ದು, ಪ್ರಾತರ್ವಿಧಿಯನ್ನು ಮುಗಿಸಿಕೊಂಡು, ತನ್ನ ವಾಚನಾಲಯದಲ್ಲಿದ್ದ ಆರಾಮ ಖುರ್ಚಿಯಮೇಲೆ ಕುಳಿತುಕೊಂಡು ಸೃಷ್ಟಿಸೌಂದರ್ಯದ ದರ್ಶನೀಯತ್ವವನ್ನು

ನೋಡಲಾರಂಭಿಸಿದನು. ಪ್ರಾತಃಕಾಲದ ಶೀತಕಿರಣದ ಪ್ರಶಾಂತ ಪ್ರಕಾಶ ವನ್ನು ನೋಡಿ, ಅವನಿಗೆ ಸ್ವಲ್ಪ ಸಮಾಧಾನವಾಯಿತು. ಕೂಡಲೆ ಅವನು "गड आला पण सिंह गेला" ಎಂಬ ಐತಿಹಾಸಿಕ ಕಾದಂಬರಿಯನ್ನು ಓದುತ್ತ ಕುಳಿತನು. ಅವನು ಆ ಪುಸ್ತಕವನ್ನು ಓದುವದರಲ್ಲಿ ಮಗ್ನನಾದ ಸಮಯದಲ್ಲಿ ೪-೫ ವರ್ಷದ ಸುಸ್ವರೂಪವಾದ ಒಬ್ಬ ಹುಡುಗನು ಅವನ ಹತ್ತರ ನಿಂತುಕೊಂಡನು. ಆ ಹುಡುಗನನ್ನು ನೋಡಿದ ಕೂಡಲೆ ಕೃಷ್ಣರಾ ಯನಿಗೆ ಬಹಳೇ ಸಮಾಧಾನವಾಯಿತು. ಆದರೆ ಕೂಡಲೆ ಅವನ ಮನಸ್ಸಿ ನಲ್ಲಿ ಬೇರೆ ವಿಚಾರವು ಉತ್ಪನ್ನವಾಗಲು, ಅವನು ಆ ಹುಡುಗನನ್ನು ತಿರ ಸ್ಕಾರ ದೃಷ್ಟಿಯಿಂದ ನೋಡಹತ್ತಿದನು. ಆ ಹುಡುಗನಿಗೆ ತಿರಸ್ಕಾರ ಮತ್ತು ಆನಂದ ಇವುಗಳ ಭೇದಾಭೇದವೇ ಗೊತ್ತಿಲ್ಲವಾದ್ದರಿಂದ, ಆ ಹುಡುಗನು ಬಂದ ಕೂಡಲೆ ಸಸ್ಮಿತಸ್ವರದಿಂದ—"ಅಣ್ಣಾ" ಎಂದನು.

ಕೃಷ್ಣರಾಯನಿಗೆ ಆ ಹುಡುಗನು ಉಚ್ಚರಿಸಿದ 'ಅಣ್ಣಾ' ಈ ಶಬ್ದವು ಕರ್ಣಕಠೋರವಾಗಿ ತೋರಿತು. ಅವನು ಯಾವ ವಿಷಯದ ಸಲುವಾಗಿ ರಾತ್ರಿಯಲ್ಲಿ ಮಿತಿಮೀರಿ ಚಿಂತೆಮಾಡಿದ್ದನೋ, ಅದೇ ವಿಷಯವೇ ಮೂರ್ತಿ ಮಂತವಾದ್ದರಿಂದ, ಅವನು ತಿರಸ್ಕಾರದಿಂದ ಆ ಹುಡುಗನಿಗೆ ಅಂದದ್ದೇನಂ ದರೆ—"ಶ್ರೀಪಾದ, ಯಾಕೆ ಬಂದಿ."

ಶ್ರೀಪಾದಮ:—"ಅಣ್ಣಾ ವೇಣುವು—"

ಕೃಷ್ಣರಾಯನು ಶ್ರೀಪಾದನಿಗೆ ಮುಂದೆ ಮಾತಾಡಗೊಡದೆ:—"ಹು ಡುಗಾ, ಆ ನಿನ್ನ ದುಷ್ಟ ವೇಣುವಿನ ಹೆಸರನ್ನು ನಿನ್ನ ಪವಿತ್ರವಾದ ನಾಲಿಗೆ ಯಿಂದ ಉಚ್ಚರಿಸುತ್ತೀ? ಶ್ರೀಪಾದ, ಈಗ ನಿಮ್ಮ ವೇಣುವು ಎಂಥ ನೀ ಚೋದ್ಯೋಗ ಮಾಡುತ್ತಾಳೆಂಬುವ ಜ್ಞಾನವಾದರೂ ನಿನಗಿಲ್ಲದಿರುವದು! ಒಂದು ವೇಳೆ ಆ ಜ್ಞಾನವು ನಿನಗಿದ್ದದ್ದಾದರೆ, ನೀನು ನಿಶ್ಚಯವಾಗಿ ನನ್ನಂತೆಯೇ ವೇಣು ವಿನ ವಿಷಯವಾಗಿ ಸಂತಾಪಗೊಳ್ಳುತ್ತಿದ್ದಿ. ಬೇಡ, ಬೇಡ, ಆ ಚಾಂಡಾಳಿ ಣಿಯ ಹೆಸರನ್ನು ಕೂಡ ನನ್ನ ಕಿವಿಯ ಮೇಲೆ ಹಾಕಬೇಡ!"

ಶ್ರೀಪಾದನಿಗೆ ವೇಣುವಿನ ವಿಷಯವಾಗಿ ಕೃಷ್ಣರಾಯನು ಆಡಿದ ಸಂಗ ತಿಯೇ ತಿಳಿಯಲಿಲ್ಲ. ಅವನು ನಗುತ್ತ ನಗುತ್ತ—"ಅಣ್ಣಾ, ವೇಣುವ ದೊರೆತಳು—ದೊರೆತಳು." ಎಂದನು.

ಅಜ್ಞಾನತ್ವದಿಂದ ಆ ಹುಡುಗನು ನಗುತ್ತ ಮಾತಾಡುವದನ್ನು ಕಂಡು ಕೃಷ್ಣರಾಯನಿಗೆ ಒಂದು ತರದಿಂದ ದುಃಖವೂ, ಮತ್ತೊಂದು ತರದಿಂದ ಸುಖವೂ ಆಯಿತು. ಅವನು ಅಂದದ್ದೇನಂದರೆ—"ಬಾಲಕನೇ, ನಿನಗೆ ಆ ವೇಣುವು ದೊರೆತದ್ದಕ್ಕೆ ಈಗ ಆನಂದವಾಗಿದೆ. ಮುಂದೆ ದೊಡ್ಡವನಾದಿಯೆಂದರೆ, ಅವಳ ಸ್ಥಿತಿಗತಿಯು ತಿಳಿದು, ಅವಳು ಸಿಗದೆ ಆಗಲೇ ಸತ್ತು ಹೋಗಿದ್ದರೆ ನೆಟ್ಟಗಾಗುತ್ತಿತ್ತೆಂದು ನೀನೇ ಅನ್ನುತ್ತೀ. ಶ್ರೀಪಾದ, ಈಗ ಅವಳು ಮುಂಬಯಿಯಲ್ಲಿ ಇರುತ್ತಾಳಂತೇನು?"

ಶ್ರೀಪಾದ—"ಇಲ್ಲ ಅಣ್ಣಾ, ಅವಳು ಇಲ್ಲಿಯೇ ಇದ್ದಾಳೆ."

ಕೃಷ್ಣರಾಯ—(ಬೆರಗಾಗಿ) "ಹಾಗಾದರೆ ಅವಳು ಇಲ್ಲಿಗೆ ಎಂದು ಬಂದಳು:"

ಶ್ರೀಪಾದ—(ಸೊಟ್ಟಮುಸುಡಿ ಮಾಡಿ) "ಈಗೆಲ್ಲಿ ಅವಳು ಮನೆಗೆ ಬರುವದು? ನೀವೇನಾದರೂ ಪ್ರಯತ್ನ ಮಾಡಿದರೆ ಅವಳ ಮೋರೆಯನ್ನು ನಾವೆಲ್ಲ ಕಂಡು ಹಿಗ್ಗುವದು!"

ಕೃಷ್ಣರಾಯ—"ಶ್ರೀಪಾದ, ಅವಳನ್ನು ಹುಡುಕಿ ತರುವದರಿಂದ ನಿಮಗೇನು ಲಾಭವದೆ?

ಶ್ರೀಪಾದ—"(ಕಣ್ಣೀರು ಸುರಿಸುತ್ತ) "ಅವಳನ್ನು ಈ ಗ್ರಾಮದಲ್ಲಿಯೇ ಗೌಪ್ಯವಾಗಿ ಇಟ್ಟಿರುತ್ತಾರೆ. ಅವಳ ಕಷ್ಟವನ್ನು ದೇವರು ಬಲ್ಲನು"

ಕೃಷ್ಣರಾಯ—(ಒಮ್ಮೆಲೆ ಮೇಲಕ್ಕೆದ್ದು) "ಏನು! ಅವಳನ್ನು ಗೌಪ್ಯವಾಗಿ ಇಟ್ಟಿರುತ್ತಾರೆ!! ಯಾರು?"

ಶ್ರೀಪಾದ—(ಕಣ್ಣು ತಿಕ್ಕುತ್ತ) "ಅದು ನಮಗೇನು ಪರಿಚಯ! ನಿನ್ನೆ ನಮ್ಮ ಮನೆಗೆ ಒಬ್ಬ ಗುಣವಂತ ಸ್ತ್ರೀಯು ಬಂದಿದ್ದಳು. ಅವಳು ಅವ್ವನ ಕೈಯಲ್ಲೊಂದು ಪತ್ರವನ್ನು ಕೊಟ್ಟು, ಏನೇನೋ ಹೇಳಿ, ಕೂಡಲೆ ಹೊರಟು ಹೋದಳು. ಅದರ ಮೇಲಿಂದ ಅವ್ವನು ಅಕ್ಕನನ್ನು ಗುಪ್ತವಾಗಿ ಇಟ್ಟಿರುತ್ತಾರೆಂದು ಹೇಳಿದಳು."

ಕೃಷ್ಣರಾಯ—(ಉತ್ಸುಕತೆಯಿಂದ) "ಶ್ರೀಪಾದಾ, ಆ ಪತ್ರವನ್ನು ನೀನು ತಂದಿಡುವಿಯೋ?"

ಶ್ರೀಪಾದ—"ಇದೇ ನೋಡು ಅಣ್ಣಾ."

ಹೀಗೆನ್ನುತ್ತ ಶ್ರೀಪಾದನು ಕಿಸೆಯಲ್ಲಿದ್ದ ಪತ್ರವನ್ನು ಕೃಷ್ಣರಾಯನ ಕೈಯಲ್ಲಿ ಕೊಟ್ಟನು. ಕೃಷ್ಣರಾಯನು ಕೂಡಲೆ ಆ ಪತ್ರದ ಆವರಣವನ್ನು ತೆಗೆದು ಓದಲಾರಂಭಿಸಿದನು.

## ದುಃಖ !

" ಶ್ರೀಯುತ ಕೃಷ್ಣರಾವ ಇವರಿಗೆ. "

" ವೇಣುವು ಅವಂತೀಪುರದಲ್ಲಿಯೇ ಇದ್ದಾಳೆ. ವಿಶ್ವನಾಥರಾಯನು ಧೋಂಡೀರಾಜನ ಕಡೆಯಿಂದ ಅವಳನ್ನು ವಂಚಿಸಿ, ಸ್ವಗೃಹದಲ್ಲಿ ಗೌಪ್ಯವಾಗಿ ಇಟ್ಟಿದ್ದಾನೆ. ತಾವೂ, ವೇಣುವಿನ ತಾಯಿಯಾದ ಕಕ್ಕಿ ಇಂದಿರಾಬಾಯಿಯೂ ವೇಣುವಿನ ಸಲುವಾಗಿ ಚಿಂತೆಮಾಡುತ್ತಾರೆಂದು ನನ್ನ ಕಿವಿಗೆ ಬಿದ್ದದರಿಂದ, ನಾನು ಪ್ರಯತ್ನಮಾಡಿ ಉಪಲಬ್ಧವಾದಷ್ಟು ಸಂಗತಿಯನ್ನು ತಮಗೆ ಅರ್ಪಣ ಮಾಡಿರುತ್ತೇನೆ. ಪ್ರಯತ್ನ ವಿಶೇಷದಿಂದ ನಿಶ್ಚಯವಾಗಿ ಆ ಅಬಲೆಯು ಕಾರಾಗ್ರಹ ಬಂಧನದಿಂದ ಮುಕ್ತಳಾಗುವಳು. "

" ಪತ್ರವನ್ನು ಓದಿದ ಕೂಡಲೆ ಹರಿದು ಒಗೆಯಬೇಕು. ಪತ್ರವು ಅನ್ಯರ ದೃಷ್ಟಿಗೆ ಬಿದ್ದರೆ ಬಹಳ ಭಯಂಕರ ಪರಿಣಾಮವಾದೀತು. ಸಾಧ್ವೀ ಸಂರಕ್ಷಣೆಯಾಗುವದಕ್ಕಾಗಿ ನಾನಿಷ್ಟು ಸಾಹಸಕೃತ್ಯವನ್ನು ಮಾಡಿದ್ದೇನೆ. ನನಗೂ ಧೋಂಡೀರಾಜನಿಗೂ ನಿಕಟಸಂಬಂಧವದೆ. ಕಾರಣ ಈ ಪತ್ರದ ವಿಷಯವಾಗಿ ಅವಿಶ್ವಾಸವನ್ನೂ, ತಿರಸ್ಕಾರವನ್ನೂ ಮಾಡಬೇಡಿರಿ.

" ತಾವು ಆ ವೇಣುವಿನ ಬಿಡುಗಡೆಯ ಪ್ರಯತ್ನವನ್ನು ಮಾಡದಿದ್ದರೆ, ಅವಳು ತನ್ನ ಸತೀತ್ವಸಂರಕ್ಷಣೆಗಾಗಿ ಆತ್ಮಹತ್ಯವನ್ನು ಮಾಡಿಕೊಂಡಾಳು. ಈ ಪತ್ರವನ್ನು ಯಾರು ಬರೆದು ಕಳಿಸಿದ್ದಾರು, ಈ ವಿಷಯವಾಗಿ ವಿಶೇಷ ಚರ್ಚೆಮಾಡದೆ, ಉದ್ಯೋಗಕ್ಕೆ ತೊಡಗಿರಿ ಅಂದರಾಯಿತು.

" ಒಬ್ಬ ಸಾಧ್ವೀ ಸಂರಕ್ಷಣಾಭಿಲಾಷಿ. "

ಪತ್ರವನ್ನು ಓದುವದಾದ ಕೂಡಲೆ ಕೃಷ್ಣರಾಯನು ಆ ಪತ್ರವನ್ನು ಸಣ್ಣಸಣ್ಣ ತುಂಡುಮಾಡಿ, ಕಿಡಿಕಿಯೊಳಗಿಂದ ದೂರ ಚಲ್ಲಿ ಬಿಟ್ಟನು. ಗಾಳಿಯ ಜೋರಿನಿಂದ ಆ ತುಂಡುಗಳು ದೂರ ಹೋಗಿ ಕಾಣದಂತಾದವು. ನಂತರ ಕೃಷ್ಣರಾಯನು ಆ ಹುಡುಗನಿಗೆ ಹೇಳಿದ್ದೇನಂದರೆ:—" ಶ್ರೀಪಾದ, ನೀನು ಮನೆಗೆ ಹೋಗು. ವೇಣುವಿನ ಸಂಬಂಧವಾಗಿ ನಿನಗಿಂತಲೂ ಕೃಷ್ಣರಾಯನಿಗೆ ಹೆಚ್ಚು ಚಿಂತೆಯಿರುತ್ತದೆಂದು ನಿನ್ನ ಹೆತ್ತಮ್ಮನಿಗೆ ಹೇಳು. "

ಕೃಷ್ಣರಾಯನ ಅಪ್ಪಣೆಯಾಗುತ್ತಲೇ ಶ್ರೀಪಾದನು ದುಡುದುಡು ಓಡುತ್ತ ಮನೆಯ ಕಡೆಗೆ ಹೋದನು. ವಿಚಾರಶೂನ್ಯವಾದ ಕೃಷ್ಣರಾಯನ ಹೃದಯವು ಮತ್ತೆ ವಿಚಾರತರಂಗಗಳಿಂದ ತುಂಬಿತು. ತಿರುಗಿ 'ವೇಣೂ' ಈ ಶಬ್ದವನ್ನು ಉಚ್ಚರಿಸಲಿಕ್ಕಿಲ್ಲವೆಂದು ನಿಶ್ಚಯ ಮಾಡಿದ ಕೃಷ್ಣರಾಯನು ಮತ್ತೆ ವೇಣೂ ವೇಣೂ ಎಂದು ಜಪ ಮಾಡಲಿಕ್ಕೆ ಆರಂಭಿಸಿದನು. ಚಿತ್ತಾಕರ್ಷಕವಾದ 'गड आला पण सिंह गेला' ಎಂಬ ಕಾದಂಬರಿಯನ್ನು ಅವನು ಮೂಲಿಗಿಟ್ಟನು. ಆ ಕಾದಂಬರಿಗಿಂತ ಉಪಲಬ್ಧವಾದ ಪತ್ರವು ಅವನ ಮನಸ್ಸಿನ ಮೇಲೆ ಬೇರೊಂದು ವಿಚಿತ್ರತರವಾದ ಪರಿಣಾಮವನ್ನುಂಟು ಮಾಡಿತು. ಸ್ತ್ರೀವಿಷಯ ವಾಸನೆಯೆಂಬ ಭಯಂಕರ ಅಗ್ನಿಯ ಜ್ವಾಲೆಯಿಂದ ಬೆಂಡು ಬೆಂಡಾಗುವದು ತೀರ ತಪ್ಪೆಂದು ತಿಳುಕೊಂಡ ಅವನ ಮನಸ್ಸಿನ ಒಲವು ತೀರ ಬದಲಾಯಿತು. ಕಾದಂಬರಿಯಲ್ಲಿ ಕಮಲಕುಮಾರಿಯು, ತನ್ನ ಪತಿಯು ತನ್ನ ಒಳ್ಳೇ ಪ್ರಾಯದಲ್ಲಿ ನಿಧನನಾದ ಮೇಲೆ ಸತಿ ಹೋಗಲಿಕ್ಕೆ ಮಾಡಿದ ಪ್ರಯತ್ನವನ್ನೂ, ಸತೀತ್ವ ಸಂರಕ್ಷಣೆಗಾಗಿ ಅವಳಿಗೆ ಪ್ರಾಪ್ತವಾದ ಕಷ್ಟಗಳನ್ನೂ, ಅವಳ ಸಖಿ ದೇವಲದೇವಿಯು ಕಮಲಕುಮಾರಿಯ ಸಲುವಾಗಿ ಭೋಗಿಸಿದ ಕಷ್ಟವನ್ನೂ ಓದಿದ ನಂತರ ಎಲ್ಲ ಸ್ತ್ರೀಯರು ಅವಿಚಾರಿಗಳೇ ಆಗಿರುತ್ತಾರೆಂಬ ಅವನ ಕಲ್ಪನೆಯು ಮಣ್ಣುಗೂಡಲಾರಂಭಿಸಿತ್ತು; ಅದರಲ್ಲಿ ವೇಣುವಿನ ಸಲುವಾಗಿ ವಿಪರೀತವಾಗಿ ಭಾವಿಸಿದ ಅವನಿಗೆ ಆ ಪತ್ರವು ಸಿಕ್ಕ ಮೇಲಂತೂ ಅವನ ಕಲ್ಪನೆಯು ತೀರ ಮಣ್ಣುಗೂಡಿತು. ವೇಣುವಿನ ಸಲುವಾಗಿ ಅವನ ಮನಸ್ಸಿನಲ್ಲಿ ಪರಮ ಪೂಜ್ಯಭಾವವು ಉತ್ಪನ್ನವಾಯಿತು. ವೇಣುವಿನ ಬಿಡುಗಡೆಯ ಪ್ರಯತ್ನವನ್ನು ಮಾಡಲಿಕ್ಕೆ ಬೇಕು, ಒಂದು ವೇಳೆ ಆ ಪ್ರಯತ್ನಕ್ಕಾಗಿ ಜೀವವನ್ನಾದರೂ ಕೊಡಬೇಕು. ನಿನ್ನೆಯ ದಿವಸ ಮಾಧವರಾಯನು ಹೆಂಡದ ಮದದಿಂದಲೂ, ಮತ್ಸರದಿಂದಲೂ ಬಡಬಡಿಸಿದನೇ ಹೊರ್ತು ಮತ್ತೇನೂ ಇಲ್ಲ. ಎಂಬದಾಗಿ ವಿಚಾರ ಮಾಡುತ್ತ ಕೃಷ್ಣರಾಯನು ಎಷ್ಟೋ ವೇಳೆಯವರೆಗೆ ಕುಳಿತುಕೊಂಡಿದ್ದನು. ಊಟದ ವೇಳೆಯಾಯಿತೆಂಬುವದರ ಸ್ಮೃತಿಯು ಕೂಡ ಅವನಿಗೆ ತಿಲಾಂಶವಾದರೂ ಇದ್ದಿಲ್ಲ. ಗೋವಿಂದರಾಯನು ಊಟಕ್ಕೆ ಕರೆದ ಕೂಡಲೆ ಕೃಷ್ಣರಾಯನು ಎದ್ದು ಕೆಳಗೆ ಹೋದನು.

---

## ೧೧ನೆಯ ಪ್ರಕರಣ—ವಿಘ್ನ.

ಗೋವಿಂದರಾಯರ ಮನೆಯಲ್ಲಿ ಭೋಜನದ ವ್ಯವಸ್ಥೆಯು ವರ್ಣನೆಪರವಾಗಿತ್ತು. ಅವರ ಮನೆಯಲ್ಲಿ ಪುರುಷರೆಲ್ಲ ಸ್ತ್ರೀಯರೆಲ್ಲ ಬೇರೆ ಬೇರೆ ಪಂಕ್ತಿಯಲ್ಲಿ ಕೂಡ್ರಬೇಕೆಂಬ ನಿಯಮವಿತ್ತು. ಒಬ್ಬರು ಮುಂದೆ, ಒಬ್ಬರು ಹಿಂದೆ, ಯಾರಿಗೆ ಯಾವಾಗ್ಗೆ ಅನುಕೂಲವಾದೀತೋ ಆಗ್ಗೆ ಊಟ ಮಾಡುವ ಅವ್ಯವಸ್ಥಿತವಾದ ಪದ್ಧತಿಯು ಅವರ ಮನೆಯಲ್ಲಿ ಇಲ್ಲದ್ದರಿಂದ, ಇಂದೂ ಗೋವಿಂದರಾಯನೂ, ಕೃಷ್ಣರಾಯನೂ (ತಂದೆಮಕ್ಕಳು) ಒಂದೇ ಪಂಕ್ತಿಯಲ್ಲಿ ಊಟಕ್ಕೆ ಕುಳಿತಿದ್ದರು. ವೇಣುವು ಇಲ್ಲವಾದಂದಿನಿಂದ ಅವಳ ಸಂಬಂಧವಾಗಿ ಮನೆಯಲ್ಲಿ ಪ್ರತಿನಿತ್ಯ ವಾದ-ವಿವಾದಗಳು ನಡೆಯುತ್ತಿದ್ದವು. ಆ ಪ್ರಕಾರ ಇಂದಿನ ದಿವಸದಲ್ಲಿಯೂ ಆ ವಿಷಯವು ಹೊರಟಿತು.

ಗೋವಿಂದರಾಯ:— "ವೇಣುವು ದುರ್ಮಾರ್ಗಿಯಲ್ಲವೆಂಬುವದು ಅವಳ ನಡೆ-ನುಡಿಗಳ ಮೇಲಿಂದ ನನಗೆ ಸ್ಪಷ್ಟವಾಗಿ ತಿಳಿದದೆ."

ಕೃಷ್ಣರಾಯ:— "ಗ್ರಾಮದಲ್ಲಿ ವಿಶ್ವನಾಥರಾಯನ ಕಡೆಯ ಜನರು ಬಹಳವಾಗಿ ಇರುತ್ತಾರೆ. ಮಾಧವರಾಯನ ಸಂಗಡ ವೇಣುವಿನ ಲಗ್ನ ಮಾಡಬೇಕೆಂದು ಅವರು ಅವಳನ್ನು ಕಠಿಣವಾದ ಕಾರಾಗೃಹದಲ್ಲಿ ಇಟ್ಟಿರುತ್ತಾದಾಗಿ ನನಗೆ ಒಬ್ಬ ಮನುಷ್ಯನ ಮುಖಾಂತರ ತಿಳಿದಿರುತ್ತದೆ."

ಕೃಷ್ಣರಾಯನ ಮಾತು ಕೇಳಿ ಗೋವಿಂದರಾಯನಿಗೆ ಪರಮಾಶ್ಚರ್ಯವಾಯಿತು. ಗ್ರಾಮದಲ್ಲಿ ವೇಣುವಿನ ವಿಷಯವಾಗಿ ಮಾತಾಡುವ ಕೇಳ್ನುಡಿಗಳಿಗೆ ಗೋವಿಂದರಾಯನ ವಿಶ್ವಾಸವಿದ್ದಿಲ್ಲ. ವೇಣುವು ಇಲ್ಲವಾದ ಕೂಡಲೆ ಇದರಲ್ಲಿ ವಿಶ್ವನಾಥರಾಯನ ಸಂಬಂಧವಿರಲಿಕ್ಕೆಬೇಕಾಗಿ ಅವನು ಪೂರ್ವಾಲೋಚನೆ ಮಾಡಿದ್ದನು. ಆದರೆ ವಿಶ್ವನಾಥರಾಯನು ಶ್ರೀಮಂತನೂ, ಜಹಾಗೀರದಾರನೂ, ಆನರರಿ ಮ್ಯಾಜಿಸ್ಟ್ರೇಟಾಧಿಕಾರವಂತನೂ ಆಗಿದ್ದರಿಂದ, ಗೋವಿಂದರಾಯನಿಗೆ ಅವನ ಹೆಸರು ತೆಗೆಯುವ ಧೈರ್ಯವಿದ್ದಿಲ್ಲ. ಮತ್ತು "ಪ್ರತ್ಯಕ್ಷ ಕಂಡದ್ದನ್ನು ಪ್ರಮಾಣಿಸಿ ನೋಡಬೇಕೆಂಬ" ಸಾಮತೆಯಂತೆ ನಿಜವಾದ ಸಂಗತಿಯು ಹೊರಬೀಳುವ ಹೊರ್ತು ಪ್ರಯತ್ನ ಮಾಡುವದೂ

ಅವನಿಗೆ ಪ್ರಶಸ್ತವಾಗಿ ತೋರಿದ್ದಿಲ್ಲ. ಇಂದು ಕೃಷ್ಣರಾಯನ ಹೇಳಿಕೆಯ ಮೇಲಿಂದ ಗೋವಿಂದರಾಯನ ಪೂರ್ವಾಲೋಚನೆಯು ಸ್ಥಿರವಾಯಿತು. ತನಗೆ ಖಾತ್ರಿ ಮಾಡಿಕೊಳ್ಳುವದರ ಸಲುವಾಗಿ ಅವನು ಕೃಷ್ಣರಾಯನಿಗೆ ಬೇಕಾದ ಸಂಗತಿಯನ್ನು ಕುರಿತು ವಿಚಾರಿಸಿದನು. ಕೃಷ್ಣರಾಯನು ತನಗೆ ಗೊತ್ತಿದ್ದ ಎಲ್ಲ ಸಂಗತಿಯನ್ನು ಸಾದ್ಯಂತವಾಗಿ ಹೇಳಿದನು. ಆಗ ಗೋವಿಂದರಾಯನಿಗೆ ವಿಶ್ವನಾಥರಾಯನ ಸಂಬಂಧವಾಗಿ ಅನಾವರ ಕೋಪವು ಬಂದಿತು. ಸ್ವಲ್ಪ ವೇಳೆಯ ತನಕ ಏನೋ ವಿಚಾರ ಮಾಡಿದನು.

ಗೋವಿಂದರಾಯ:—"ಕೃಷ್ಣಾ, ನಿನ್ನಾ ಪತ್ರದಲ್ಲಿ ವೇಣುವನ್ನು ಇಂಥಲ್ಲಿಯೇ ಗೌಪ್ಯವಾಗಿ ಇಟ್ಟಿರುತ್ತಾರೆಂದು ಬರೆದಿತ್ತೋ ಹೇಗೆ?"

ಕೃಷ್ಣರಾಯ:—"ಅದು ಹೇಗೋ. ಏನೆಂಬುವದು ಸ್ಮರಣೆಯಲ್ಲಿ ಉಳಿದಿಲ್ಲ. ವಿಶ್ವನಾಥರಾಯನು ಅವಳನ್ನು ಸ್ವಗೃಹದಲ್ಲಿ ಇಟ್ಟಿರುತ್ತಾನೆಂದು ಬರೆದದ್ದು ಮಾತ್ರ ನೆನಪಿನಲ್ಲಿರುತ್ತದೆ."

ಗೋವಿಂದ:—"ಛೇ ಛೇ! ಅವನು ಎಂದೂ ಈತರದ ಸಾಹಸಕೃತ್ಯವನ್ನು ಮಾಡಿಲ್ಲ. ಅವನು ಅವಳನ್ನು ಎರಡನೆಯವರ ಮನೆಯಲ್ಲಿಯಾಗಲಿ, ಅಡವಿಯಲ್ಲಿಯಾಗಲಿ ಇಟ್ಟಿದ್ದಾನು."

ಕೃಷ್ಣರಾಯ:—"ವಿಶ್ವನಾಥರಾಯನು ನಿಶ್ಚಯವಾಗಿ ಅವಳನ್ನು ತನ್ನ ಮನೆಯಲ್ಲಿ ಇಟ್ಟಿರುತ್ತಾನೆ. ಅವನು ಇಂಥ ಸಾಹಸಕೃತ್ಯವನ್ನು ಮಾಡಲಿಕ್ಕೆ ಎಂದೂ ಹೆದರುವವನಲ್ಲ ಅವನು ಅನಂತೀಪುರದಲ್ಲಿ ಪ್ರತಿ ಔರಂಗಜೇಬನಂತೆ ಇರುತ್ತಾನೆ. ತನ್ನ ಮನಸ್ಸಿಗೆ ತಿಳಿದದ್ದನ್ನು ಮಾಡಲಿಕ್ಕೆ ಅವನು ಎಂದೂ ಹಿಂದೆಮುಂದೆ ನೋಡುವದಿಲ್ಲ. ಅವನು ವೇಣುವನ್ನು ಬೇಕಾದಂಥ ಗೌಪ್ಯಸ್ಥಳದಲ್ಲಿ ಇಟ್ಟಿದ್ದರೂ, ಅವಳ ಬಿಡುಗಡೆಯ ಪ್ರಯತ್ನವನ್ನು ಮಾಡಲಿಕ್ಕೆ ಬೇಕು."

ಗೋವಿಂದ:—"ನೀನು ಹೇಳಿದಂತೆ ಮಾಡುವದು ಸುಲಭಸಾಧ್ಯವಲ್ಲ. ಅವಳನ್ನು ಇಂಥ ಸ್ಥಳದಲ್ಲಿಯೇ ಇಟ್ಟಿರುತ್ತಾರೆಂಬುವದು. ಗೊತ್ತಾದರೆ, ಅವಳ ಬಿಡುಗಡೆಯ ಪ್ರಯತ್ನ ಮಾಡಬಹುದು."

ಕೃಷ್ಣರಾಯ:—"ಆದರೆ ಆಸ್ಥಳವು ಗೊತ್ತಾಗುವದೆಂದು? ವೇಣುವಿನ ಬಿಡುಗಡೆಯಾಗುವದೆಂದು? ವೇಣುವಿನ ನಿಜವಾದ ವಾಸಸ್ಥಳವು ಗೊ

ತ್ತಾಗುವತನಕ ವೇಣುವು ಎಲ್ಲಿರುವಳೆಂದು ಯಾರಾದರೂ ಕೇಳಿದರೆ, ನಾವು ವಿಶ್ವನಾಥರಾಯನ ಮನೆಯನ್ನೇ ತೋರಿಸಬೇಕು."

ಗೋವಿಂದ:—"ಹೀಗಾದರೆ ವೇಣುವಿನ ಬಿಡುಗಡೆಯಾದೀತೆಂದು ಹೇಳಲಿಕ್ಕೆ ಬರುವದಿಲ್ಲ."

ಕೃಷ್ಣರಾಯ:—"ಅಪ್ಪಾ, ಅದೇಕೆ? ಈಗಿನ ಮನ್ವಂತರೆದಲ್ಲಿ ವಿಶ್ವನಾಥಯನ ಮೊಗಲಾಯಿತನವು ನಡೆಯಬೇಕಾದಷ್ಟು ನಡೆಯಲಾರದು. ನಾನು ಮುಂಬಯಿಗೆ ಹೋಗಿ ಈ ಸಂಗತಿಯನ್ನು ಪೋಲೀಸರ ಕಿವಿಯ ಮೇಲೆ ಹಾಕುತ್ತೇನೆ. ಒಂದು ಸಾರೆ ಪೋಲೀಸರ ಚವಕಸಿಯು ಪ್ರಾರಂಭ ವಾಯಿತೆಂದರೆ, ವಿಶ್ವನಾಥರಾಯನ ಒಳಗುಟ್ಟು ಹೊರಬಿದ್ದೇ ಬೀಳುತ್ತದೆ. ಪೋಲೀಸರ ಚವಕಸಿಯ ಮುಂದೆ ವಿಶ್ವನಾಥರಾಯನ ಅಧಿಕಾರವೂ, ದಾಂಡಗಾಯಿತನವೂ, ದ್ರವ್ಯವೂ ನಿಲ್ಲಲಾರವು."

ಗೋವಿಂದರಾಯ:—"ಆಯಿತು, ಇಂದು ನೀನು ಮುಂಬಯಿಗೆ ಹೋಗು. ಅಲ್ಲಿಗೆ ಹೋಗಿ ಕೇಶವರಾಯನ ಆಶ್ರಯದಿಂದ ಮಾಡಬೇಕಾದ್ದನ್ನು ಮಾಡು. ಆದರೆ ಮುಪ್ಪಿನ ಕಾಲದಲ್ಲಿ ನನ್ನನ್ನು ಚಿಂತಾಯುಕ್ತನನ್ನಾಗಿ ಮಾಡುವ ಕಾರ್ಯದಲ್ಲಿ ಮಾತ್ರ ಪ್ರವರ್ತನಾಗಬೇಡ. ಮುಂಬಯಿಗೆ ಹೋದ ಮೇಲೆ ನನ್ನ ಸ್ನೇಹಿತರ ಸಹಾಯಕ್ಕೆ ಪಾತ್ರನಾಗು. ಮಾಡಬೇಕಾದ ಸಂಗತಿಯ ಬಗ್ಗೆ ನೀನೂ ಸುವಿಚಾರವನ್ನು ಮಾಡು. ನಂತರ ಕೆಲಸದಲ್ಲಿ ತೊಡಗು. ವಿಶ್ವನಾಥರಾಯನು ಅತ್ಯಂತ ದುಷ್ಟನೂ, ನೀಚನೂ, ನಿರ್ದಯನೂ ಇರುತ್ತಾನೆಂಬುವದು ನಿನಗೆ ಗೊತ್ತಿದ್ದದ್ದಲ್ಲ. ಅವನ ವಿರುದ್ಧ ಪ್ರಯತ್ನವನ್ನು ಮಾಡುವ ನೀನು ಬಹು ಜಾಗ್ರತನಾಗಿರಬೇಕೆಂದು ಬೇರೆ ಹೇಳಬೇಕೆಂಬಂತಿಲ್ಲ. ನೀನು ಮುಂಬಯಿಗೆ ಹೋದ ಮೇಲೆ ನಾನೂ ಸಂಧ್ಯಾಕಾಲದ ಸುಮಾರಕ್ಕೆ ವಿಶ್ವನಾಥರಾಯನ ಕಡೆಗೆ ಹೋಗಿ ಏನಾದರೂ ಹೇಳಿ ನೋಡುತ್ತೇನೆ. ಕೇಳದಿದ್ದರೆ ಮಾಡುವದೇನು. ಊದುವಷ್ಟು ಏನೋ ಊದಿ ನೋಡುವೆನು."

ಕೃಷ್ಣರಾಯ:—"ತಮ್ಮ ಅಪೇಕ್ಷಾನುಸಾರ ಭೆಟ್ಟಿಯಾಗಿರಿ. ಆದರೆ ಭೆಟ್ಟಿಯ ಫಲವು ಸಿಕ್ಕೀತೆಂದು ನನಗಂತೂ ತೋರುವದಿಲ್ಲ."

ನಂತರ ಎರಡನೇ ವಿಷಯವಾಗಿ ಏನೋ ಮಾತಾಡಿ ಇಬ್ಬರು ಊಟ ಮಾಡಿದರು. ಕೃಷ್ಣರಾಯನು ಪ್ರವಾಸದ ಸಿದ್ಧತೆಯನ್ನು ಮಾಡಿಕೊಂಡು,

ಸಾಯಂಕಾಲದ ನಾಲ್ಕು ಹೊಡೆಯುವ ಸುಮಾರಕ್ಕೆ ಡೋಣಿಯಲ್ಲಿ ಕುಳಿತು ಮುಂಬಯಿಗೆ ಹೊರಟನು. ಅವಂತೀಪುರವು ಮುಂಬಯಿಯ ತೀರ ಸಮೀಪದಲ್ಲಿತ್ತು. ಅವಶ್ಯದ ಕೆಲಸವಿದ್ದಾಗ ಆಗಬೋಟಿನ ದಾರಿಯನ್ನು ನೋಡದೆ, ಡೋಣಿಯಲ್ಲಿ ಕುಳಿತು ಹೋಗುವದು ಸುಲಭವಾಗುತ್ತಿತ್ತು. ಆ ಪ್ರಕಾರ ಕೃಷ್ಣರಾಯನು ತನ್ನ ಸಲುವಾಗಿ ಒಂದು ಸ್ವತಂತ್ರ ಡೋಣಿಯನ್ನು ಮಾಡಿಕೊಂಡು ಹೊರಟಿದ್ದನು. ಡೋಣಿಯಲ್ಲಿ ಅವನೂ, ಡೋಣಿಯನ್ನು ನಡೆಸುವ ಮೂವರು ಕೋಳಿ ಜನರೂ ಇದ್ದರು. ಸಂಧ್ಯಾಕಾಲವಾದ್ದರಿಂದ ಗಾಳಿಯು ಮಂದವಾಗಿ ಬೀಸುತ್ತಿತ್ತು. ಸಮುದ್ರವು ಬಹು ಶಾಂತವಾಗಿತ್ತು. ಕೃಷ್ಣರಾಯನ ಡೋಣಿಯು ನಡೆಯುತ್ತ ನಡೆಯುತ್ತ ಮಧ್ಯ ಸಮುದ್ರದಲ್ಲಿ ಹೋಗಹತ್ತಿತು. ಆ ವೇಳೆಯಲ್ಲಿ ಸಮುದ್ರದ ರಮಣೀಯ ದರ್ಶನತ್ವವನ್ನು ನೋಡಿ, ಕೃಷ್ಣರಾಯನಿಗೆ ಮಿತಿಮೀರಿ ಸಮಾಧಾನವಾಯಿತು. ಅವನು ಸ್ವಸ್ಥವಾಗಿ ಡೋಣಿಯಲ್ಲಿ ಕುಳಿತು, ಸಮುದ್ರದ ಶೋಭೆಯನ್ನು ನೋಡುತ್ತಿದ್ದನು. ಅವನ ಮನಸ್ಸಿನಲ್ಲಿ ತನ್ನ ಮುಂದಿನ ಕೆಲಸದ ಸಲುವಾಗಿ ವಿಚಾರವು ನಡೆದಿತ್ತು. ಮುಂಬಯಿಗೆ ಹೋದ ಕೂಡಲೆ ಏನು ಮಾಡಬೇಕು, ಯಾರ ಸಹಾಯವನ್ನು ತೆಗೆದುಕೊಳ್ಳಬೇಕು, ಪೋಲೀಸರ ಕಡೆಗೆ ಯಾವ ಸ್ವರೂಪವಾಗಿ ಫಿರ್ಯಾದೀ ಅರ್ಜಿಯನ್ನು ನಮೂದ ಮಾಡಬೇಕು, ಎಂಬೀ ವಿಷಯಗಳ ಬಗ್ಗೆ ಅವನ ತಲೆಯಲ್ಲಿ ಪುನಃ ಪುನಃ ವಿಚಾರ-ತರಂಗಗಳು ಉತ್ಪನ್ನವಾಗುತ್ತಿದ್ದವು. ವೇಣುವು ಇಲ್ಲವಾದ ಕೂಡಲೆ ಈ ವಾರ್ತೆಯು ನಮ್ಮ ಕಿವಿಗೆ ಬಿದ್ದಿದ್ದರೆ, ಇಷ್ಟರಲ್ಲಿಯೇ ಅವಳ ಬಂಧಮುಕ್ತತೆಯಾಗುತ್ತಿತ್ತು; ಆದರೆ ಅವಳು ನಾಲ್ಕೈದು ದಿನಸವಾದರೂ ಕಾರಾಗ್ರಹವಾಸಿಯಾಗಬೇಕೆಂದು, ಅವಳ ಹಣೆಯಲ್ಲಿ ಬರೆದಿರುವದರಿಂದ ಹಾಗಾಗಲಿಲ್ಲ. ಈಗ ಆದಷ್ಟು ಪ್ರಯತ್ನ ಮಾಡಿ ಅವಳನ್ನು ೧-೨ ದಿನದಲ್ಲಿ ಬಂಧಮುಕ್ತಳನ್ನು ಮಾಡಬೇಕು. ಇತ್ಯಾದಿ ಅನೇಕ ಆಶಾತೀತ ವಿಚಾರಗಳಿಂದ ಅವನು ಒಮ್ಮೊಮ್ಮೆ ಆನಂದ ಹೃದಯನಾಗುತ್ತಿದ್ದನು; ಮತ್ತು ವಿಶ್ವನಾಥರಾಯನ ಅಧಿಕಾರ ಸಾಮರ್ಥ್ಯ ದಾಂಡಗಾಯಿತನ, ದ್ರವ್ಯ, ದುಷ್ಟ ಜನರ ಸಹಾಯ ಮೊದಲಾದ ಕಾರಣಗಳಿಂದ ತಾನು ಹಿಡಿದ ಕಾರ್ಯಕ್ಕೆ ಎಲ್ಲಿ ಅಪಜಯವು ಬರುತ್ತದೆಯೋ ಏನೋ ಎಂಬ ಅಪಮಾನದಿಂದ ಅವನು ಒಮ್ಮೊಮ್ಮೆ ನಿರಾಶಾಹೃದಯನಾಗುತ್ತಿದ್ದನು;

ಮತ್ತು ವಿಶ್ವನಾಥರಾಯನ ಮೇಲೆ ಮಾಡಿದ ಪ್ರಯತ್ನವು ನಿಷ್ಫಲವಾಯಿತೆಂದರೆ, ಅವನು ತನ್ನ ಮೇಲೆ ಅಪಮಾನದ ಅರ್ಜಿಯನ್ನು ಎಲ್ಲಿ ನಮೂದ ಮಾಡುವನೋ, ಏನೋ ಎಂದು ಅವನು ಒಮ್ಮೊಮ್ಮೆ ಭಯಗ್ರಸ್ತನಾಗುತ್ತಿದ್ದನು. ಮತ್ತು ವೇಣುವು ವಿಶ್ವನಾಥರಾಯನಲ್ಲಿಯೇ ದೊರೆತಳೆಂದರೆ, ವಿಶ್ವನಾಥರಾವ-ಭೋಂಡೀರಾಜ-ಮಾಧವರಾಯರಿಗೆ ಯೋಗ್ಯ ಶಿಕ್ಷೆಯಾಗಿ, ವೇಣುವಿನ ಬಿಡುಗಡೆಯಾಗುತ್ತದೆಂದೂ, ಅವಂತೀಪುರದ ಜನರು ಸುಖಭೋಗಿಗಳಾಗುತ್ತಾರೆಂದೂ ನೆನಿಸಿ ಅವನು ಒಮ್ಮೊಮ್ಮೆ ಮನೋರಾಜ್ಯದ ಸಿಂಹಾಸನದಲ್ಲಿ ವಿರಾಜಮಾನನಾಗುತ್ತಿದ್ದನು. ' ಸಮುದ್ರದ ತೆರೆಗಳಿಗಿಂತಲೂ ಮನುಹೃದಯದಲ್ಲಿ ವಿಚಾರತರಂಗಗಳು ಹೆಚ್ಚು ' ಎಂದು ಹಿರಿಯರು ಹೇಳುವಂತೆ ಕೃಷ್ಣರಾಯನ ಹೃದಯಪ್ರಾಂಗಣದ ಮೇಲೆ ಒಂದರ ಹಿಂದೊಂದು ಬೇರೆ ಬೇರೆ ವಿಚಾರಸ್ತಂಭಗಳು ಎದ್ದು ನಿಲ್ಲುತ್ತಿದ್ದವು. ಕೋಳೀ ಜನರು ಲಗುಲಗು ಹೋಗಬೇಕೆಂದು ಡೋಣಿಯನ್ನು ಬಳ್ಳೇ ತ್ವರೆಯಿಂದ ನಡೆಸುತ್ತಿದ್ದರು. ಅವರು ಮುಂಬಯಿಗೆ ಹೋಗುವ ನಿಜವಾದ ಮಾರ್ಗವನ್ನು ಬಿಟ್ಟು ಬೇರೊಂದು ಕಡೆಗೆ ಡೋಣಿಯನು ಒಯ್ಯುತ್ತಿದ್ದರು. ಡೋಣಿಯು ಸಾಗುತ್ತ ಸಾಗುತ್ತ ಇಕ್ಕಟ್ಟಾದ ಪ್ರದೇಶಕ್ಕೆ ಬಂದ ಕೂಡಲೆ ಅವರು ಹುಬ್ಬಿನ ಮೇಲೆ ಕೈಯಿಟ್ಟು ಮುಂದಕ್ಕೆ ನೋಡಿದರು. ಈಪ್ರಕಾರವಾಗಿ ಅವರು ಬಹಳ ಹೊತ್ತಿನ ತನಕ ನೋಡಿ, ಮುಂದೆ ಏನೂ ಡೋಣಿಗಳೂ, ಹಡಗಗಳೂ ಬರುವದಿಲ್ಲವೆಂದು ಖಾತ್ರಿಯಾದ ಕೂಡಲೆ ಚಮತ್ಕಾರಿಕವಾದ ಮಾತುಗಳನ್ನಾಡಹತ್ತಿದರು.

ಕೋಳಿಯವರಲ್ಲಿ ಮೊದಲನೆಯವನು:—" ರಾವಸಾಹೇಬ, ಮಾರ್ಗ ದಪ್ಪಿ ಬಂದೆವು. ಈಗ ಯಾವ ಕಡೆಗೆ ಡೋಣಿಯನ್ನು ನಡೆಸಬೇಕು."

ಕೃಷ್ಣರಾಯ:—( ಭೀತಿಯಿಂದ ) " ಎಲೈ ನಿಮ್ಮ ಆಯುಷ್ಯವೆಲ್ಲ ನೀರಿನಲ್ಲಿಯೇ ಕಳೆದು ಹೋಗಿದ್ದು, ಇಂದು ದಾರಿದಪ್ಪಲಿಕ್ಕೆ ಕಾರಣವೇನು!"

ಎರಡನೆಯವ:—" ರಾವಸಾಹೇಬ, ಇದರ ನಿಯಮವೇನದೆ? ನಾನು ಈ ಸಮುದ್ರವನ್ನು ಬಹಳ ಸಾರೆ ನೋಡಿದ್ದೇನೆ. ಆದರೆ ಇಂದು ಮಾತ್ರ ನನಗೇನೂ ತಿಳಿಯದಂತಾಗಿದೆ."

ಮೂರನೆಯವ:—" ಏನು ಮಾಡಬೇಕು. ಇವರಿಗೆ ಈ ಕಡೆಗೆ ಹೋಗಬೇಡಿರೆಂದು ನಾನು ಹಲವು ಸಾರೆ ಹೇಳಿದರೂ ಇವರು ಕೇಳಲಿಲ್ಲ. ನನ್ನ ತಂದೆಯು ಇದೇ ಕೆಲಸದಲ್ಲಿಯೇ ಮುಪ್ಪಾಗಿದ್ದಾನೆ. ಅವನು ಎಂದೂ ಈ ಡೋಣಿಗೆ ಕೈಹಚ್ಚಿಲ್ಲ. ನೀರಿನಲ್ಲಿ ಬಿಟ್ಟಾಗ ಇದು ಒಂದುಸಾರೆ ತನ್ನಿಂದ ತಾನೇ ನಡೆಯುತ್ತ ಇವತ್ತಿನಂಥ ಇಕ್ಕಟ್ಟಾದ ಪ್ರದೇಶದ ಕಡೆಗೆ ಹೋಗುತ್ತಿತ್ತು. ಆಗ ನಮ್ಮ ತಂದೆಯು ಸಮುದ್ರಕ್ಕೆ ಒಂದು ನರಬಲಿಯನ್ನು ಕೊಡಲು, ಕೂಡಲೆ ಈ ಡೋಣಿಯು ನಿಜವಾದ ಮಾರ್ಗವನ್ನು ಹಿಡಿಯಿತು."

ಮೊದಲನೆಯವ:—" ಈಗ ನರಬಲಿಯನ್ನು ಕೊಡುವ ಹೊರ್ತು ಗತಿಯಿಲ್ಲ. ಈಗ ಬಲಿಗೆ ಯಾರನ್ನು ಈಡು ಮಾಡುತ್ತೀರಿ? ನನ್ನನ್ನೇ ಬಲಿಗೆ ಕೊಟ್ಟು ಬಿಡಿರಿ. ಹೂ, ತಡವೇಕೆ. ನನ್ನನ್ನು ನೀರಿನಲ್ಲಿ ದೂಡಿಬಿಡಿರಿ."

ಕೃಷ್ಣರಾಯ—( ಕಿಸೆಯಲ್ಲಿದ್ದ ಗಡಿಯಾಲದ ಹೋಕಾಯಂತ್ರವನ್ನು ನೋಡಿ) " ಬಲಿಯನ್ನು ಕೊಟ್ಟ ಹೊರ್ತು ಡೋಣಿಯು ನಡಿಯುವದಿಲ್ಲೆಂದು ಯಾವನು ಹೇಳಿದನು? ದೊಡ್ಡ ದೊಡ್ಡ ಉಗಿಹಡಗಗಳಿಗೆ ಸಹ ಬಲಿಯನ್ನು ಕೊಡುವದಿಲ್ಲ. ಹೀಗಿರಲು ಯಃಕಶ್ಚಿತ ನಿಮ್ಮ ಡೋಣಿಗೆ ನರಬಲಿಯನ್ನು ಕೊಡುವದೆಂದರೇನು? ನೀವು ನೆಟ್ಟಗೆ ಪೂರ್ವಕ್ಕೆ ನಡೆಸಿರಿ, ಅಂದರಾಯಿತು."

ಎರಡನೆಯವನು:—" ರಾವಸಾಹೇಬ, ನೀವು ಹೇಳುವನು ನಮಗೆ ತಿಳಿಯುವದಿಲ್ಲ. ಈಗೇನು ಮಾಡಬೇಕು? ಈ ಹೊಟ್ಟೆಯು ಬಹಳ ಕೆಟ್ಟದ್ದದೆ. ಈ ಹೊಟ್ಟೆಯ ಸಲುವಾಗಿ ಮಾಡಬಾರದ ಪಾಪಕೃತ್ಯವನ್ನು ಮಾಡಲಿಕ್ಕೆ ಬೇಕಾಗುತ್ತದೆ. ಈ ಉದರಂಭರಣಕ್ಕಾಗಿಯೇ ಡೋಣಿಯು ಇಂಥ ಇರುಕಿನ ಸ್ಥಳಕ್ಕೆ ಬಂದಿತು."

ಮೂರನೆಯವನು:—" ನಿಮ್ಮನ್ನು ಬಲಿಗೊಡುವ ಹೊರ್ತು ಈ ಡೋಣಿಯು ಹಿಂದಕ್ಕೆ ತಿರುಗುವಂತಿಲ್ಲ. ನಾವು ಮೂವರೂ ಒಂದೇ ವಂಶದವರಾದ್ದರಿಂದ, ನೀವೇ ಬಲಿಗೆ ಯೋಗ್ಯರಾಗುವಿರಿ. ನಿಮ್ಮ ಹೊರ್ತು ಗತಿಯಿಲ್ಲ."

ಕೃಷ್ಣರಾಯ:—( ಹೆದರಿ ) " ಅಪ್ಪಗಳಿರಾ, ಇದೆಂಥ ನಿಮ್ಮ ಮಾತು? ಹೊಟ್ಟೆಗೂ ಬಲಿಗೂ ಏನು ಸಂಬಂಧ? ನೀವು ಮಾತಾಡುವದರ ಅರ್ಥವೇ ನನಗೆ ತಿಳಿಯುವದಿಲ್ಲ."

ಮೊದಲನೆಯವನು:—"ರಾವಸಾಹೇಬ, ಧೋಂಡೀರಾಜರಿಗೂ ತಮಗೂ ನೆಟ್ಟಗಿದ್ದಂತೆ ಕಾಣುವದಿಲ್ಲ. ಅವರು ಇಂದು ತಮ್ಮನ್ನು ಯಮಪುರಿಗೆ ಕಳಿಸುವದಕ್ಕಾಗಿ ನಮಗೆ ಕಳಿಸಿರುತ್ತಾರೆ."

ಕೋಳಿಯುವರ ಮಾತುಗಳನ್ನು ಕೇಳಿ, ಕೃಷ್ಣರಾಯನ ಎದೆಯೊಡೆದು ನೀರಾಯಿತು; ಅಂಗೋಪಾಂಗಗಳೆಲ್ಲ ನಡುಗಹತ್ತಿದವು; ಕಂಠವು ಗದ್ಗದಿತವಾಯಿತು; ಮೈಯಲ್ಲಿ ಬೆವರು ಉತ್ಪನ್ನವಾಯಿತು; ಬಾಯಿಂದ ಅಕ್ಷರಗಳೇ ಹೊರಡದಾದವು. ಅವನು ಗದಗದ ನಡುಗುತ್ತ ಅಂದದ್ದೇನಂದರೆ:—"ಅಪ್ಪಗಳಿರಾ, ಧೋಂಡೀರಾಜನಿಗೂ ನನಗೂ ಇಲಿ-ಬೆಕ್ಕುಗಳಂತೆ ಹಗೆತನವಿರುವದು ನಿಜವು; ಆದರೆ ನಮಗೂ, ನಿಮಗೂ ವೈರತ್ವವಿಲ್ಲ. ಅವನ ಮಾತುಕೇಳಿ ನೀವು ನನ್ನ ಮೇಲೆ ವೈರತ್ವವನ್ನು ಮಾಡಲಿಕ್ಕೆ ನಾನಾದರೂ ನಿಮಗೇನು ಅಂಥಾದ್ದು ಮಾಡಿರುವೆನು."

ಕೋಳಿಯುವರಲ್ಲಿ ಎರಡನೆಯವನು:—"ಇಂದು ನಾವೇ ನಿಮ್ಮ ಕಡು ಹಗೆಗಳು; ನಾವೇ ನಿಮ್ಮ ಪ್ರಾಣ ಹೀರಿಕೊಳ್ಳುವ ಯಮದೂತರು. ಈ ಯಮನ ದಾಸತನಕ್ಕಾಗಿ ನಮಗೆ ಆ ಯಮನಂತಿರುವ ಧೋಂಡೀರಾಜನು; ಒಂದು ಸಾವಿರ ರೂಪಾಯಿಗಳನ್ನು ಝುಣಝುಣ ಎಣಿಸಿ ಕೊಡುತ್ತಾನೆ."

ಕೃಷ್ಣರಾಯ:—"ಒಂದು ಸಾವಿರ ರೂಪಾಯಿಯೆಂದರೆ ಬಹಳ ದೊಡ್ಡ ರಕಮಲ್ಲ. ಒಂದು ಸಾವಿರ ರೂಪಾಯಿಗಾಗಿ ಹತ್ತುಕೋಟಿ ರೂಪಾಯಿ ಕೊಟ್ಟರೂ ಸಿಗದಂಥ ಪ್ರಾಣವನ್ನು ಕಳೆಯುವದು ಯುಕ್ತವಲ್ಲ. ನನ್ನ ಪ್ರಾಣವನ್ನು ಉಳಿಸಿದ್ದಾದರೆ, ನಿಮಗೆ ನಾನು ಎರಡು ಸಾವಿರ ರೂಪಾಯಿ ಕೊಡುತ್ತೇನೆ."

ಎರಡು ಸಾವಿರ ರೂಪಾಯಿಯ ಹೆಸರು ತೆಗೆದಕೂಡಲೆ ಕೋಳಿಯವರ ವಿಚಾರವು ಮೊದಲು ಮೊದಲು ಬದಲಾಗಲಾರಂಭಿಸಿತು. ಸ್ವಲ್ಪ ಹೊತ್ತಿನ ಮೇಲೆ ಅವರು ಪೂರ್ವಸ್ಥಿತಿಗೆ ಬಂದರು. ಅಶಿಕ್ಷಿತ ಜನರ ಕೃತಿಯಲ್ಲಿ ದುರಾಗ್ರಹವು ವಿಶೇಷವಿರುತ್ತದೆ. ಅವರು ಕೊಟ್ಟ ವಚನವನ್ನು ಪರಿಪಾಲಿಸದೆ ಇರುವದು ಅಪರೂಪ. ಧೋಂಡೀರಾಜನು ಕೃಷ್ಣರಾಯನನ್ನು ಸಮುದ್ರದಲ್ಲಿ ದೂಡುವದಕ್ಕಾಗಿ ಕೋಳಿಯವರಿಂದ ಆಣೆ-ಭರವಸವನ್ನು ಮಾಡಿಸಿದ್ದನು. ಕೋಳಿಯುವರು ವಚನ-ಬದ್ಧರೂ, ಭಾವಿಕರೂ ಆಗಿದ್ದ

ರಿಂದ ಕೃಷ್ಣರಾಯನ ಎರಡು ಸಾವಿರ ರೂಪಾಯಿಯ ಕಡೆಗೆ ಅವರ ಮನಸ್ಸು ತಿರುಗಲಿಲ್ಲ. ಅದರಲ್ಲಿ ಕೃಷ್ಣರಾಯನ ಹತ್ತರ ಸದ್ಯಕ್ಕೆ ಅಷ್ಟು ರೂಪಾಯಿಗಳಿಲ್ಲವೆಂಬುವದೂ ಅವರಿಗೆ ಖಾತ್ರಿಯಿತ್ತು.

ಕೋಳಿಯವರಲ್ಲಿ ಒಬ್ಬನು:—"ರಾವಸಾಹೇಬ, ತಮ್ಮ ಹತ್ತರ ಈಗಲ್ಲಿ ಎರಡು ಸಾವಿರ ರೂಪಾಯಿಗಳಿರುತ್ತವೆ?"

ಕೃಷ್ಣರಾಯ:—"ನನ್ನನ್ನು ಮುಂಬಯಿಗೆ ಇಳಿಸಿರಿ, ಇಳಿಸಿದ ಕೂಡಲೆ ಎರಡು ಇಲ್ಲವೆ ಮೂರು ಸಾವಿರ ರೂಪಾಯಿಗಳನ್ನು ತಂದುಕೊಡುತ್ತೇನೆ. ಊರಿಂದ ಬರುವಾಗ್ಗೆ ಮಾರ್ಗದ ಖರ್ಚಿಗಾಗಿ ಬೇಕಾದಷ್ಟು ರೂಪಾಯಿಗಳನ್ನು ತಂದೆನು. ಮುಂಬಯಿಯಲ್ಲಿ ನಾನು ಬೇಡುವದೊಂದೇ ತಡ, ಬೇಕಾದಷ್ಟು ರೂಪಾಯಿಗಳು ಸಿಗುತ್ತವೆ."

ಕೋಳಿಯವನು:—"ವಾಹವ್ವಾ ಕೃಷ್ಣರಾವ, ನಾವು ಹುಚ್ಚರೋ ಹೇಗೆ? ನೀವು ಹೇಳಿದಂತೆ ಕೇಳಲಿಕ್ಕೆ ನಾವೇನು ಹೆಂಡಗುಡಿದು ಬಂದಿಲ್ಲ. ನಮ್ಮ ತಾಯಿಯು ನಮಗೇನು ಕುರಿಹಾಲು ಕುಡಿಸಿ ಬೆಳಿಸಿಲ್ಲ. ನಾವು ನಿಮ್ಮನ್ನು ಮುಂಬಯಿಗೆ ಮುಟ್ಟಿಸಿದವೆಂದರೆ, ನೀವು ಕೂಡಲೆ ನಮ್ಮನ್ನು ಪೋಲೀಸರ ಸ್ವಾಧೀನಮಾಡಿ ಬಿಟ್ಟರೆ ನಾವು ಮಾಡುವದೇನು, ಚಪ್ಪಾಳೆ ಹೊಡೆಯುತ್ತ ಕೂಡ್ರಬೇಕಾದೀತು. ಒಂದು ಸಾವಿರ ರೂಪಾಯಿಗಳೂ ಇಲ್ಲ; ಎರಡೂ ಸಾವಿರ ರೂಪಾಯಿಗಳೂ ಇಲ್ಲ. ನಿಮ್ಮನ್ನು ಮುಂಬಯಿಗೆ ಮುಟ್ಟಿಸಿದ್ದು, ಧೋಂಡೀರಾಜನಿಗೆ ತಿಳಿದರೆ ಅವನು ನಮ್ಮ ಮನೆಮಾರು ಸುಡಿಸಿ, ಹೆಂಡರು ಮಕ್ಕಳನ್ನು ಜಿಗಿಸಿ ಬಿಟ್ಟಾನು"

ಎರಡನೇ ಕೋಳಿಯವ:—(ಮೊದಲನೇ ಕೋಳಿಯವನ ಬಾಯಿಯ ಮೇಲೆ ಕೈಯಿಟ್ಟು) "ಬೇಡ ಬೇಡ, ಅಭದ್ರೋಕ್ತಿಗಳನ್ನು ಉಚ್ಚರಿಸಬೇಡ. ಇವರನ್ನೇ ಸಮುದ್ರದಲ್ಲಿ ದೂಡಿದೆವೆಂದರೆ ಮುಗಿಯಿತು. ಹಾಗೆ ಮಾಡಿದಲ್ಲಿ ಧೋಂಡೀರಾಜನ ಕಡೆಯಿಂದ ಒಂದು ಸಾವಿರ ರೂಪಾಯಿಗಳೂ ಸಿಗುತ್ತವೆ; ಜಹಾಗೀರದಾರ ಸಾಹೇಬರೂ ನಮ್ಮನ್ನು ಪ್ರೀತಿಸುತ್ತಾರೆ. ಅದರಿಂದ ನಮ್ಮ ಮಕ್ಕಳು-ಮರಿಗಳ ಕಲ್ಯಾಣವಾಗುವದರಲ್ಲಿ ಸಂದೇಹವಿಲ್ಲ."

ಮೂರನೆಯವ:—"ಕೃಷ್ಣರಾವ, ನಮ್ಮ ಅಪೇಕ್ಷೆಯನ್ನು ಪೂರ್ಣ ಮಾಡುವದಕ್ಕೆ ನಾವು ಹಿಂದೆ ಮುಂದೆ ನೋಡುವದಿಲ್ಲ. ನೀವಾಗಿಯೇ ಸಮು

ದ್ರದಲ್ಲಿ ಹಾಕಿಕೊಂಡರೆ ನೆಟ್ಟಗೆ; ಇಲ್ಲವಾದರೆ ಈಗಿಂದೀಗಲೇ ನಿಮ್ಮನ್ನು ಸಮುದ್ರದಲ್ಲಿ ದೂಡಿ ಹೋಗುತ್ತೇವೆ."

ಕೃಷ್ಣರಾವ:— (ದೀನ ಸ್ವರದಿಂದ) "ಮಹಾರಾಯರೇ, ನಾನು ನಿಮಗಂಥ ಅಪರಾಧವನ್ನಾದರೂ ಯಾವದು ಮಾಡಿರುವೆನು. ಸುಮ್ಮಸು ಮ್ಮನೆ ನನ್ನನ್ನು ಸಮುದ್ರದಲ್ಲಿ ಯಾಕೆ ದೂಡುತ್ತೀರಿ? ಸುಮ್ಮನೆ ನನ್ನ ಪ್ರಾಣ ವನ್ನು ಕಳೆದರೆ, ದೇವರು ನಿಮಗೆ ಕಲ್ಯಾಣ ಮಾಡಲಾರನು; ನಿಮ್ಮ ಮಕ್ಕ ಳು-ಮರಿಗಳಿಗೆ "ಕೂಳು ಕೂಳು" ಎಂದನ್ನುವ ಸ್ಥಿತಿಯು ಪ್ರಾಪ್ತವಾದೀತು; ನಿಮಗೆ ದುಷ್ಟವಾದ ನರಲೋಕವು ಪ್ರಾಪ್ತವಾದೀತು."

ಮೂರನೆಯವ:— (ಪುನಃ) "ನೀವನ್ನುವದೆಲ್ಲ ನಿಜವು. ನಾವು ಧೋಂಡೀರಾಜನಿಗೆ ಕೊಟ್ಟ ವಚನವನ್ನು ಪಾಲಿಸದಿದ್ದರೆ, ನಮಗೆ ವಚನ ಭಂಗ ಪಾತಕವು ಬರುವದಲ್ಲದೆ, ಧೋಂಡೀರಾಜನಿಗೆ ಅಪಮಾನ ಮಾಡಿದಂ ತಾಗುತ್ತದೆ. ರಾವಸಾಹೇಬ, ಈಗ ಹೊತ್ತಾಗುತ್ತದೆ. ನಾವು ಇನ್ನು ತಡೆ ಯುವದಿಲ್ಲ. ನಿಮ್ಮ ದೇವರ ಸ್ತೋತ್ರ ಮಾಡುವಂತಿದ್ದರೆ ಮಾಡಿಕೊಳ್ಳಿರಿ."

ತನ್ನ ಮಾತಿನಿಂದ ಕೋಳಿಯವರ ಮನಸ್ಸಿನ ಮೇಲೆ ಏನೂ ಪರಿಣಾ ಮವಾಗುವದಿಲ್ಲೆಂಬುವದು ಕೃಷ್ಣರಾಯನಿಗೆ ತುಂಬಾ ಮನವರಿಕೆಯಾಯಿತು. ಮುಂದಿನ ಎಲ್ಲ ಭಯಪ್ರದ ಸ್ಥಿತಿಯು ಅವನ ಕಣ್ಣಿನ ಮುಂದೆ ಮೂರ್ತಿ ಮಂತವಾಗಿ ನಿಂತಿತು. ಭೀತಿಯಿಂದ ಕೃಷ್ಣರಾಯನ ಶರೀರದಲ್ಲಿ ಸಡುಗು ಹುಟ್ಟಿತು. ಅವನ ಮನಸ್ಸು ಥಾಡಥಾಡ ಹಾರಹತ್ತಿತು. ಅವನ ಮೈಯಲ್ಲಿ ಬೆವರು ಹುಟ್ಟಿತು. ವಿಶ್ವನಾಥರಾಯನ ಮೊಗಲಾಯಿತನವನ್ನು ಕಡಿಮೆ ಮಾಡುವದಕ್ಕಾಗಿ ಕೃಷರಾಯನು ಮುಂಬಯಿಗೆ ಹೊರಟದ್ದನು; ಆದರೆ ಮಾರ್ಗದಲ್ಲಿ ವಿಶ್ವನಾಥರಾಯನ ಮೊಗಲಾಯಿತನವು ಕೋಳಿಯವರ ರೂಪ ದಿಂದ ಅಡ್ಡ ಬಂದು ಕೃಷ್ಣರಾಯನ ಆಶೆಗೆ ನೀರು ಬಿಟ್ಟಿತು. ಆ ಕೋಳಿಯ ವರ ಮುಂದೆ ಕೃಷ್ಣರಾಯನ ಆಟವು ನಡೆಯದಾಯಿತು. ಅವನು ಧೋಂಡೀ ರಾಜನಿಗಿಂತಲೂ ಹೆಚ್ಚು ಧನವನ್ನು ಕೊಡುತ್ತೇನೆಂದು ಹೇಳಿದನು. ಕೋಳಿ ಯವರಿಗೆ ನಾನಾಪ್ರಕಾರವಾಗಿ ಬಿದ್ದು ಬೇಡಿಕೊಂಡನು, ಅವರ ಕಾಲಿಗೆ ಬಿದ್ದು ಹೇಳಿಕೊಂಡನು; ಸೆರಗೊಡ್ಡಿ ಬೇಡಿಕೊಂಡನು. ಏನು ಮಾಡಿದರೂ ಶಿಲಾ-ಹೃದಯರಾದ ಆ ಮೂಢರಿಗೆ ದಯೆಯು ಬರಲಿಲ್ಲ. ಅವರು ತಮ್ಮ

ಹಟವನ್ನು ಬಿಡಲಿಲ್ಲ. ಕೋಳಿಯುವರು ನಿಶ್ಚಯವಾಗಿ ತನ್ನನ್ನು ಸಮುದ್ರದಲ್ಲಿ ದೂಡಿ ಹೋಗುತ್ತಾರೆಂಬುವದು ಕೃಷ್ಣರಾಯನಿಗೆ ಧೃಢವಾಯಿತು. ಆ ವೇಳೆಯಲ್ಲಿ ಕೃಷ್ಣರಾಯನ ಹೃದಯಮಂಡಲದ ಮೇಲೆ ಎಂಥೆಂಥ ವಿಚಾರತರಂಗಗಳು ಹುಟ್ಟಿದವೆಂಬುವದನ್ನು ಹೇಳುವದು ಅಸಾಧ್ಯವೇ ಸರಿ.

ಮೃತ್ಯುವು ಎಲ್ಲರಿಗೂ ಇರುತ್ತದೆ. ಬಡವನಿರಲಿ–ಶ್ರೀಮಂತನಿರಲಿ, ಪಂಡಿತನಿರಲಿ–ಪಾಮರನಿರಲಿ, ಶಿಷ್ಟನಿರಲಿ–ದುಷ್ಟನಿರಲಿ, ಅರಸನಿರಲಿ-ಸೇವಕನಿರಲಿ, ಅಧಿಕಾರಿಯಿರಲಿ–ಅನಧಿಕಾರಿಯಿರಲಿ, ಉಚ್ಚ ಜಾತಿಯವನಿರಲಿ–ತುಚ್ಛ ಜಾತಿಯವನಿರಲಿ, ಸುರೂಪಿಯಿರಲಿ–ಕುರೂಪಿಯಿರಲಿ, ಸಂಸಾರಿಕನಿರಲಿ–ವಿರಕ್ತನಿರಲಿ, ಮೃತ್ಯುವು ಎಂಥವರಿಗೂ ಬಿಟ್ಟಿದ್ದಿಲ್ಲ. ಆದರೆ ಯಾರು ಹೇಗೆ ಸತ್ತಾರೆಂಬುವದನ್ನು ಹೇಳಲಿಕ್ಕೆ ಮಾತ್ರ ಬಾರದು. ನಾವು ಯಾವಾಗ್ಗೆ ಯಾವ ರೀತಿಯಿಂದ ಸಾಯುತ್ತೇವೆಂಬದನ್ನು ಹೇಳಲಿಕ್ಕೆ–ನಿಶ್ಚಯಿಸಲಿಕ್ಕೆ ಯಾರಿಗೂ ಸಾಮರ್ಥ್ಯವಿಲ್ಲ. ಸಮುದ್ರ ಇಲ್ಲವೆ ಎರಡನೆ ಯಾವದೊಂದು ಜಲಸಂಚಯದಲ್ಲಿ ಬಿದ್ದು ಮುಳುಗಿ ಸಾಯುತ್ತೇವೋ, ಅಥವಾ ಪ್ರಚಂಡ ಜಲೌಘದಲ್ಲಿ ಸಿಕ್ಕು ಸಾಯುತ್ತೇವೋ, ಭಯಂಕರವಾದ ಅಗ್ನಿಯಲ್ಲಿ ಸಿಕ್ಕು ಸಾಯುತ್ತೇವೋ, ಅಥವಾ ಬಿರುಗಾಳಿಯಲ್ಲಿ ಸಿಕ್ಕು ಸಾಯುತ್ತೇವೋ, ಅಥವಾ ಭೂಕಂಪ–ಜ್ವಾಲಾಮುಖಿಗಳ ಉಗ್ರ ಶಕ್ತಿಯಿಂದ ಸಾಯುತ್ತೇವೋ, ಅಥವಾ ದುರ್ಭಂಗವಾದ ಭೂಮಿಯಲ್ಲಿ ಗಡವಾಗಿ ಸಾಯುತ್ತೇವೋ, ಅಥವಾ ಸಿಡಿಲು ತಾಕಿ ಸಾಯುತ್ತೇವೋ, ಅಥವಾ ಪ್ಲೇಗು–ಮಾರಿಕಾ ಮೊದಲಾದ ರೋಗಗಳಿಂದ ಸಾಯುತ್ತೇವೋ, ಅಥವಾ ಅನ್ಯ ಯಾವದೊಂದು ಕಾರಣದಿಂದ ಸಾಯುತ್ತೇವೋ ಎಂಬದನ್ನು ನಿರ್ಧರವಾಗಿ ಹೇಳಲಿಕ್ಕೆ ಬರುವಂತಿಲ್ಲ ಅಂತೂ ಇಂತೂ ಯಾವದೊಂದು ರೀತಿಯಿಂದಾದರೂ ಮನುಷ್ಯನಿಗೆ ಮರಣವು ನಿಶ್ಚಯವಾದದ್ದು. ಒಂದರಲ್ಲಿ ಸಿಕ್ಕು ತಪ್ಪಿಸಿಕೊಂಡರೆ ಎರಡನೆಯದರಲ್ಲಿಯಾದರೂ ಸಿಗುತ್ತೇವೆ, ಒಂದು ವೇಳೆ ಎರಡನೆಯದರಲ್ಲಿಯೂ ಪಾರಾದೆವೆಂದರೆ ಮೂರನೆಯದರಲ್ಲಿಯಾದರೂ ಸಿಗುತ್ತೇವೆ. ಸಾರಾಂಶ:–ಮೃತ್ಯುವಿನ ಎಳತವನ್ನು ತಪ್ಪಿಸಿಕೊಳ್ಳುವದಾಗುವದಿಲ್ಲ. ಇಂಥ ಮೃತ್ಯುವಿನ ಪ್ರಚಂಡ ಶಕ್ತಿಯಿದ್ದರೂ, ನಾವು ಪ್ರಯತ್ನಾತಿಶಯದಿಂದ ನಮ್ಮ ಕ್ಷುದ್ರ ಜೀವನವನ್ನು ಉಳಿಸಿಕೊಳ್ಳಲು ಇಚ್ಛಿಸುತ್ತೇವೆ. ವಾಚಕರೇ, ಪ್ರಾಣ

ದ ಮೇಲಿನ ಆಶೆಯು ನಿಜವಾಗಿ ವಿಲಕ್ಷಣವಾಗಿದೆ. ಪ್ರಾಣದ ಮೇಲಿನ ಪ್ರೀತಿಯು ಘನತರದ್ದಾಗಿದೆ. ತನ್ನ ಮೇಲೆ ದುರ್ಘಟ ಪ್ರಸಂಗವು ಪ್ರಾಪ್ತವಾಗಿದ್ದರೂ, ಕೃಷ್ಣರಾಯನು ಪ್ರಾಣವನ್ನು ಉಳಿಸಿಕೊಳ್ಳುವ ಬಗ್ಗೆ ವಿಚಾರಿಸಹತ್ತಿದನು. ರಾಕ್ಷಸರಂತಿರುವ ಆ ಮೂವರು ಕೊಳೆಯುವರ ಸಂಗಡ ಹೊಡೆದಾಡಿ ಅವರನ್ನು ಹೆದರಿಸುವ ಶಕ್ತಿಯಾದರೂ ಕೃಷ್ಣರಾಯನಿಗಿದ್ದಿಲ್ಲ; ನೀರಿನ ಮೇಲಿನ ಪ್ರಸಂಗವಿದ್ದದರಿಂದ, ಓಡಿ ಹೋಗಲಿಕ್ಕೂ ಅವನಿಗೆ ಮಾರ್ಗವಿದ್ದಿಲ್ಲ. ಗಟ್ಟಿಯಾಗಿ ಅತ್ತರೆ ಇಲ್ಲವೆ ದೀನಸ್ವರದಿಂದ ಕೂಗಿದರೆ ಯಾರಾದರೂ ಬಂದು ಜೀವವನ್ನು ಉಳಿಸ್ಯಾರೆಂಬದಕ್ಕೆ ಆ ಸಮುದ್ರದಲ್ಲಿ ಯಾರೂ ಬರುವ ಲಕ್ಷಣವಿದ್ದಿಲ್ಲ. ಅವನಿಗೆ ಚೆನ್ನಾಗಿ ಈಸಲಿಕ್ಕೆ ಬರುತ್ತಿದ್ದರೂ, ಆ ಅಗಾಧವಾದ ಸಮುದ್ರದಲ್ಲಿ ಎಷ್ಟಂತ ಈಸುವದು! ಆ ನಿರ್ಜನ ಸಮುದ್ರದಲ್ಲಿ ಅವನಿಗೆ ಯಾರು ಸಹಾಯವಾಗಬೇಕು!! ಕೃಷ್ಣರಾಯನ ಕಣ್ಣಿನ ಮುಂದೆ ಕತ್ತಲೆಯು ಕಾಣಿಸಹತ್ತಿತು. ಅವನು ಎಲ್ಲ ರೀತಿಯಿಂದಲೂ ನಿರಾಶಾಯುಕ್ತನಾದನು. ಇಂಥ ಪ್ರಸಂಗದಲ್ಲಿ ಯಾರ ಮನಸ್ಸೇಯಾಗಲಿ, ಈಶ್ವರನ ಕಡೆಗೆ ಹೊರಳುವದು ಸ್ವಾಭಾವಿಕವಾಗಿದೆ. ಯಾಕಂದರೆ, ಇಂಥ ಬಿಕ್ಕಟ್ಟಿನ ಪ್ರಸಂಗನಲ್ಲಿ ಸಂರಕ್ಷಿಸುವ ಸಾಮರ್ಥ್ಯವು ಈಶ್ವರನ ಹೊರ್ತು ಅನ್ಯರಿಗೆ ಯಾರಿಗುಂಟು? ಆ ಪ್ರಕಾರ ಕೃಷ್ಣರಾಯನ ಲಕ್ಷವಾದರೂ ಈಶ್ವರನ ಕಡೆಗೆ ಹೋಯಿತು. ಈ ಪ್ರಸಂಗದಲ್ಲಿ ತನಗೆ ಈಶ್ವರನ ಹೊರ್ತು ಇತರಾಶ್ರಯವಿಲ್ಲ! ಈಶ್ವರನ ಹೊರ್ತು ಸಂರಕ್ಷಕರಿಲ್ಲ!! ಈಶ್ವರರ ಹೊರ್ತು ಸಮಾಧಾನವಿಲ್ಲ!!! ಎಂಬುವದು ಕೃಷ್ಣರಾಯನ ಮನಸ್ಸಿನಲ್ಲಿ ಬರುತ್ತಲೇ ಅವನು ಮೂಕಾವಸ್ಥೆಯಲ್ಲಿ ದಯಾಮಯ ಈಶ್ವರನನ್ನು ಅಂತಃಕರಣಪೂರ್ವಕವಾಗಿ ಪ್ರಾರ್ಥನೆ ಮಾಡಲಾರಂಭಿಸಿದನು— "ಹೇ ಜಗಜ್ಜಾಲಕಾ, ಹೇ ಸರ್ವಸಾಕ್ಷಿ ಪರಮೇಶ್ವರಾ, ಹೇ ದೀನರಕ್ಷಕಾ, ಹೇ ಆಪದ್ಧೂರಕಾ, ಈ ನಿರ್ಜನ ಸಮುದ್ರದಲ್ಲಿ ನನ್ನ ಸಂರಕ್ಷಿಸಲಿಕ್ಕೆ ನೀನೊಬ್ಬನೇ ಸಮರ್ಥನಿರುವಿ. ನಾನು ಅನಾಥನೂ, ದೀನನೂ ಆಗಿದ್ದೇನೆ. ನಾನು ನಿರಪರಾಧಿಯೂ, ನಿಷ್ಪಾಪಿಯೂ ಆಗಿದ್ದೇನೆ. ಇಂಥ ನನ್ನನ್ನು ಸಂರಕ್ಷಿಸು! ಎಂದು ಅಮೋಘವಾಗಿ ನಾಮೋಚ್ಚಾರಣೆ ಮಾಡುತ್ತ ಅವನು ಈಶ್ವರನನ್ನು ಹಲವು ರೀತಿಯಿಂದ ಪ್ರಾರ್ಥಿಸಿದನು. ಕೃಷ್ಣರಾಯನ ಈಶ್ವರೀ-ಪ್ರಾರ್ಥನೆಯು ಮುಗಿ

ಯಿತು. ಈಶ್ವರೀ-ಭಜನೆಯಾದ ಮೇಲೆ ಅವನು ತನ್ನ ಪ್ರಾಣವನ್ನು ಉಳಿಸಿ ಕೊಳ್ಳುವದಕ್ಕಾಗಿ ಯೋಚನೆ ಮಾಡಹತ್ತಿದನು.

ಕೃಷ್ಣರಾಯನಿಗೆ ಚನ್ನಾಗಿ ಈಸಲಿಕ್ಕೆ ಬರುತ್ತಿತ್ತು. ಆದರೆ ಏನಾದ ರೂ ಆಧಾರವಿದ್ದ ಹೊರ್ತು ಆ ಭಯಂಕರ-ಸಮುದ್ರದಲ್ಲಿ ಬಂದೇಸವನೆ ಉಸುಲು ಹಿಡಿಯುವದಾಗುವದಿಲ್ಲವೆಂದು ತಿಳಿದು, ಅವನು ಆಧಾರವನ್ನು ಶೋಧಿಸಹತ್ತಿದನು. ಡೋಣಿಯಲ್ಲಿ ಒಂದು ದೊಡ್ಡ ಹಲಿಗೆಯಿತ್ತು. ಅದನ್ನು ಸಮುದ್ರದಲ್ಲಿ ಚಲ್ಲಿ ನಂತರ ಸಮುದ್ರದಲ್ಲಿ ಹಾರಿಕೊಳ್ಳಬೇಕೆಂದು ಅವನು ಯೋಚಿಸಿದನು. ಆದರೆ ಯೋಚನೆಯಂತೆ ಕೋಳಿಯವರ ಕಡೆಯಿಂದ ಹೇಗೆ ಆ ಹಲಗೆಯನ್ನು ಇಸುಕೊಳ್ಳಬೇಕೆಂಬ ಬಗ್ಗೆ ಅವನ ಮನಸ್ಸಿನಲ್ಲಿ ಸಂಶಯವು ಹುಟ್ಟಿತು. ಕೃಷ್ಣರಾಯನು ಹಲವು ರೀತಿಯಿಂದ ವಿಚಾರ ಮಾಡಿ, ಕಡೆಗೆ ಮನಸ್ಸಿನಲ್ಲಿ:—"ಆದದ್ದಾಯಿತು. ಡೋಣಿಯಿಂದ ಕೆಳಗೆ ಹಾರಬಾರದು. ಕೋಳಿಯವರು ಮಾಡುವದನ್ನೆಲ್ಲ ಮಾಡಲಿ. ದೈವದಲ್ಲಿದ್ದದ್ದು ಒಂದೂ ತಪ್ಪುವದಿಲ್ಲ." ಎಂಬದಾಗಿ ಆಲೋಚಿಸುತ್ತಿರುವಾಗ ಮತ್ತೆ ಅವನ ಮನಸ್ಸಿನಲ್ಲಿ ಮತ್ತೊಂದು ವಿಪರೀತವಾದ ಕಲ್ಪನೆಯು ಹುಟ್ಟಿತು. ತನ್ನ ಸಂಕಟವನ್ನು ಆದಷ್ಟು ಪ್ರಯತ್ನ ಮಾಡಿ ಎರಡನೆಯವರಿಗೆ ತಿಳಿಸಬೇಕೆಂದು ಆಲೋಚಿಸಿದನು. ಕೂಡಲೆ ಅವನಿಗೆ ಒಂದು ಯುಕ್ತಿಯೂ ಹೊಳೆಯಿತು. ಡೋಣಿಯ ನಿಶಾನೆಯು ಎತ್ತರವಿತ್ತು. ಅದಕ್ಕೆ ಬೆಂಕಿಯನ್ನು ಹಚ್ಚಿದರೆ ಅದರ ಉರಿಯನ್ನು ನೋಡಿ, ಸಮೀಪವಿರುವ ಡೋಣಿಯ ಜನರಾದರೂ ಓಡಿ ಬಂದಾರೆಂದು ಅವನಿಗೆ ತೋರಿತು. ಅದರೆ ಆ ಕೋಳಿಯವರ ಪ್ರತ್ಯಕ್ಷವಾಗಿ ನಿಶಾನೆಗೆ ಬೆಂಕಿಯನ್ನು ಹಚ್ಚುವದು ಅಶಕ್ಯವಿತ್ತು. ವಾಚಕರೇ, "ಸಂಕಟ ಸಮಯದಲ್ಲಿ ಯುಕ್ತಿಯೂ ಹೊಳೆಯುತ್ತವೆಂಬುವ ಮಾತು ಸುಳ್ಳಲ್ಲ." ಆಗ ಕೃಷ್ಣರಾಯನ ತಲೆಯಲ್ಲಿ ವಿಲಕ್ಷಣವಾದ ವಿಚಾರವು ಉತ್ಪನ್ನವಾಗುತ್ತಲೇ ಅವನು ಪ್ರಯತ್ನ ಮಾಡಲಾರಂಭಿಸಿದನು.

ಕೃಷ್ಣರಾಯನಿಗೆ ಬೀಡಿ ಅಥವಾ ಚಿಲಿಮೆಯನ್ನು ಸೇದುವ ರೂಢಿಯಿದ್ದಿಲ್ಲ. ಆದರೆ ತನ್ನ ಕಾರ್ಯ ಸಾಧನಕ್ಕಾಗಿ ಅವನು ಕೋಳಿಯವರಿಗೆ ಚಿಲಿಮೆಯನ್ನು ಕೊಡಿರೆಂದು ಕೇಳಿದನು. ಕೋಳಿಯವರೂ ಹಿಂದೆ ಮುಂದೆ ನೋಡದೆ, ಕೃಷ್ಣರಾಯನ ಮೇಲೆ ಅಂತ್ಯೋಪಕಾರನೆಂದು ಭಾವಿಸಿ, ಚಕ

ಮಕಿ ಕಟೆದು ಅದರಿಂದ ಬಂದು ಪ್ರಕಾರದ ಅರಳೆಯನ್ನು ಹೊತ್ತಿಸಿ, ಅದ
ನ್ನು ಚಿಲಿಮೆಯ ಮೇಲಿಟ್ಟು ಚಿಲಿಮೆಯನ್ನು ಕೃಷ್ಣರಾಯನ ಕೈಯಲ್ಲಿ ಕೊಟ್ಟ
ರು. ಕೃಷ್ಣರಾಯನು ಸೇದಿ ಚಿಲಿಮೆಯನ್ನು ಕೋಳಿಯುವನ ಕೈಯಲ್ಲಿ ಕೊ
ಟ್ಟನು. ಚಿಲಿಮೆಯನ್ನು ತಿರುಗಿ ಕೊಡುವಾಗ ಅವನು ಅದರ ಮೇಲಿದ್ದ
ಹೊತ್ತಿದ ಅರಳೆಯನ್ನು ತಾನೇ ಮನಃಪೂರ್ವಕವಾಗಿ ತನ್ನ ಸಾಮಾನದ
ಗಂಟಿನ ಮೇಲೆ ಬೀಳಿಸಿದನು. ಇದು ಕೋಳಿಯುವರ ಲಕ್ಷ್ಯದಲ್ಲಿ ಬರಲಿಲ್ಲ.
ಅವರ ಲಕ್ಷ್ಯವೆಲ್ಲ ಚಿಲಿಮೆಯ ಕಡೆಗಿತ್ತು. ಸ್ವಲ್ಪ ವೇಳೆಯಲ್ಲಿ ಕೃಷ್ಣರಾಯನ
ಸಾಮಾನಿನ ಗಂಟಿಗೆ ಹತ್ತಿದ ಬೆಂಕಿಯು ಪ್ರಜ್ವಲಿತವಾಗಿ, ಅರಿವೆ ಸುಡುವ
ವಾಸನೆಯು ಬಂದಿತು. ಆಗ ಒಬ್ಬ ಕೋಳಿಯುವನು :- "ಯಾರದೋ
ಅರಿವೆಯು ಸುಡುವಂತೆ ಕಾಣುತ್ತದೆ." ಎಂದನು. ಮತ್ತೊಬ್ಬ ಕೋ
ಳಿಯುವನು ಡೋಣಿಯನ್ನೆಲ್ಲ ಹುಡುಕಿದನು. ಎಲ್ಲರೂ ತಂತಮ್ಮ ಅರಿವೆ
ಗಳನ್ನು ಶೋಧಿಸಹತ್ತಿದರು. ಆದರೆ ಅವರಿಗೆ ಸುಡುವ ಸ್ಥಳವೇ ಗೊತ್ತಾ
ಗಲಿಲ್ಲ. ಅಷ್ಟರಲ್ಲಿ ಕೃಷ್ಣರಾಯನ ಗಂಟಿನಿಂದ ಹೊಗೆಯು ಹೊರಡುವದನ್ನು
ಕಂಡು, ಕೋಳಿಯುವನೊಬ್ಬನು :—"ರಾವಸಾಹೇಬ, ನಿಮ್ಮ ಧೋತರವು
ಸುಡುತ್ತದೆ, ಅದನ್ನು ಮೊದಲು ನಂದಿಸಿರಿ." ಎನ್ನಲು, ಕೃಷ್ಣರಾಯನು :—
"ಸುಟ್ಟರೆ ಸುಟ್ಟಿತು. ನಾನೇ ಈಗ ಸಾಯುತ್ತಿರುವಾಗ ಆ ಧೋತರದಿಂದಾ
ದರೂ ನನಗೇನು ಪ್ರಯೋಜನ?" ಎಂದನ್ನುತ್ತ ಅವನು ಧೋತರದ ಬಂ
ದು ಸೆರಗನ್ನು ಕೈಯಲ್ಲಿ ಹಿಡಿದು, ಅದನ್ನು ಜೋರಿನಿಂದ ಹವೆಯಲ್ಲಿ ತಿರುವ
ಹತ್ತಿದನು. ಅದು ಗಾಳಿಯಿಂದ ಮತ್ತಿಷ್ಟು ಪ್ರಜ್ವಲಿತವಾಗಲು, ಅದರ ಉರಿ
ಯು ಸ್ಪಷ್ಟವಾಗಿ ಕಾಣಿಸಹತ್ತಿತು. ಆ ವೇಳೆಯಲ್ಲಿ ಸೂರ್ಯನು ಅಸ್ತಮ
ಯವಾಗಿ ಎಷ್ಟೋ ವೇಳೆಯಾಗಿತ್ತು. ಗಾಳಿಯು ಭರಭರ ಬೀಸುತ್ತಿತ್ತು.
ಗಾಳಿಯ ಹೆಚ್ಚುವಿಕೆಯನ್ನು ನೋಡಿ, ಉರಿಯುತ್ತಿರುವ ಧೋತರವನ್ನು
ಡೋಣಿಯ ನಿಶಾನೆಯ ಕಡೆಗೆ ಬಿಟ್ಟನು. ಬಹುತರವಾಗಿ ಸಮುದ್ರದ ಮೇ
ಲಿನ ತಂಪು ಹವೆಯಿಂದ ನಿಶಾನೆಗಳು ತಣ್ಣಗಾಗಿ ಹೋಗಿರುತ್ತವೆ. ಆದರೆ
ಆ ಡೋಣಿಯ ನಿಶಾನೆಯು ಅಗದೀ ಹೊಸದಿದ್ದದರಿಂದ, ಅದಕ್ಕೆ ಕೂಡಲೆ
ಬೆಂಕಿಯು ಹತ್ತಿತು. ನಿಶಾನೆಯ ದೊಡ್ಡ ಉರಿಯು ಕಾಣಿಸಹತ್ತಿತು. ಅದ
ನ್ನು ನೋಡಿ ಕೋಳಿಯುವರು ಗಾಬರಿಯಾದರು. ಮೊದಲು ನಿಶಾನೆಯ ಬೆಂ

ಕೆಯನ್ನು ನೊಂದಿಸಬೇಕೋ, ಮೊದಲು ಕೃಷ್ಣರಾಯನನ್ನು ಸಮುದ್ರದಲ್ಲಿ ದೂಡಬೇಕೋ ಎಂಬ ಎರಡು ಪ್ರಶ್ನಗಳು ಅವರ ಮುಂದೆ ಮೂರ್ತಿಮಂತಾಗಿ ನಿಂತವು. ನಿಶಾನೆಯನ್ನು ನೊಂದಿಸುವ ಪ್ರಯತ್ನ ಮಾಡುವಷ್ಟರಲ್ಲಿ ಎರಡನೇ ಯಾವವಾದರೂ ಡೋಣಿಗಳು ಬರುತ್ತವೆಯೋ ಹೇಗೋ; ಕೃಷ್ಣರಾಯನನ್ನು ಸಮುದ್ರದಲ್ಲಿ ದೂಡುವ ಪ್ರಯತ್ನ ಮಾಡುವಷ್ಟರಲ್ಲಿ ನಿಶಾನೆಯು ಉರಿದು ಹೋಗಿ ಡೋಣಿಯನ್ನು ನಡಿಸಲಿಕ್ಕೆ ಕಠಿಣವಾಗುತ್ತದೋ ಏನೋ ಎಂಬೆರಡು ಆಲೋಚನೆ ಮಾಡಿ ಮಾಡಿ ಕಡೆಗೆ ಅವರು ಕೃಷ್ಣರಾಯನನ್ನು ಮೊದಲು ಸಮುದ್ರದಲ್ಲಿ ದೂಡುವ ವಿಚಾರ ಮಾಡಿ ಆ ಉದ್ಯೋಗಕ್ಕೆ ತೊಡಗಿದರು.

ಇಷ್ಟಪಥಿಯಲ್ಲಿ ಕೃಷ್ಣರಾಯನು ಡೋಣಿಯಲ್ಲಿಯ ಹಲಿಗೆಗೆ ಒಂದು ಹಗ್ಗವನ್ನು ಕಟ್ಟಿ. ಅದನ್ನು ಡೋಣಿಯ ಕೆಳಗೆ ನೀರಿನಲ್ಲಿ ಬಿಟ್ಟನು. ಕೋಳಿಯವರು ಕೃಷ್ಣರಾಯನ ಈ ಕೃತಿಯನ್ನು ನೋಡಿ ಬಹಳ ಪೇಚಾಟದಲ್ಲಿ ಬಿದ್ದರು. ಕೃಷ್ಣರಾಯನಿಗೆ ಹಲಿಗೆಯು ಆಧಾರವಾಗಿದ್ದರೂ, ಸಮುದ್ರದಲ್ಲಿ ಹಾರಿಕೊಳ್ಳುವ ಧೈರ್ಯವಾಗಲಿಲ್ಲ; ಮತ್ತು ಡೋಣಿಯಲ್ಲಿ ಕುಳಿತುಕೊಳ್ಳುವ ಧೈರ್ಯವೂ ಆಗಲಿಲ್ಲ. ಯಾಕಂದರೆ ತನ್ನನ್ನು ಕೋಳಿಯವರು ಸಮುದ್ರದಲ್ಲಿ ದೂರ ಚೆಲ್ಲಿಕೊಟ್ಟರೆ ಕರ್ಮಧರ್ಮ ಸಂಯೋಗದಿಂದ ಪ್ರಾಪ್ತವಾಗಿದ್ದ ಹಲಿಗೆಯ ಆಧಾರವು ತಪ್ಪೀತೆಂದು ಅವನಿಗೆ ಭಯವು ಉತ್ಪನ್ನವಾಯಿತು. ಕಡೆಗೆ ಅವನು ಈಶ್ವರ ಧ್ಯಾನವನ್ನು ಮಾಡಿ, ಸಮುದ್ರದಲ್ಲಿ ಹಾರಲು ನಿಶ್ಚಯಿಸಿದನು. ಅವನು ಹಾರಬೇಕೆನ್ನುವಷ್ಟರಲ್ಲಿ ನಿಶಾನೆಯನ್ನು ಸುಟ್ಟನೆಂಬ ಸಿಟ್ಟಿನಿಂದ ಒಬ್ಬ ಕೋಳಿಯವನು ಹುಟ್ಟಿನಿಂದ ಕೃಷ್ಣರಾಯನ ತಲೆಯ ಮೇಲೆ ಹೊಡೆದನು. ಆ ಹೊಡತದಿಂದ ಕೃಷ್ಣರಾಯನು ಎಚ್ಚರತಪ್ಪಿ ಸಮುದ್ರದಲ್ಲಿ ಹಲಿಗೆಯ ಮೇಲೆ ಬಿದ್ದನು. ಗಾಬರಿಯಾದಂಥ ಕೋಳಿಯವರು ಹಾಗೂ ಹೀಗೂ ಡೋಣಿಯನ್ನು ನಡೆಸುತ್ತ ಹೊರಟು ಹೋದರು. ಪ್ರಿಯವಾಚಕರೇ, ಕೃಷ್ಣರಾಯನು ಆಶಾಬದ್ಧನಾಗಿ ವೇಣುವಿನ ಬಿಡುಗಡೆಯ ಪ್ರಯತ್ನಮಾಡುತ್ತಿದ್ದನು. ಇದರಲ್ಲಿ ಅವನ ಅಪರಾಧಾನ್ಯಾಯಗಳೇನಾದರೂ ಇದ್ದವೇನು? ಏನೂ ಇಲ್ಲ. ಅವನು ಮುಖ್ಯವಾಗಿ ನಿರಪರಾಧ ಸ್ತ್ರೀಯನ್ನು ರಾಕ್ಷಸನ ಬಂಧನದಿಂದ ಮುಕ್ತಮಾಡುವದಕ್ಕೋಸ್ಕರ

ಪ್ರಯತ್ನ ಮಾಡುತ್ತಿದ್ದನು. ಇಂಥ ವೇಳೆಯಲ್ಲಿಯಾದರೂ ಸಂಕಟವು ಅವನ ಬೆನ್ನು ಬಿಡಲಿಲ್ಲ. ವಿಚಾರಿಸಿದರೆ ಸಂಕಟಗಳು ಸದುದ್ಯೋಗದಲ್ಲಿಯೂ, ಸತ್ಪುರುಷರ ಸಮ್ಮುಖದಲ್ಲಿಯೂ ವಿಶೇಷವಾಗಿರುವದು ಜಗತ್ತಿನ ಸರ್ವಸಾಧಾರಣ ನಿಯಮವಾಗಿದೆ. ಸತ್ಪುರುಷರು ಶಾಂತರೂ, ಸರಳ-ಪ್ರಕೃತಿಯುವರೂ ಇರುತ್ತಿರಾದ್ದರಿಂದ ಅವರಿಗೆ ದುರ್ಜನರಿಂದ ಬಹಳ ತೊಂದರೆಗಳು ಸಂಭವಿಸುತ್ತವೆ. ನಮ್ಮ ಸಮಾಜದಲ್ಲಿ ಕೆಟ್ಟ ಮನಸ್ಸಿನ ಮನುಷ್ಯರು ವಿಪುಲವಾಗಿರುವದರಿಂದ, ಅವರಿಂದ ರಾಷ್ಟ್ರದಲ್ಲಿಯ ಸಾಧುಸಂತರಿಗೆಷ್ಟು ಸಂಕಟಗಳು ಪ್ರಾಪ್ತವಾಗುತ್ತವೆಂಬುವದನ್ನೂ, ಕೃಷ್ಣರಾವನಂಥ ಸಜ್ಜನರೆಷ್ಟು ಮಂದಿ ಅವರ ಬಲಿಗೆ ಈಡಾಗುತ್ತಾರೆಂಬುವದನ್ನೂ, ವೇಣುವಿನಂಥ ಅಬಲೆಯರೆಷ್ಟು ಕಾರಾಗೃಹವಾಸಿಗಳಾಗುತ್ತಾರೆಂಬುವದನ್ನೂ ವಿಚಾರ ಮಾಡುವ ಭಾರವನ್ನು ನಾವು ವಾಚಕರ ಕಡೆಗೆ ಒಪ್ಪಿಸಿರುತ್ತೇವೆ.

ವಾಚಕ ಬಂಧುಗಳೇ, ತನ್ನ ಸಲುವಾಗಿ ಭಗೀರಥ ಪ್ರಯತ್ನವನ್ನು ಮಾಡುತ್ತಿದ್ದ ಕೃಷ್ಣರಾಯನ ಈಗಿನ ದುಸ್ಥಿತಿಯ ಬಗ್ಗೆ ವೇಣುವಿಗೆ ಸ್ವಲ್ಪವಾದರೂ ಆಲೋಚನೆಯಿದ್ದೀತೇನು? ಕೃಷ್ಣರಾಯನು ಸುಖದಿಂದಿದ್ದಾನೆಂಬುವ ಕಲ್ಪನೆಯಿಂದ ಅವಳು ಅಂತರಂಗದಲ್ಲಿ ಎಷ್ಟೋ ಮಟ್ಟಿಗೆ ಸುಖಾಗಿಯಾಗಿದ್ದಳು. ಯಾವ ಸಂಸಾರ ವಿಷಯಕ್ಕಾಗಿ ಕೃಷ್ಣರಾಯನು ಪ್ರಯತ್ನವನ್ನು ನಡೆಸಿದ್ದನೋ, ಆ ಸಂಸಾರವೆತ್ತ ಅವನೆತ್ತ! ಅವನ ಪರಮಪೂಜ್ಯ ಜನಕನೆತ್ತ ಅವನೆತ್ತ!! ಯಾರ ಕೂಡ ವೈರತ್ವವನ್ನು ಕಟ್ಟಿಕೊಂಡಿದ್ದನೋ, ಆ ವಿಶ್ವನಾಥರಾಯ-ಥೋಂಡೀರಾಜ-ಮಾಧವರಾಯರೆಲ್ಲಿ ಕೃಷ್ಣರಾಯನೆಲ್ಲಿ!!! ಆ ಭಯಂಕರವಾದ ಕಡಲಿನಲ್ಲಿ ಕೃಷ್ಣರಾಯನಿಗೆ ಒದಗಿದ ಸಂಕಟವು ಆ ದಯಾಭರಿತವಾದ ಈಶ್ವರನಿಗೆ ಮಾತ್ರ ಗೊತ್ತು. ಈ ವೇಳೆಯಲ್ಲಿ ಕೃಷ್ಣರಾಯನಿಗೆ ತಾಯಿಯಿಲ್ಲ-ತಂದೆಯಿಲ್ಲ, ಬಂಧುವಿಲ್ಲ-ಬಳಗವಿಲ್ಲ, ಶತ್ರುಗಳಿಲ್ಲ-ಮಿತ್ರರಿಲ್ಲ. ಅವನು ಅಚೇತನಾವಸ್ಥೆಯಲ್ಲಿ ಸಮುದ್ರದ ಮೇಲೆ ಬಿದ್ದಿದ್ದನು. ಅವನ ಹೃದಯವು ನಿರ್ವಿಕಾರವಾಗಿತ್ತು. 'ವೇಣೂ ವೇಣೂ' ಎಂದು ಹಗಲಿರುಳು ಜಪಮಾಡುತ್ತಿದ್ದ ಕೃಷ್ಣರಾಯನಿಗೆ ಈಗ ಸ್ಮೃತಿಯಿಲ್ಲ. ಅವನ ಹೃದಯದಲ್ಲಿ ವೇಣೂ ವಿಷಯವಾದ ಪ್ರೇಮವೂ, ಥೋಂಡೀರಾಜನ ಸಂಬಂಧವಾದ ದ್ವೇಷವೂ ಇರುವದಿಲ್ಲ. ಕೃಷ್ಣರಾಯನು ಶೂನ್ಯಹೃದಯದಿಂದ ತೆರೆ

ಗಳ ಮೇಲೆ ತರಂಗಿತನಾಗಿದ್ದನು. ದೈವದುರ್ವಿಪಾಕದಿಂದ ದೀನನ ಪ್ರಯತ್ನವು ಶೂನ್ಯವಾಗಿ, ಅವನು ಸಮುದ್ರದ ಜಲಚರಗಳ ಭಕ್ಷ್ಯಸ್ಥಾನಕ್ಕೆ ಹೋಗಿ ಬಿದ್ದಿದ್ದನು. ಮನುಷ್ಯನು ಮಾಡುವದೊಂದು, ಈಶ್ವರನು ಮಾಡುವದೊಂದು ಎಂದು ಹಿರಿಯರು ಹೇಳುವದು ಅಕ್ಷರಶಃ ನಿಜವಿರುತ್ತದೆ. ವಾಚಕರೇ, ಈಶ್ವರನ ಪ್ರಚಂಡ ಮತ್ತು ಅತರ್ಕ್ಯ ಸಾಮರ್ಥ್ಯದ ಮುಂದೆ ನಮ್ಮಂಥ ಕ್ಷುದ್ರ-ಮಾನವಿಗಳ ಆಟವು ಎಷ್ಟು ಹೊತ್ತು ನಿಲ್ಲುವದು!



# ವೇಣೂ

ಅಥವಾ

# ದುಷ್ಟ ಸಮಾಜ.



( ಉತ್ತರಾರ್ಧ. )

## ೧ನೆಯ ಪ್ರಕರಣ—ಅಗ್ನಿ.

ಕೃಷ್ಣರಾಯನು ಮುಂಬಯಿಗೆ ಹೊರಟು ಹೋದ ದಿವಸದ ಮಾತು. ಸಾಯಂಕಾಲದ ಸುಮಾರಕ್ಕೆ ಜಹಾಗೀರದಾರ ವಿಶ್ವನಾಥರಾಯನು ತನ್ನ ಮನೆಯ ಕಟ್ಟೆಯ ಮೇಲೆ ಲೋಡಿಗೆ ಆತುಕೊಂಡು ಕುಳತು, ಎಲೆಯಡಿಕೆಯನ್ನು ತಿನ್ನುತ್ತಿದ್ದನು. ಅವನ ಲಕ್ಷವೆಲ್ಲ ಕೃಷ್ಣರಾಯನನ್ನು ಸಮುದ್ರದಲ್ಲಿ ದೂಡಿಕೊಡುವ ಕಡೆಗಿತ್ತು. ತಾನು ಯೋಚಿಸಿದ ರಾಕ್ಷಸೀ ಕೃತಿಯು ಥಡಕ್ಕೆ ಹತ್ತಿರುವದೋ ಇಲ್ಲೋ ಎಂಬದರ ಸಲುವಾಗಿ ಅವನ ಮನಸ್ಸಿಗೆ ಬಹಳ ಕಟಕಟಿಯಾಗಿತ್ತು. ಆಗ ಅವನಿಗೆ ಗೋವಿಂದರಾಯನು ದರ್ಶನಾರ್ಥವಾಗಿ ಬಂದಿದ್ದಾನೆಂದು ದ್ವಾರಪಾಲಕನು ಹೇಳಿದನು. ಗೋವಿಂದರಾಯನು ತನ್ನ ಭೆಟ್ಟಿಗಾಗಿ ಬಂದಿದ್ದಾನೆಂಬುವದನ್ನು ಕೇಳಿ, ವಿಶ್ವನಾಥರಾಯನ ಹೃದಯದಲ್ಲಿ ಸ್ವಲ್ಪ ಭೀತಿಯು ಹುಟ್ಟಿತು. ಆದರೂ ಅವನು ಆ ಭೀತಿಯನ್ನು ಹೊರಗೆ ತೋರಗೊಡದೆ, ಗೋವಿಂದರಾಯನನ್ನು ಆದರಾತಿಥ್ಯದಿಂದ ಸನ್ಮಾನಿಸಿದನು. ಗೋವಿಂದರಾಯನು ಬಂದಕೂಡಲೆ ನಗೆಮೊಗದಿಂದ ವಿಶ್ವನಾಥರಾಯನು ಅವನನ್ನು ತನ್ನ ತೀರ ಸಮೀಪದಲ್ಲಿ ಗಾದೆಯ ಮೇಲೆ ಕುಳ್ಳಿರಿಸಿಕೊಂಡನು. ಜಹಾಗೀರದಾರಸಾಹೇಬರು ಗೋವಿಂದರಾಯನಿಗೆ ಮಿತಿಮೀರಿ ಸನ್ಮಾನಿಸಿದ್ದರಿಂದ, ವಾಚಕ ಮಹನೀಯರು ಜಹಾಗೀರದಾರರ ಗುಣವರ್ಣನ ಮಾಡಬಹುದು. ಹಾಗೆ ವರ್ಣಿಸಲಿಕ್ಕೆ ವಿಶ್ವನಾಥರಾಯನು ಸಾತ್ವಿಕ ವರ್ತನದವನಲ್ಲ. ಅವನು ಬಹಳ ಕಪಟಿಯಾಗಿದ್ದನು. ಅವನು ಹೊರಗೆ ಮಾತ್ರ ಸಾತ್ವಿಕ

ವರ್ತನವನ್ನು ತೋರಿಸುತ್ತಿದ್ದನು. ವಿಶ್ವನಾಥರಾಯನಂಥ ಕಪಟ ವೂಸೆ ವನ್ನು ಎಷ್ಟೋ ಅಜ್ಞಾನಿಗಳು ಸ್ವರ್ಗ-ಸುಖಕ್ಕೆ ಸರಿಗಟ್ಟುತ್ತಾರೆ. ಆದರೆ ಇಂಥ ವಿಶ್ವನಾಥರಾಯನ ಡಾಂಭಿಕವಾದ ಮಾನಕ್ಕೆ ಸುಜ್ಞನಾದ ಗೋವಿಂದ ರಾಯನು ಮೋಹಿತನಾಗಲಿಲ್ಲ. ವಿಶ್ವನಾಥರಾಯನಂಥ ಅನೇಕ ಅಧಿಕಾರ ವಂತರ ಸಾಮರ್ಥ್ಯವು ಅವನಿಗೆ ಸಂಪೂರ್ಣ ಗೋಚರವಿತ್ತು.

ಪ್ರಾಸ್ತಾವಿಕ ಶಿಷ್ಟಾಚಾರವು ಮುಗಿದ ಮೇಲೆ ವಿಶ್ವನಾಥರಾಯನು ಗೋವಿಂದರಾಯನಿಗೆ:—"ಬಹಳ ದಿವಸದಿಂದ ಇಲ್ಲದ ತಮ್ಮ ಗಮನವು ಇಂದು ಶುಭಾಗಮನವೆಂದು ಹೇಳಲಿಕ್ಕೆ ಅಡ್ಡಿಯಿಲ್ಲ. ತಮ್ಮ ಪಾದಸಂಪ ರ್ಕದಿಂದ ನಮ್ಮ ಮನೆಯು ಪುನೀತವಾಯಿತು." ಎಂದಂದನು.

ಗೋವಿಂದರಾಯನು ಹಾಳುಸ್ತುತಿಗೆ ಎಂದೂ ಒಪ್ಪುವವನಲ್ಲ. ತನ್ನ ಪಾದಸ್ಪರ್ಶದಿಂದ ಮನೆಯು ಪವಿತ್ರವಾಯಿತೆಂಬ ವಿಶ್ವನಾಥರಾಯನ ಬಿಂಕದ ಮಾತುಗಳನ್ನು ಕೇಳಿ, ಅವನಿಗೆ ಅಸಮಾಧಾನವಾಯಿತು. ಧೂರ್ತರು ಹೀಗೆ ಯೇ ಮರುಳರನ್ನು ಕಡ್ಲಿಯ ಗಿಡದ ಮೇಲೆ ಕುಳ್ಳಿರಿಸಿ, ಅವರಿಂದ ತಮ್ಮ ಕಾರ್ಯಸಾಧನೆ ಮಾಡಿಕೊಳ್ಳುತ್ತಾರೆಂಬ ತತ್ವವನ್ನು ಗೋವಿಂದರಾಯನು ಪೂರ್ಣ ಅರಿತಿದ್ದನು.

ಗೋವಿಂದರಾಯ:—"ವಿಶ್ವನಾಥರಾವ, ನನ್ನಂಥ ಕೀಳು ಮನುಷ್ಯನ ಪಾದಕ್ಕೆ ಹೆಚ್ಚಿನ ಯೋಗ್ಯತೆಯನ್ನು ಕೊಟ್ಟು, ನೀವು ಸಾಧು-ಸಂತರ ಯೋ ಗ್ಯತೆಯನ್ನು ಕಡಿಮೆ ಮಾಡುತ್ತೀರಿ. ಅಷ್ಟು ಯೋಗ್ಯತೆಯು ನನ್ನದಲ್ಲ. ಇರಲಿ. ಧೋಂಡೀರಾಜ ಮೊದಲಾದವರಿಗೆ ಕುಶಲವಷ್ಟೆ?"

ವಿಶ್ವ:—ಹೋ-ಹೋ-ಹೋ! ಪ್ರಭುವಿನ ದಯೆಯಿಂದ ಸರ್ವರೂ ಕುಶಲದಿಂದಿದ್ದಾರೆ."

ಗೋವಿಂದರಾಯ:—"ನನಗೆ ನಿಮ್ಮ ಕುಟುಂಬದಲ್ಲಿ ಧೋಂಡೀರಾ ಜನು ಮಾತ್ರ ಬಹಳ ಅಶಕ್ತನಿದ್ದಾನೆಂದು ತೋರುತ್ತದೆ."

ವಿಶ್ವನಾಥ:—"ಅವನು ಮೊದಲೆ ಅಶಕ್ತನು. ಅದರಲ್ಲಿ ಇಂಗ್ರೇಜೀ ಶಿಕ್ಷಣವನ್ನು ಕೊಡಿಸಿದ್ದರಿಂದ, ಅವನು ತೀರ ಅಶಕ್ತನಾಗಿರುವನು. ಇನ್ನೂ ಅವನ ಲೇಖನ, ವಾಚನ ಮೊದಲಾದ ವಿಷಯಗಳು ಮುಗಿದೇ ಇಲ್ಲವದಿಲ್ಲ."

ಗೋವಿಂದ:—"ಶಿಕ್ಷಣವು ಇಂಗ್ರೇಜಿಯದೇ ಇರಲಿ, ಅಥವಾ ಯಾವದೇ ಇರಲಿ. ಶಿಕ್ಷಣದಿಂದ ಅಶಕ್ತತೆಯು ಪ್ರಾಪ್ತವಾಗುವದು ಹೇಗೆ?"

ವಿಶ್ವನಾಥ:—"ಇಂಗ್ರೇಜೀ ಶಿಕ್ಷಣಕ್ಕೆ ರೋಗದ ಹುಟ್ಟುವಿಕೆಯು ಸ್ಥಿರವಾದದ್ದದೆ. ಇಂಗ್ರೇಜೀ ಅಭ್ಯಾಸದ ಶ್ರಮದಿಂದ ತಲೆಯು ನೋಯಲಾರಂಭಿಸುತ್ತದೆ. ತಲೆಯು ನೋಯಲಾರಂಭಿಸಿದ ಕೂಡಲೆ ತಲೆಯಮೇಲೆ ಕೂದಲು ಬಿಡುವ ಪಾಳೆಯು ಬರುತ್ತದೆ. ಸಣ್ಣ ಸಣ್ಣ ಅಕ್ಷರಗಳನ್ನು ಓದೋದಿ ದೃಷ್ಟಿಯು ಮಂದವಾಯಿತೆಂದರೆ, ಚಾಳೀಸು ಬೇಕಾಗುತ್ತದೆ. ಮತ್ತು ಸಣ್ಣ-ದೊಡ್ಡ ಅನುವು ಆಪತ್ತುಗಳಂತೂ ಇದ್ದೇ ಇರುತ್ತವೆ. ಪಾಸಾಗಬೇಕೆಂಬ ಮಹತ್ವಾಕಾಂಕ್ಷೆ ಮಾಡುವ ಅವಿಶ್ರಾಂತ ಶ್ರಮದಿಂದ ತಾರುಣ್ಯಕಾಲದ ಶರೀರವು ತೀರ ಮಣ್ಣಾಗಿ ಹೋಗುತ್ತದೆ. ಗೋವಿಂದ ರಾವ, ಈ ಶಿಕ್ಷಣದ ಹವ್ಯಾಸದಿಂದ ಮುಂದೆ ಏನೇನು ಅನರ್ಥಗಳು ಪ್ರಾಪ್ತವಾಗುತ್ತವೆಯೋ ಏನೋ ಈಶ್ವರನಿಗೆ ತಾವಿಕೆ!"

ಗೋವಿಂದರಾಯ:—"ಧೋಂಡೀರಾಜನಿಗೂ ತಲೆಯ, ಮತ್ತು ಕಣ್ಣಿನ ಪೀಡೆಯಿದ್ದಂತೆ ಕಾಣುತ್ತದೆ."

ವಿಶ್ವನಾಥ:—"ಅದನ್ನೆಷ್ಟೆಂದು ಹೇಳಬೇಕು! ಅವನಿಗೆ ಯಾವಾಗಲೂ ತಲೆಶೂಲಿ ಇರುತ್ತದೆ. ಚಾಳೀಸು ಹಾಕಿದ ಹೊರ್ತು ಅವನಿಗೆ ಏನೂ ಕಾಣುವದಿಲ್ಲ. ಮತ್ತು ಅವನಿಗೆ ಸಣ್ಣ ಪುಟ್ಟ ಬೇನೆಗಳಂತೂ ಇದ್ದೇ ಇರುತ್ತವೆ."

ವಿಶ್ವನಾಥರಾಯನ ವಿಲಕ್ಷಣವಾದ ಮಾತುಗಳನ್ನು ಕೇಳಿ, ಗೋವಿಂದ ರಾಯನಿಗೆ ಬಹಳ ಆಶ್ಚರ್ಯವಾಯಿತು. ಆದರೂ ಅವನು ಅದನ್ನು ಹೊರಗೆಡವಡೆ, ವಿಶ್ವನಾಥರಾಯನ ಮಾತಿಗೆ ಹೂಗರೆಯುತ್ತಿದ್ದನು. ಧೋಂಡೀರಾಜನ ನಿಜವಾದ ರೋಗವೂ, ಅದರ ನಿಜವಾದ ಕಾರಣವೂ ಗೋವಿಂದ ರಾಯನಿಗೆ ಗೊತ್ತಿತ್ತು. ಆದರೂ ಅವನು ವಿಶ್ವನಾಥರಾಯನ ಮಾತಿನ ಝೊಂಕು ನೋಡಿ, ಕೆಳಗೆ ಬರೆದಂತೆ ಮಾತಾಡಿದನು.

ಗೋವಿಂದ:—"ಅಲ್ಪ ವಯದಲ್ಲಿಯೇ ಈಗಿನ ತರುಣರು ಬಡಸ್ಥಿತಿಯವರು. ಇಂಥವರು ವೃದ್ಧಾಪ್ಯದಲ್ಲಿ ಹೇಗೆ ದಿವಸ ಹರಣ ಮಾಡಬೇಕೋ ಏನೋ? ನಿಮಗಂತೂ ಧೋಂಡೀರಾಜನ ಸ್ಥಿತಿಯೂ ಕಷ್ಟಪ್ರದವಾಗಿದೆ.

ಮೊದಲೆ ಒಬ್ಬ ಮಗನು; ಅದರಲ್ಲಿ ಅವನು ಅಶಕ್ತನಿರುತ್ತಾನೆ. ಅಂದಮೇಲೆ ನಿಮಗೆ ಈ ಸಂಬಂಧವಾಗಿ ಬಹಳ ಚಿಂತೆಯಿರಲಿಕ್ಕೆ ಬೇಕು."

ವಿಶ್ವನಾಥ:—"ಚಿಂತೆಯು ಯಾರಿಗಿದ್ದೀತು, ಯಾರಿಗೆ ಇರಲಿಕ್ಕಿಲ್ಲ."

ಗೋವಿಂದ:—"ತಾವು ಒಂದು ವೇಳೆ ಪ್ರಯತ್ನ ಮಾಡಿದರೆ, ಧೋಂಡೀರಾಜನ ಪ್ರಕೃತಿಯು ಸುಧಾರಿಸುತ್ತದೆ. ಯೋಗ್ಯ ಮಾರ್ಗದಿಂದ ಮಾತ್ರ ಪ್ರಯತ್ನ ಮಾಡಲಿಕ್ಕೆ ಬೇಕು."

ವಿಶ್ವನಾಥ:—"ಪ್ರಯತ್ನ ಮಾಡುವದರಲ್ಲಿ ನಮ್ಮದು ಸ್ವಲ್ಪವದರೂ ಅಲಕ್ಷವಿಲ್ಲ. ದೇವರು ನಮಗೇನು ಕಡಿಮೆ ಮಾಡಿರುವನು."

ಗೋವಿಂದ:—"ತಾವನ್ನುವದು ನಿಜವು. ತಾವು ಕುಬೇರನಂತೆ ಧನ-ಕನಕ-ಸಂಪನ್ನರಿರುವಿರಿ; ಅದರಲ್ಲಿ ನಿಮಗಾದರೂ ಎಷ್ಟು ಮಂದಿ ಮಕ್ಕಳು ಇರುವರು. ಒಬ್ಬನೇ ಒಬ್ಬ ಮಗನು. ಮತ್ತದರಲ್ಲಿ ಮಗನು ದಡ್ಡನಲ್ಲ, ದುರ್ಗುಣಿಯಲ್ಲ, ಕುರೂಪಿಯಲ್ಲ; ಜಾಣನೂ, ಸುಗುಣನೂ, ಸುರೂಪಿಯೂ ಇರುವನು. ಅಂದ ಮೇಲೆ ಅವನ ಪ್ರಕೃತಿಯ ವಿಷಯವಾಗಿ ತಮ್ಮ ಕಡೆಯಿಂದ ಎಂದೂ ಆಲಸ್ಯವಾಗುವಂತಿಲ್ಲ. ಆದರೂ ತಮ್ಮದು ಅವನ ವಿಷಯವಾಗಿ ಇರಬೇಕಾದಷ್ಟು ಲಕ್ಷವಿರುವದಿಲ್ಲ. ತಾವು ಕೆಲವು ಸಂಗತಿಗಳ ಕಡೆಗೆ ಲಕ್ಷ್ಯಗೊಟ್ಟಿದ್ದಾದರೆ, ಧೋಂಡೀರಾಜನ ಅಶಕ್ತತೆಯು ಕೂಡಲೆ ಪರಿಹಾರವಾಗುತ್ತದೆ."

ವಿಶ್ವನಾಥ:—"ಯಾವ ಸಂಗತಿಗಳ ಕಡೆಗೆ ಲಕ್ಷ್ಯಗೊಡಬೇಕು?"

ಗೋವಿಂದ:—"ತಾರುಣ್ಯಕಾಲದ ಅನಾಚಾರದಿಂದ ಧೋಂಡೀರಾಜನ ಪ್ರಕೃತಿಯು ಹೀಗೆ ಕ್ಷೀಣವಾಗಿರಬಹುದಾಗಿ ನನಗೆ ತೋರುತ್ತದೆ. ತಾರುಣ್ಯದಲ್ಲಿ ಅಜ್ಞಾನದಿಂದ ಹುಟ್ಟುವ ರೋಗಗಳು ಬಹಳ ಭಯಂಕರವಾಗಿರುತ್ತವೆಂದು ವೈದ್ಯರ ಅಭಿಪ್ರಾಯುವದೆ."

ವಿಶ್ವನಾಥ:—"ಛೇ, ಛೇ! ನನಗಂತೂ ಹಾಗೆ ಕಾಣುವದಿಲ್ಲ. ಅವನು ಬೋಳೇ ಸ್ವಭಾವದವನೇನೋ ನಿಜವು. ತಾರುಣ್ಯ ಕಾಲವು ಮುಗಿಯುವ ತನಕ ಅವನ ವರ್ತನದಲ್ಲಿ ಹೆಚ್ಚುಕಡಿಮೆಯಾಗುವದಿಲ್ಲ. ತಮ್ಮ ಹೇಳಿಕೆಯಂತೆ ಅವನಿಗೆ ಆ ಪ್ರಕಾರದ ರೋಗವೇನೂ ಇರುವದಿಲ್ಲ."

ಧೋಂಡೀರಾಜನು ದುರ್ವರ್ತನಿಯಾಗಿದ್ದರೂ, ವಿಶ್ವನಾಥರಾಯನು ಆ ಸಂಬಂಧವಾಗಿ ಸ್ವಲ್ಪಾದರೂ ದುಃಖಪ್ರದರ್ಶನವನ್ನು ಮಾಡದೆ, ತಿರುಗಿ ಅವನ ವರ್ತನದ ಸಂಬಂಧವಾಗಿ ಅಭಿಮಾನವನ್ನು ತೋರಿಸಿದ್ದಕ್ಕೆ ಗೋವಿಂದ ರಾಯನಿಗ ಅತ್ಯಾಶ್ಚರ್ಯವಾಯಿತು,

ಗೋವಿಂದ:—"ನಿಮಗೆ ಧೋಂಡೀರಾಜನ ವಿಷಯವಾಗಿ ಏನೂ ಗೊತ್ತಿಲ್ಲವಾಗಿ ನಾನು ಊಹಿಸುತ್ತೇನೆ. ಧೋಂಡೀರಾಜನು ಬಹಳ ಕೆಟ್ಟ ನಡತೆಯವನೆಂದೂ, ಅವನ ನಡತೆಯಿಂದ ಸಜ್ಜನರು ಬಾಳಿ ಬದುಕುವದು ಬಹಳ ಕಠಿಣವೆಂದೂ, ದುರ್ವರ್ತನದಿಂದ ಅವನ ಶರೀರವು ಕೆಟ್ಟು ಕಿಲಬು ಸೇರಿರುತ್ತದೆಂದೂ, ಮಗನ ವಿಷಯವಾಗಿ ಜಹಾಗೀರದಾರಸಾಹೇಬರಿಗೆ ವ್ಯಸನವಿಲ್ಲೆಂದೂ ಗ್ರಾಮದ ತುಂಬಾ ಬೊಬ್ಬಾಟವಾಗಿರುತ್ತದ! ಕಾರಣ ಸಾವಿರ ಕೆಲಸಗಳಿದ್ದರೂ ಅವನ್ನು ಮೂಲಿಗೊತ್ತಿ ಮೊದಲು ಧೋಂಡೀರಾಜನ ವಿಷಯಕ್ಕೆ ವಿವಾದ ಮಾಡಿರಿ."

ಧೋಂಡೀರಾಜನು ಗ್ರಾಮದ ಜನರೊಡನೆ ನಡೆಯುವ ವರ್ತನವು ಶ್ರೀಮಂತರ, ಅದರಲ್ಲಿ ಅಧಿಕಾರವಂತರ ಮಕ್ಕಳಿಗೆ ಬಹು ಭೂಷಣವಾಗಿರುತ್ತದೆಂದು ವಿಶ್ವನಾಥರಾಯನ ಅಭಿಪ್ರಾಯವಿತ್ತು. ಆದ್ದರಿಂದ ಗೋವಿಂದ ರಾಯನು ಸೂಚಿಸಿದ ಉಪದೇಶಪರ ವಚನಗಳು ವಿಶ್ವನಾಥರಾಯನಿಗೆ ರುಚಿಸಲಿಲ್ಲ. ಅವನಿಗೆ ಸ್ವಲ್ಪ ಸಿಟ್ಟು ಬಂದಿತು.

ವಿಶ್ವನಾಥರಾಯ:—(ಸಿಟ್ಟಿನಿಂದ) "ಗೋವಿಂದರಾವ, ನೀವು ಏನಾದರೂ ಅಂದಿರಾಯಿತು. ಧೋಂಡೀರಾಜನು ಸುವರ್ತನಿಯೆಂದು ನಾನು ನಿಶ್ಚಯವಾಗಿ ಹೇಳುತ್ತೇನೆ. ಪ್ರಾಯದಲ್ಲಿ ಎನೋ ಅಪ್ಪಿತಪ್ಪಿ ಆಗುವ ಅಲ್ಪಸ್ವಲ್ಪ ತಪ್ಪುಗಳಿಗಾಗಿ ಇಷ್ಟು ಗಳಲಸಾಧನ ಮಾಡುವ ಕಾರಣವಿಲ್ಲ. ತಾರುಣ್ಯದಲ್ಲಿ ಎಲ್ಲರೂ ತಪ್ಪು ಮಾಡುತ್ತಾರೆ. ಇಷ್ಟಕ್ಕಾಗಿ ಧೋಂಡೀರಾಜನ ಮೇಲೆ ಆರೋಪವನ್ನಿಡುವದು ನಿಮಗೆ ಸ್ವಲ್ಪಾದರೂ ಶೋಭಿಸುವದಿಲ್ಲ."

ಗೋವಿಂದರಾಯ:—(ವಿಷಾದದಿಂದ) "ಧೋಂಡೀರಾಜನು ಪರರ ಹೆಣ್ಣುಮಕ್ಕಳನ್ನು ಗೋಳಾಡಿಸುವ ದುರ್ವರ್ತನದಲ್ಲಿ ತೊಡಗಿದ್ದರೂ, ತಾವು ಆತನ ಸಲುವಾಗಿ ತೋರಿಸುವ ಅಭಿಮಾನವನ್ನು ಕಂಡು ಸಖೇದಾಶ್ಚರ್ಯವಾಗುತ್ತದೆ. ವೇಣುವಿನನ್ನು ಯಾರು, ಹೇಗೆ ಇಲ್ಲದಂತೆ ಮಾಡಿರುವರೆಂಬ

ಸಂಗತಿಯು ನಿಮಗೆ ಗೊತ್ತಿರಲಿಕ್ಕಿಲ್ಲ. ನನಗಂತೂ ಆ ಸಂಗತಿಯು ಪೂರ್ಣ ಪರಿಚಯವಿರುತ್ತದೆ. ಧೋಂಡೀರಾಜನ ಇಂಥ ದುರ್ವರ್ತನಕ್ಕೆ ತಾವು ಸದ್ವರ್ತನವೆಂದರೆ ಯಾರು ಹೇಳಬೇಕು?"

ವಿಶ್ವನಾಥರಾವ:—"ಗೋವಿಂದರಾವ, ಜನರು ಏನಾದರೂ ಬೊಗಳುತ್ತಾರೆ. ಅವರ ಮಾತುಗಳ ಮೇಲಿಂದ ನಿಷ್ಕಾರಣವಾಗಿ ಮನಬಂದಂತೆ ಮಾತಾಡುವದು ಯುಕ್ತವಲ್ಲ."

ಗೋವಿಂದ:—"ಜನರ ಮಾತಿನ ಮೇಲಿಂದ ನಾನೆಂದೂ ಅನ್ನುವವನಲ್ಲ. ನನಗೆ ಆ ಸಂಬಂಧವಾಗಿ ಗೊತ್ತಾದ ಕೂಡಲೆ ತಮ್ಮ ಸನ್ನಿಧಿಗೆ ಬಂದಿರುತ್ತೇನೆ. ನಾನು ತಮ್ಮ ಕೂಡ ಕಲಹ ಮಾಡಬೇಕೆಂದೂ, ಅಥವಾ ತಮ್ಮ ಹೊಲಸನ್ನು ತೋರಿಸಿಕೊಡಬೇಕೆಂದೂ ಬಂದಿಲ್ಲ. ತಮಗೆ ಹಿತೋಕ್ತಿಗಳನ್ನು ಹೇಳಬೇಕೆಂದೂ, ತಮ್ಮಂಥ ಪ್ರಸಿದ್ಧ ಕುಟುಂಬದಲ್ಲಿ ನಿಂದ್ಯ ಕಾರ್ಯಗಳಾಗುವದು ಯೋಗ್ಯವಲ್ಲೆಂದು ಹೇಳಬೇಕೆಂದೂ ತಮ್ಮ ಕಡೆಗೆ ಬಂದೆನು. ಹೇಳಿದ ಸಂಗತಿಗಳ ಕಡೆಗೆ ಲಕ್ಷ್ಯಗೊಡದಿದ್ದರೆ, ಅದರಲ್ಲಿ ನನಗೆ ಹಾನಿಯೇನೂ ಇಲ್ಲ."

ವಿಶ್ವನಾಥರಾವ:—(ಕೋಪದಿಂದ) "ಗೋವಿಂದರಾವ, ನಿಮ್ಮಂಥ ಸಭ್ಯಮನುಷ್ಯರು ಮನಬಂದಂತೆ ಮಾತಾಡುವದು ತರವಲ್ಲ. 'ಹೊಲದಲ್ಲಿ ಸ್ವಲ್ಪ ಧಾನ್ಯವನ್ನು ಬಿತ್ತಿ ಧಾನ್ಯದ ರಾಶಿಯನ್ನು ತೆಗೆದುಕೊಳ್ಳುವಂತೆ" ನೀಚರ ಮಾತಿನ ಕಡೆಗೆ ಲಕ್ಷ್ಯಗೊಡುವದು ಹುಚ್ಚತನವೇ ಸರಿ."

ಗೋವಿಂದರಾವ:—"ವಿಶ್ವನಾಥರಾವ, ತಾವು ನನಗೆ ಬೇಕಾದಂಥ ಮಾತುಗಳನ್ನು ಆಡಿದರೂ, ನಾನು ನಿಜವಾದ ಸಂಗತಿಯು ಬಗ್ಗೆ ಸ್ವಲ್ಪಾದರೂ ಹೆದರುವವನಲ್ಲ. ನಾನು ಹೇಳಿದ ಸಂಗತಿಯು ಬಗ್ಗೆ ನೀವು ಪೂರ್ಣ ವಿಚಾರ ಮಾಡುವ ತನಕ ನನ್ನ ಮಾತುಗಳನ್ನು ಸುಳ್ಳು ಮಾತುಗಳೆಂದು ಹೇಗೆ ನಿರ್ಧರಿಸುವಿರಿ. ತಮ್ಮ ಸಹಾಯದಿಂದ ಮಾಧವರಾವ-ಧೋಂಡೀರಾಜರು ವೇಣುವಿನನ್ನು ಮೋಸಗೊಳಿಸಿ, ತಮ್ಮ ಮನೆಯಲ್ಲಿ ತಂದಿಟ್ಟಿದ್ದಾರೆ. ಈ ಸಂಬಂಧವಾಗಿ ನನಗೆ ಪೂರ್ಣ ಮನವರಿಕೆಯಾಗಿದೆ."

ಗೋವಿಂದರಾಯನ ಮಾತಿನಿಂದ ವಿಶ್ವನಾಥರಾಯನ ಎದೆಯೊಡೆದು ನೀರಾಯಿತು. ಆದರೂ ಗಾಂಭೀರ್ಯದಿಂದ ವಿಶ್ವನಾಥರಾಯನು ಕೆಳಗೆ ಬರೆದಂತೆ ಮಾತಾಡಿದನು.

ವಿಶ್ವನಾಥ:—" ಗೋವಿಂದರಾವ, ನೀವು ಸುಳ್ಳು ಮಾತುಗಳನ್ನಾಡು ತ್ತೀರಿ. ನೀವು ಅನ್ನುವ ಮಾತೆಲ್ಲ ಬುಡ್ಡಿಯಿಂದ ತುದಿಯ ತನಕ ಸುಳ್ಳಿರು ತ್ತದೆ. ನಿಮಗೆ ಒಂದು ವೇಳೆ ಆ ಸಂಗತಿಯು ನಿಜವೆಂದು ಕಂಡು ಬಂದಲ್ಲಿ ನೀವು ಮಾಡುವದನ್ನೆಲ್ಲ ಮಾಡಿರಿ."

ಗೋವಿಂದ:—" ಇದ್ದ ಸಂಗತಿಯನ್ನು ಇದ್ದಂತೆ ಕಿವಿಯ ಮೇಲೇ ನೋ ಹಾಕುತ್ತೇನೆ. ತಾವು ಒಂದು ವೇಳೆ ಆ ಸಂಬಂಧವಾಗಿ ವ್ಯವಸ್ಥೆ ಮಾಡದಿದ್ದರೆ, ನಮಗೆ ಆಗುವ ಪ್ರಾಯಶ್ಚಿತ್ತವೆಲ್ಲ ಆಗಲಿ. ತಮ್ಮ ಅಸಂಬ ದ್ಧವಾದ ಭಾಷಣಗಳಿಂದ ನಾನಂತೂ ನಿಶ್ಚಯವಾಗಿ ತಾವು ತಮ್ಮ ಚಿರಂಜೀ ವಿಯ ದುಷ್ಕಾರ್ಯಕ್ಕೆ ಸಹಾಯಕಾರಿಗಳಾಗಿರುತ್ತೀರೆಂದು ಭಾವಿಸಿದೆನು."

ವಿಶ್ವ:—" (ಖೇದ-ಸಂತಾಪಗಳಿಂದ) " ನಾನು ಇಂಥ ಕ್ಷುದ್ರ ಸಂಗ ತಿಗಳ ಕಡೆಗೆ ಎಂದೂ ಲಕ್ಷಗೊಡುವವನಲ್ಲ. ನೀವು ನನ್ನ ಮೇಲೆ ನಿಷ್ಕಾರ ಣವಾಗಿ ದೋಷ-ಭಾರವನ್ನು ಹೊರಸಿದ್ದಕ್ಕಾಗಿ, ನಾನು ನಿಮ್ಮನ್ನು ಒಳ್ಳೇ ಅಪರಾಧಿಗಳೆಂದು ಭಾವಿಸುತ್ತೇನೆ. ಈ ವಿಷಯದಲ್ಲಿ ನನ್ನ ಅಂಗವದೆಯೆಂ ಬುವದನ್ನು ಸಿದ್ಧ ಮಾಡಿಕೊಡುವದು ನಿಮಗೆ ಬಹು ಕಠಿಣವಾದೀತು."

ಗೋವಿಂದ:—" ಇದರಲ್ಲಿ ಸಿದ್ಧಮಾಡಿಕೊಡುವದಾದರೂ ಏನದೆ? ನಿಮ್ಮ ಅನುಮತಿಯಿಲ್ಲದೆ ಧೋಂಡೀರಾಜ-ಮಾಧವರಾಯರು ಇಂಥ ಘೋರ ಕೃತ್ಯವನ್ನು ಎಂದೂ ಮಾಡಿಲ್ಲ. ಜನರು ಅನ್ನುವದೇನಂದರೆ:—ಈ ಭಯಂ ಕರವಾದ ಕೃತ್ಯವನ್ನು ವಿಶ್ವನಾಥರಾಯರು ಮಾಡಿಲ್ಲ. ಆದರೆ ವಿಶ್ವನಾಥರಾ ಯರ ಮಗನು ಧೋಂಡೀರಾಜನು ಮಾಡಿರುತ್ತಾನೆ, ಎಂದನ್ನುತ್ತಾರೆ."

ವಿಶ್ವ:—(ಸ್ವಲ್ಪ ಮೆತ್ತಗಾಗಿ) " ಹುಡುಗತನದಲ್ಲಿ ಏನೋ ತಪ್ಪು ಕೆಲಸಗಳಾಗಿದ್ದಾವು. ಮಕ್ಕಳು ಯಾವದೊಂದು ತಪ್ಪು ಕೆಲಸವನ್ನು ಮಾ ಡಿದರೆ, ಅದರ ದೋಷವು ತಂದೆಯದೆಂದು ಹೇಳುವದು ನನಗೆ ತಿಳಿಯುವ ದಿಲ್ಲ."

ಗೋವಿಂದ:—" ಮಕ್ಕಳು ಎಷ್ಟು ದೊಡ್ಡವರಾದರೂ, ಅವರು ತಮ್ಮ ತಾಯಿ-ತಂದೆಗಳಿಗೆ ಸಣ್ಣವರೇ ಸರಿ. ಸಣ್ಣವರಿರುವಾಗ್ಗೆ ಮಕ್ಕಳ ಕಡೆಗೆ ಲಕ್ಷಗೊಡುವಂತೆ, ದೊಡ್ಡವರಾದಾಗಲೂ ಮಕ್ಕಳ ಕಡೆಗೆ ಲಕ್ಷಗೊಡುವದು ತಂದೆ-ತಾಯಿಗಳ ಕರ್ತವ್ಯಕರ್ಮವಾಗಿರುತ್ತದೆ. ತಾವು ಈ ತಮ್ಮ ಕರ್ತ

ವ್ಯಕರ್ಮವನ್ನು ಮರೆತಂತೆ ಕಾಣುತ್ತದೆ. ಧೋಂಡೀರಾಜನ ಸಂಬಂಧವಾ ದ ತಮ್ಮ ದುರ್ಲಕ್ಷವು ಮುಂದೆ ಭಯಂಕರ ಪರಿಣಾಮವನ್ನು ಮಾಡುವದ ರಲ್ಲಿ ತಿಲಾಂಶವಾದರೂ ಸಂದೇಹವಿಲ್ಲ. ಸ್ನೇಹಬದ್ಧರಾದ ನೀವು ಹಿಂದು ವೇಳೆ ಧೋಂಡೀರಾಜನ ಅಪರಾಧವನ್ನು ಕ್ಷಮಿಸಿದರೂ ಕ್ಷಮಿಸಬಹುದು! ಆದರೆ ಸಂಬಂಧಿಕರಲ್ಲದ ನಾವು ಆತನ ಅಪರಾಧವನ್ನು ಕ್ಷಮಿಸುವದು ದುರಾ ಪಸ್ತವಾಗುತ್ತದೆ. ಇಷ್ಟು ಹೇಳಿಯೂ ತಾವು ಆತನ ಕಡೆಗೆ ದುರ್ಲಕ್ಷ ಮಾ ಡಿದರೆ, ನಾವು ಮಾತ್ರ ಆತನ ಸಂಬಂಧವಾಗಿ ಯೋಗ್ಯ ವ್ಯವಸ್ಥೆ ಮಾಡಲೇ ಬೇಕಾಗುತ್ತದೆ. ನೀವೇನೋ ಹುಡುಗನು ಸಣ್ಣವನಿದ್ದಾನೆಂದು ತಿಳಿದು ಕೊಂಡಿರುತ್ತೀರಿ, ಆದರೆ ಆ ಹುಡುಗನ ಆಟದಿಂದ ಜನರ ಪ್ರಾಣವು ಕುತ್ತಿ ಗಗೆ ಬಂದಿರುತ್ತದೆ. ಮುಖ್ಯವಾಗಿ ಈ ಪ್ರಕರಣವು ಕೋರ್ಟು, ಕಚೇರಿಗೆ ಹತ್ತಬಾರದೆಂಬು ನನ್ನ ಅಪೇಕ್ಷೆಯಿರುತ್ತದೆ.''

ವಿಶ್ವನಾಥರಾಯನಿಗೆ ಗೋವಿಂದರಾಯನ ಮೇಲಿನ ಉದ್ಗಾರದಿಂದ ಸಹನವಾಗಲಿಲ್ಲ. ಅಧಿಕಾರವೆಂಬ ಪೋಷಕಾಹಾರದಿಂದ ಪುಷ್ಟನಾಗಿದ್ದ ಅವನಿಗೆ ಸರಕಾರೀ ದರ್ಬಾರದ ಹೆದರಿಕೆಯು ಹಾಸ್ಯಾಸ್ಪದವಾಗಿಯೂ, ಅಪ ಮಾನಕಾರಕವಾಗಿಯೂ ತೋರಿತು. ಅವನು ಕೆರಳಿದ ಹುಲಿಯಂತೆ ಸಂ ತಾಪಗೊಂಡು, ಅಕರಾಳ-ವಿಕರಾಳ ಸ್ವರದಿಂದ ಮಾತಾಡಲಾರಂಭಿಸಿದನು.

ವಿಶ್ವ:—"ಗೋವಿಂದರಾವ, ಇಂಥ ಹೆದರಿಕೆಯ ಮಾತನ್ನು ನೀವು ಯಾರಿಗೆ ಹೇಳುತ್ತೀರಿ? ನಾನೇನು ಕುರಿಯ ಹಾಲನ್ನು ಕುಡಿದು ಬೆಳೆದಿರುವೆ ನೆಂದು ತಿಳಿದಿರುವಿರೋ ಹೇಗೆ? ಯಾರೊಂದಿಗೆ ಯಾವ ಮಾತನ್ನು ಆಡಬೇ ಕೆಂಬುವದು ನಿಮಗೆ ಸ್ವಲ್ಪಾದರೂ ತಿಳಿಯುವದಿಲ್ಲ. ಅಯ್ಯೋ! ನನ್ನ ಕೂಡ ವೈರತ್ವವನ್ನು ಕಟ್ಟಿಕೊಂಡು ಬಾಳಿ ಬದುಕುವರು ಈ ಗ್ರಾಮದಲ್ಲಿ ಯಾರಿ ರುವರು? ಒಳ್ಳೇದು! ಗೋವಿಂದರಾವ, ಎಚ್ಚರಿಕೆಯಿಂದಿರು!! ನನ್ನ ಸಾ ಮರ್ಥ್ಯವನ್ನಾದರೂ ನೋಡು!!! ಮೈಮರೆತು ಕೂಡ್ರಬೇಡ. 'ಬಿಸಿಯಾ ಗುವ ಹೊರ್ತು ಬೆಣ್ಣೆ ಕರಗದು' ಎಂದು ಹಿರಿಯರು ಹೇಳುವದು ಸುಳ್ಳಲ್ಲ."

ಗೋವಿಂದ:—"ವಿಶ್ವನಾಥರಾವ, ನಿಮ್ಮಲ್ಲಿರುವ ಅಧಮತನವನ್ನು ನಾನು ಅಳೆದಿಟ್ಟಿರುತ್ತೇನೆ. ಕೆಟ್ಟ ಕೆಲಸದಿಂದ ನಿಮಗೆ ಯಾವ ಪುರುಷಾ ರ್ಥವು ಪ್ರಾಪ್ತವಾಗುತ್ತದೋ ಏನೋ. ಈ ಅವಂತೀಪುರದಲ್ಲಿರುವ ನಿಮ್ಮ

ಅಧಿಕಾರವು ಎಲ್ಲರ ಮೇಲೂ ನಡೆಯಲಾರದೆಂದು ನೀವು ಪೂರ್ಣವಾಗಿ ಧ್ಯಾನದಲ್ಲಿಡಿರಿ. ಕಡೆಗೆ ಈಶ್ವರನ ಸನ್ನಿಧಿಯಲ್ಲಿಯಾದರೂ ನಿಮಗೆ ನಿಮ್ಮ ಘೋರ ಕೃತ್ಯಕ್ಕೆ ತಕ್ಕ ಪ್ರಾಯಶ್ಚಿತ್ತವಾಗದೆ ಇರಲಿಕ್ಕಿಲ್ಲ. ಪರಮೇಶ್ವರನು ನನ್ನ ಪ್ರಯತ್ನಕ್ಕೆ ಜಯಗೊಟ್ಟರೆ, ದುಷ್ಕೃತ್ಯದ ಪರಿಣಾಮವು ಹಾನಿಕರವಾಇದ್ದೆಂಬುವದು ನಿಮಗೆ ಇಲ್ಲಿಯೇ ಕಂಡು ಬಂದೀತು. ನಾನು ಇನ್ನೊಮ್ಮೆ ತಮಗೆ ವೇಣುವಿನನ್ನು ಮುಕ್ತ ಮಾಡಿರೆಂದೂ, ಇಲ್ಲವಾದರೆ ನಮಗೆ ಮುಂದಿನ ಮಾರ್ಗವಿರುವದೆಂದೂ ವಿನಂತಿಪೂರ್ವಕವಾಗಿ ಹೇಳಿಕೊಳ್ಳುತ್ತೇನೆ. "

ವಿಶ್ವನಾಥ:—( ಕಣ್ಣು ಕೆಂಪಗೆ ಮಾಡಿ ) " ಬಿಡುವದಿಲ್ಲ. ಹೋಗಿರಿ. ಆಗುವದೆಲ್ಲ ಆಗಲಿ. ಮಾಡುವದನ್ನೆಲ್ಲ ಮಾಡಿ ಬಿಡುತ್ತೇನೆ. ಹೀಗೆ ಕೂಗುತ್ತ ಓಣಿ ಓಣಿ ತಿರುಗುವ ನಾಯಿಗಳಿಗೆ ನಾನು ಎಂದೂ ಹೆದರುವವನಲ್ಲ. "

ಗೋವಿಂದ:—( ಶಾಂತವಾಗಿ ) " ನನಗೆ ನಾಯಿಗಿಂತಲೂ ಇನ್ನೂ ಕೀಳತರವಾದ ಉಪಮೆಯನ್ನು ಕೊಡಿರಿ: ತಮಗೆ ಭೀತಿಯನ್ನು ತೋರಿಸಬೇಕೆಂದೂ, ನಿಮ್ಮ ಕೂಡ ಕಲಹವನ್ನು ಮಾಡಬೇಕೆಂದೂ ನಾನು ಬಂದಿಲ್ಲ. ಈಗ ವೇಣುವಿನ ಬಿಡುಗಡೆಯಾದರೆ ಜಗಳದ ಕಾರವೇ ಇಲ್ಲ. ಹಾಗೆ ಮಾಡದಿದ್ದರೆ ನಾವು ಧೋಂಡೀರಾಜನನ್ನು ನ್ಯಾಯಮಂದಿರಕ್ಕೆ ಎಳೆದು ಕೊಂಡು ಹೋಗುತ್ತೇವೆ. "

ವಿಶ್ವನಾಥ:—" ಒಳ್ಳೇದು ! ನೀವು ಧೋಂಡೀರಾಜನನ್ನು ನ್ಯಾಯಮಂದಿರಕ್ಕೆ ಎಳೆದೊಯ್ಯುತ್ತಿರೋ, ಹಾಗಾದರೆ ನನ್ನ ಸಾಮರ್ಥ್ಯವನ್ನು ತೋರಿಸಿಯೇ ಬಿಡುತ್ತೇನೆ. ಬಾಯಿಂದ ಬೊಗಳಿದಂತೆ ಕೈಯಿಂದ ಮಾಡಿ ತೋರಿಸುವದು ಕಠಿಣವಾಗಿದೆ. ನೋಡಿರಿ, ನಿಮ್ಮ ನಿಂದ್ಯೋಕ್ತಿಗಳಿಗೆ ಸರಿಯಾಗಿ ನಾನು ನಿಮಗೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡದಿದ್ದರೆ, ನನಗೆ ' ವಿಶ್ವನಾಥರಾವ, ' ನೆಂದು ಯಾಕೆ ಕರೆಯಬೇಕು ? ನಾನು ಈ ಶ್ರೇಷ್ಠ ವಂಶದಲ್ಲಿ ಜನಿಸಿದ್ದಕ್ಕೆ ಸಾರ್ಥಕ್ಯವೇನು ? ಅಯ್ಯೋ ನನ್ನ ಸಾಮರ್ಥ್ಯವೆಷ್ಟು—ನನ್ನ ಅಧಿಕಾರವೆಷ್ಟು—ನನ್ನ ಶ್ರೀಮಂತಿಕೆಯೆಷ್ಟು—ನನ್ನ ಜನವೆಷ್ಟು—ನನ್ನ ಮಿತ್ರರೆಷ್ಟು—ಆ ಮಿತ್ರರಿಂದಾಗುವ ನನಗೆ ಸಹಾಯವೆಷ್ಟು. ಹೀಗಿರುತ್ತಿರಲು ನನ್ನ ಪ್ರತ್ಯಕ್ಷದಲ್ಲಿ ನನ್ನ ಅಪಮಾನವೇ ಆಁ!! "

" ಧೋಂಡೀರಾಜನನ್ನು ನ್ಯಾಯಮಂದಿರಕ್ಕೆ ಹಿಡಕೊಂಡು ಹೋಗು

ತ್ರೀವೆ. " ಎಂಬೀ ಗೋವಿಂದರಾಯನ ಮಾತು ವಿಶ್ವನಾಥರಾಯನ ಹೃದಯಕ್ಕೆ ಭಾಲೆಯಂತೆ ತೊಂದರೆಗೊಡಹತ್ತಿತು. ಅವನ ಕೋಪಕ್ಕೆ ಸೀಮೆಯಿದ್ದಿಲ್ಲ. ವಿಶ್ವನಾಥರಾಯನು ಗೋವಿಂದರಾಯನನ್ನು ಒಬ್ಬ ಬಡ ಬಿಕ್ಷುಕನಂತೆ ಭಾವಿಸಿದ್ದನು. ಅಂದಮೇಲೆ ಗೋವಿಂದರಾಯನ ಮಾತುಗಳು ವಿಶ್ವನಾಥರಾಯನಿಗೆ ಎಷ್ಟು ಸಿಟ್ಟುಗೆಬ್ಬಿಸಿದ್ದಾವೆಂಬುವದನ್ನು ವಾಚಕರೇ ತರ್ಕಿಸಬಹುದಾಗಿದೆ. ಜಗತ್ತಿನಲ್ಲಿ ಜುಲುಮೆಯ ಅಧಿಕಾರಿಗಳ ಸ್ವಭಾವವು ಹೀಗೆಯೇ ಇರುತ್ತದೆ. ತನ್ನ ದೋಷವನ್ನು ತನಗೆ ತೋರಿಸಿದ್ದಕ್ಕೆ ವಿಶ್ವನಾಥರಾಯನು ಪಿಶಾಚವೃತ್ತಿಯನ್ನು ಧಾರಣಮಾಡಿದ್ದನು. ಅವನ ನೇತ್ರಗಳು ಕೆಂಪಗಾಗಿದ್ದವು; ಅವನ ತುಟಿಗಳು ಗಡಗಡ ನಡುಗುತ್ತಿದ್ದವು. ಹಲ್ಲುಗಳು ಕರಕರ ಸಪ್ಪಳವನ್ನು ಮಾಡುತ್ತಿದ್ದವು; ಗೋವಿಂದರಾಯನನ್ನು ನಿಂದಿಸುವ ಬಾಯಿಗೆ ಅವಕಾಶವಿದ್ದಿಲ್ಲ; ಗೋವಿಂದರಾಯನನ್ನು ಹೊಡಿಯುವದಕ್ಕಾಗಿ, ಅವನ ಬಲಗೈಯು ಹವಣಿಸುತ್ತಿತ್ತು. ಆದರೆ ಗೋವಿಂದರಾಯನು ಶಕ್ತಿಸಂಪನ್ನನಿದ್ದದರಿಂದ, ಹಾಗೆ ಮಾಡಲಿಕ್ಕೆ ವಿಶ್ವನಾಥರಾಯನಿಗೆ ಧೈರ್ಯವಾಗಲಿಲ್ಲ. ವಿಶ್ವನಾಥರಾಯನ ಮಾತುಗಳಿಂದ ಗೋವಿಂದರಾಯನ ಹೃದಯ ಪಟಲದಲ್ಲಿ ಏನೂ ಹೆಚ್ಚು ಕಡಿಮೆಯಾಗಲಿಲ್ಲ. ಅವನು ಮೊದಲಿನಂತೆ ಶಾಂತರೀತಿಯಿಂದ ಕುಳಿತುಕೊಂಡಿದ್ದನು. ತಿರುಗಿ ವಿಶ್ವನಾಥರಾಯನ ಎಷ್ಟೋ ಗ್ರಾಮ್ಯ-ನಿಂದ್ಯ ವಚನಗಳನ್ನು ಕೇಳಿ, ಅವನಿಗೆ ನಗೆಯು ಬರಹತ್ತಿತು. ಇತ್ತ ಗೋವಿಂದರಾಯನಿಗೆ ನಗೆಯು ಬಂದರೆ, ಅತ್ತ ವಿಶ್ವನಾಥರಾಯನ ಸಂತಾಪವು ಹೆಚ್ಚುತ್ತಿತ್ತು. ವಿಶ್ವನಾಥರಾಯನ ಸಂತಾಪವು ಪ್ರತಿಕ್ಷಣಕ್ಕೆ ಹೆಚ್ಚು ಆಗುವದನ್ನು ಕಂಡು, ಈಹೊತ್ತಿನಲ್ಲಿ ಇನ್ನು ಇಲ್ಲಿ ಕೂಡ್ರುವದು ಯುಕ್ತವಲ್ಲೆಂದು ತಿಳಿದು, ಗೋವಿಂದರಾಯನು ಜಹಾಗೀರದಾರರನ್ನು ಕುರಿತು— "ಹೋಗುತ್ತೇನೆ." ಎಂದು ಹೇಳಿ ಮನೆಯ ಹಾದಿಯನ್ನು ಹಿಡಿದನು. ವಿಶ್ವನಾಥರಾಯನು ತಿರುಗಿ ಗೋವಿಂದರಾಯನ ಕಡೆಗೆ ನೋಡಲಿಲ್ಲ. ಗೋವಿಂದರಾಯನು ಹೋದ ಕೂಡಲೆ ವಿಶ್ವನಾಥರಾಯನು "ಮನೆಯು ಪ್ರತಿಧ್ವನಿಗೊಳ್ಳುವಂತೆ" ಗರ್ಜಿಸಿದನು. ಈ ಗರ್ಜನೆಯು ಗೋವಿಂದರಾಯನ ನಾಶಮಾಡುವ ಸಂಬಂಧದ್ದಿತ್ತು. ಇದನ್ನು ನಮ್ಮ ವಾಚಕರಿಗೆ ಬೇರೆ ಹೇಳಬೇಕಾಗಿಲ್ಲ.

ಗೋವಿಂದರಾಯನು ವಿಶ್ವನಾಥರಾಯನ ಮನೆಯಿಂದ ಹೊರಟು, ನೆಟ್ಟಗೆ ತನ್ನ ಮನೆಗೆ ಬಂದನು. ಆಗ ರಾತ್ರಿಯು ಬಹಳವಾಗಿತ್ತು. ಬಂದ ಕೂಡಲೆ ಗೋವಿಂದರಾಯನು ಊಟ ಮಾಡಿ, ಹಾಸಿದ ಹಾಸಿಗೆಯ ಮೇಲೆ ಮಲಗಿದನು. ಅವನ ಮನಸ್ಸಿನ ಸ್ಥಿತಿಯು ನಡೆದ ಸರ್ವ ಸಂಗತಿಗಳಿಂದ ಬಳ್ಳೀ ಚಮತ್ಕಾರವಾಗಿತ್ತು. ನಿದ್ರೆ ಮಾಡಬೇಕೆಂದು ಅವನು ಎಷ್ಟು ಪ್ರಯತ್ನ ಮಾಡಿದರೂ, ನಿದ್ರೆಯು ಬರಲಿಲ್ಲ. ವಿಶ್ವನಾಥರಾಯನು ಕಡೆಗೆ ಹೊರಗೆಡವಿದ ಸಂಗತಿಗಳ ಬಗ್ಗೆ ಗೋವಿಂದರಾಯನ ಹೃದಯ ಪಟಲದ ಮೇಲೆ ತರತರದ ವಿಚಾರಸ್ತಂಭಗಳು ಎದ್ದು ನಿಲ್ಲುತ್ತಿದ್ದವು. ಆ ದುಷ್ಟನಾದ ವಿಶ್ವನಾಥರಾಯನ ಕೂಡ ವಾಪವಿವಾದವನ್ನು ನಡೆಸಿದ್ದು, ಯಥಾರ್ಥವಲ್ಲೆಂದು ಅವನಿಗೆ ತೋರಹತ್ತಿತು. ಯಾಕಂದರೆ ನರಾಧಮರು ಯಾವ ಕಾಲಕ್ಕೆ ಏನು ಮಾಡುತ್ತಾರೆಂಬದಕ್ಕೆ ನಿಯಮವಿಲ್ಲವೆಂಬುವದು, ಅವನಿಗೆ ಪೂರ್ಣ ತಿಳುವಳಿಕೆಯಿತ್ತು. ಮತ್ತು ಈವರೆಗೆ ಕಣ್ಣಾರೆ ಕಂಡ ವಿಶ್ವನಾಥರಾಯನ ದುರ್ವರ್ತನಗಳು ಎಂಥ ಭಯಂಕರವಾದವೆಂಬುವದೂ ಅವನಿಗೆ ಪೂರ್ಣ ಪರಿಚಯವಿತ್ತು. ಆದ್ದರಿಂದ ಗೋವಿಂದರಾಯನಿಗೆ ಸ್ವಲ್ಪ ಭೀತಿಯು ಹುಟ್ಟಿತು. ದುಷ್ಟರು ಪರಿಣಾಮದ ಕಡೆಗೆ ದೃಷ್ಟಿಯನ್ನಿಡದೆ, ಬೇಕಾದಂಥ ಕೆಟ್ಟ ಕೆಲಸವನ್ನು ಮಾಡಲಿಕ್ಕೆ ಹಿಂಜರಿಯುವದಿಲ್ಲವೆಂಬುವದೂ, ಆ ಪ್ರಕಾರ ದುಷ್ಟ-ಶಿರೋಮಣಿಯಾದ ವಿಶ್ವನಾಥರಾಯನು ಮಾಡುವವರಲ್ಲಿ ತಪ್ಪುವದಿಲ್ಲವೆಂಬುವದೂ ಗೋವಿಂದರಾಯನಿಗೆ ಸಂಪೂರ್ಣ ಗೊತ್ತಾಗಿತ್ತು. ತಾನು ಒಬ್ಬ ಸಾಧ್ವಿಯ ಸಲುವಾಗಿ ಪ್ರಯತ್ನ ಮಾಡುತ್ತೇನೆಂದೂ, ಆ ಪ್ರಯತ್ನಕ್ಕೆ ಶಿಷ್ಟ ರಕ್ಷಕನಾದ ಈಶ್ವರನು ಜಯವನ್ನು ಕೊಟ್ಟೇ ಕೊಡುತ್ತಾನೆಂದೂ ಅವನಿಗೆ ದೃಢ ನಿಶ್ಚಯವಿತ್ತು. ತನಗೆ ಈ ಕೆಲಸದ ಸಲುವಾಗಿ ಅಂತೂ ಇಂತೂ ಕಷ್ಟವು ಪ್ರಾಪ್ತವಾಗುವದೆಂದೂ, ಕಷ್ಟವಾದರೂ ಅದರಿಂದ ದುಷ್ಟಶಾಸನವಾಗಿ ಶಿಷ್ಟ ಸಂರಕ್ಷಣೆಯಾಗುವದೆಂದೂ ಅವನಿಗೆ ಪೂರ್ಣವಾಗಿ ಭರವಸವಿತ್ತು. ಕೃಷ್ಣರಾಯನ ಸಂಬಂಧವಾಗಿ ಗೋವಿಂದರಾಯನಿಗೆ ತುಂಬಾ ವಿಶ್ವಾಸವಿತ್ತು. ಕೃಷ್ಣರಾಯನು ಕೂಡಲೆ ಮುಂಬಯಿಯಿಂದ ಪೋಲೀಸು ಮೊದಲಾದವರನ್ನು ಕರಕೊಂಡು ಬಂದು, ವಿಶ್ವನಾಥರಾಯನ ಕೃಷ್ಣ-ಕಾರಸ್ಥಾನವನ್ನು ಬೈಲಿಗೆಳೆದಾನೆಂದೂ ಅವನಿಗೆ ಮನವರಿಕೆಯಿತ್ತು. ಈ ವಿಷಯದಲ್ಲಿ ಎಷ್ಟು ತೊಂದರೆಯಾದರೂ ಚಿಂತೆಯಿಲ್ಲ. ವಿಶ್ವನಾಥರಾಯನಿಗೆ

ಚೆನ್ನಾಗಿ ತನ್ನ ಕೈಯನ್ನು ತೋರಿಸಬೇಕೆಂದು ಅವನು ತನ್ನ ಮನಸ್ಸಿನಲ್ಲಿ ಗಟ್ಟಿ ಮಾಡಿಕೊಂಡಿದ್ದನು. ಈ ಪ್ರಕಾರ ಮನಸ್ಸಿನಲ್ಲಿ ಅನೇಕ ವಿಚಾರಗಳು ನಡೆದಿರುತ್ತಲೇ ಗೋವಿಂದರಾಯನಿಗೆ ಗಾಢ ನಿದ್ರೆ ಹತ್ತಿತು.

* * * * * *

ರಾತ್ರಿ ಹನ್ನೆರಡು ಹೊಡೆದು ಹೋಗಿದೆ. ಎಲ್ಲ ಕಡೆಗೂ ಶಾಂತತಾ ಸಾಮ್ರಾಜ್ಯವು ಪಸರಿಸಿದೆ. ಹಿಟ್ಟು ಚಲ್ಲಿದ ಹಾಗೆ ಬೆಳದಿಂಗಳು ಬಿದ್ದದೆ. ಗಗನಮಂಡಲದಲ್ಲಿ ನಕ್ಷತ್ರಗಳು ಪೃಥ್ವಿಯ ಕಡೆಗೆ ನೋಡಿ ನಗುತ್ತವೆ. ತನ್ನ ಕೋಮಲವಾದ ಕಿರಣಗಳಿಂದ ಪೃಥ್ವಿಯನ್ನು ಆನಂದಗೊಳಿಸುವ ಚಂದ್ರನು ಏನೋ ಬೇರೊಂದು ಜಿಜ್ಞಾಸೆಯಿಂದ ನಮ್ಮ ಪೃಥ್ವಿಯ ಕಡೆಗೆ ನೋಡುತ್ತಾನೆ. ಆಕಾಶಮಂಡಲದ ಈ ಸ್ಥಿತಿಯು ಬಹಳ ಚಮತ್ಕಾರವಾದದ್ದಿತ್ತು. ಆ ವೇಳೆಯಲ್ಲಿ ಪೃಥ್ವಿಯ ಮೇಲಿನ ಅಗ್ನಿಯ ಪ್ರಚಂಡ ಜ್ವಾಲೆಯು ಆಕಾಶಮಂಡಲವನ್ನು ಸಮೀಪಿಸಿದೆ. ಈ ಅಧಮತನದ ಅಸಾಧ್ಯ ಪ್ರಯತ್ನಕ್ಕೆ ಆಕಾಶ ಮಂಡಲವು ನಗುತ್ತದೆ. ಆಕಾಶಮಂಡಲದ ವಿಕಟ ಹಾಸ್ಯವು ಈ ಜ್ವಾಲೆಯು ಅತ್ಯಂತ ನೀಚತರದ್ದೆಂದು ತಿಳಿಸುತ್ತದೆ. ಆದರೆ ನಮ್ಮ ಕ್ಷುದ್ರ ಮಾನವೀದೃಷ್ಟಿಯಿಂದ ಈ ಜ್ವಾಲೆಯು ಅತ್ಯಂತ ಘೋರವಾಗಿತ್ತು. ಅವಂತೀಪುರದ ಒಂದು ದೊಡ್ಡ ಮನೆಯು ಅಗ್ನಿಯ ಇರುಕಿನಲ್ಲಿ ಪೂರ್ಣವಾಗಿ ಸಿಕ್ಕು, ಎಲ್ಲ ಕಡೆಗೂ ಹಾಹಾಕಾರವನ್ನು ಎಬ್ಬಿಸಿದೆ. ಆ ಮನೆಯ ಎಲ್ಲ ಭಾಗವು ಸುಟ್ಟು, ಭಸ್ಮವಾಗಿದೆ. ನಮ್ಮ ತರ್ಕಪರಿಶೀಲರಾದ ವಾಚಕ ಬಂಧುಗಳು ಸುಟ್ಟ ಮನೆಯು ಇಂಥವರದೇ ಇರಬಹುದೆಂಬದನ್ನು ತರ್ಕಿಸಿರಬಹುದು. ನಿಮ್ಮ ತರ್ಕದಂತೆ ಸುಟ್ಟ ಸುಂದರವಾದ ಮನೆಯು ಗೋವಿಂದರಾಯನದೇ ಹೌದು. ಮಧ್ಯರಾತ್ರಿಯಲ್ಲಿ ಒಮ್ಮಿಂದೊಮ್ಮೆಲೆ ಮನೆಗೆ ಬೆಂಕಿ ಹತ್ತಿತು. ಮನೆಯ ಎಲ್ಲ ಭಾಗವು ಕಾರ್ತಿಕ ಹಚ್ಚಿದಂತೆ ಕಾಣುತ್ತದೆ. ಅಹಹ! ಬಡ ಗೋವಿಂದರಾಯನ ಮೇಲೆ ಎಂಥ ಘೋರ ಪ್ರಸಂಗವು!! ಗೋವಿಂದರಾಯನೂ, ಅವನ ಹೆಂಡತಿಯೂ ಬೆಂಕಿಯ ಕಲ್ಪನೆಯಿಲ್ಲದ್ದರಿಂದ ನಿದ್ರೆಯಲ್ಲಿ ಮಗ್ನರಾಗಿದ್ದಾರೆ. ದನಗಳ ಒದರಾಟದಿಂದ ಅವರಿಬ್ಬರಿಗೂ ಒಮ್ಮೆಲೇ ಎಚ್ಚರವಾಗಿ, ಅವರು ಆ ಬೆಂಕಿಯಲ್ಲಿ ಒಳ್ಳೇ ಕಷ್ಟದಿಂದ ಪಾರಾಗಿ ಹೊರಗೆ ಬಂದರು............ಗೋವಿಂದರಾಯನು "ಓಡಿಬರ್‍ರಿ-ಓಡಿಬರ್‍ರಿ-

ನೀರು-ನೀರು " ಎಂದು ಒಂದೇಸವನೆ ಕೂಗಹತ್ತಿದನು. ಹತ್ತರದವರು ಅಲ್ಲಿಯವರು ಇಲ್ಲಿಯವರು, ಅಗ್ನಿಯ ಭಯಂಕರತೆಯನ್ನು ನೋಡಿ, ಒಮ್ಮೆಲೆ ಕೂಡಿದರು. ಕೂಡಿದ ಜನರಲ್ಲಿ ಗೋವಿಂದರಾಯನ ಸಂಬಂಧವಾಗಿ ದುಃಖಪ್ರದರ್ಶನ ಮಾಡುವವರು ೨೦-೨೫ ಜನರು ಮಾತ್ರ ಇದ್ದರು. ಅವರಿಂದ ಆ ಅಗ್ನಿಯನ್ನು ಶಾಂತ ಮಾಡುವ ಸಾಮರ್ಥ್ಯವಿದ್ದಿಲ್ಲ. ಉಳಿದ ಜನರೆಲ್ಲ ತಮಾಶೆಯನ್ನು ನಿಂತು ನೋಡುವವರಿದ್ದರು. ಅವರಿಗೆ ಆ ದುರ್ಧರ ಪ್ರಸಂಗವು ಆನಂದಮಯವಾಗಿ ಕಾಣಿಸುತ್ತಿತ್ತು!! ಆ ಸೋಗಸುಗಾರರಲ್ಲಿ ಧೋಂಡೀರಾಜ-ಮಾಧವರಾಯರು ಸಮಾವೇಶರಾಗಿದ್ದರೆಂಬದನ್ನು ಚಾಣಾಕ್ಷ ವಾಚಕರಿಗೆ ಬೇರೆ ಹೇಳುವ ಅವಶ್ಯವಿಲ್ಲ. ಮನೆಯ ಎಡರಿನ ಮರದ ಮೇಲಿದ್ದ ಪಕ್ಷಿಗಳು ಬೆಂಕಿಯ ಸಂಪರ್ಕದಿಂದ ಕೋಲಾಹಲ ಮಾಡುತ್ತಿದ್ದವು. ಹಾರಲಿಕ್ಕೆ ಬರುವ ಪಕ್ಷಿಗಳೆಲ್ಲ ಭರಾಭರಾ ಹಾರಿ ಹೋದವು. ಪುಚ್ಛ ಬಲಿಯದ ಪಕ್ಷಿಗಳು ಬೆಂಕಿಯಲ್ಲಿ ಬಿದ್ದು ಸತ್ತವು. ಗಿಡದ ಟೊಂಗೆಗಳು ಜ್ವಾಲೆಯಿಂದ ಬೆಂದು ನೆಲಕ್ಕುರುಳಿದವು. ಹಕ್ಕೆಯಲ್ಲಿದ್ದ ಜನಾವರಗಳು ಕರುಣಾಜನಕ ಸ್ವರದಿಂದ ಒದರುತ್ತಿದ್ದವು; ಆದರೆ ಆ ಬೆಂಕಿಯಲ್ಲಿ ನುಗ್ಗಿ ಹೋಗಿ ಆ ಜನಾವರಗಳನ್ನು ಬದುಕಿಸಲು ಯಾರಿಗೂ ಸಾಮರ್ಥ್ಯವಿದ್ದಿಲ್ಲ. ಎಲ್ಲ ಜನಾವರಗಳು ಬೆಂದು ಸತ್ತು ಹೋದವು. ಆ ಜನಾವರಗಳ ದೀನಸ್ವರವನ್ನು ಕೇಳಿದಾಗ, ಮೈಮುರಿದು ದುಡಿದುಕೊಂಡ, ಪ್ರೀತಿಯಿಂದ ಸಾಕಿ ಸಲಹಿದ ಆ ಗೋವಿಂದರಾಯನಿಗೆ ಎಷ್ಟು ಚಿಂತೆಯಾಗಿದ್ದೀತೆಂಬದನ್ನು ಪರ್ಯಾಲೋಚಿಸಲಿಕ್ಕೆ ವಾಚಕರು ಸಮರ್ಥರಿರುವಿರಿ. ನೋಡುನೋಡುವಷ್ಟರಲ್ಲಿ ಭವ್ಯವಾದ ಮನೆಯು ಸುಟ್ಟು ಬೂದಿಯಾಯಿತು. ರಮಣೀಯವಾದ ತೋಟದ ಪ್ರದೇಶವು ಕಾಡ್ಗಿಚ್ಚಿನಿಂದ ವ್ಯಾಪಕವಾದ ಅರಣ್ಯದಂತೆ ಕಾಣಿಸಹತ್ತಿತು. ಇಂಥ ಭಯಂಕರ ಪ್ರಸಂಗದಲ್ಲಿ ಗೋವಿಂದರಾಯನೂ, ಗೋವಿಂದರಾಯನ ಪತ್ನಿಯೂ ಬದುಕಿದ್ದು ಬಹಳ ಸಮಾಧಾನಕಾರಕ ಸಂಗತಿಯಾಗಿತ್ತು. ಈ ಭಯಂಕರ ವಾರ್ತೆಯು ವೇಣುವಿನ ಮಾತೆಯಾದ ಇಂದಿರಾಬಾಯಿಗೆ ಮುಟ್ಟಲು, ಅವಳು ಅಷ್ಟು ರಾತ್ರಿಯಲ್ಲಿಯೇ ಬಂದು, ಗೋವಿಂದರಾಯನನ್ನೂ, ಅವನ ಹೆಂಡತಿಯನ್ನೂ ತನ್ನ ಮನೆಗೆ ಕರಕೊಂಡು ಹೋದಳು.

ಆ ವೇಳೆಯಲ್ಲಿ ಗೋವಿಂದರಾಯನಿಗೆ ಆದ ಚಿಂತಾ-ದುಃಖಗಳನ್ನು ವರ್ಣಿಸಲಿಕ್ಕೆ ಆತನೇ ಸಮರ್ಥನು. ಮನೆಯನ್ನು ತಿರುಗಿ ಕಟ್ಟಿಸಲಿಕ್ಕೆ ಬಂದೀತು, ಧನವನ್ನು ಮತ್ತೆ ಗಳಿಸಲಿಕ್ಕೆ ಬಂದಿತು; ಆದರೆ ತಿರುಗಿ ಬಾರದ ವಸ್ತುಗಳ ಸಲುವಾಗಿ ಗೋವಿಂದರಾಯನಿಗೆ ಬಹಳ ದುಃಖವಾಯಿತು. ಪ್ರೀತಿಯ ಜನಾವರಗಳ ಸ್ಮರಣೆಯಾಯಿತೆಂದರೆ, ಗೋವಿಂದರಾಯನ ಹೃದಯವು ವಿದೀರ್ಣವಾಗಿ ಹೋಗುತ್ತಿತ್ತು. ಪ್ರೀತಿಯ ಗ್ರಂಥಗಳ ನೆನವಾದ ಕೂಡಲೆ ಗೋವಿಂದರಾಯನು ಕಣ್ಣುಗಳಿಂದ ಅಶ್ರುಬಿಂದುಗಳನ್ನು ಉದುರಿಸುತ್ತ ಸಣ್ಣ ಹುಡುಗರಂತೆ ಬಿಕ್ಕಿ ಬಿಕ್ಕಿ ಅಳುತ್ತಿದ್ದನು.

ಗೋವಿಂದರಾಯನ ಮನೆಗೆ ಯಾರು ಬೆಂಕಿಯನ್ನು ಹಚ್ಚಿಸಿದ್ದಾರೆಂಬುವದನ್ನು ವಾಚಕರಿಗೆ ಹೇಳುವ ಅತ್ಯವಶ್ಯವಿಲ್ಲ. ವಿಶ್ವನಾಥರಾಯನು ಇಷ್ಟು ವೈರತ್ವವನ್ನು ಸಾಧಿಸಿ, ಯಾವ ಪುರುಷಾರ್ಥವನ್ನು ಪಡೆಯಬೇಕಾಗಿತ್ತೊ ಏನೋ ಅದು ಅವನಿಗೇ ಪರಿಚಯ! ವಿಶ್ವನಾಥರಾಯನ ಈ ಅವಿಚಾರದ ಕೃತ್ಯದ ಸಲುವಾಗಿ ಎಷ್ಟೋ ಜನರಿಗೆ ಮನಸ್ಸಿನೇ ಸಂತಾಪವಾಯಿತು. ಆದರೆ ಈ ಬಗ್ಗೆ ಆ ದುಷ್ಟನಿಗೆ ಜವಾಬು ಕೇಳಲಿಕ್ಕೆ ಯಾರಿಗೂ ಧೈರ್ಯವಿದ್ದಿಲ್ಲ. ಯಾವನು ಅನಪರಾಧಿಯಾಗಿದ್ದನೋ, ಯಾವನು ಒಂದಾದರೂ ಕುಶಬ್ದದಿಂದ ಪರರ ಮನಸ್ಸನ್ನು ನೋಯಿಸುತ್ತಿದ್ದಿಲ್ಲವೋ, ಯಾವನು ಸದಾ ಈಶ್ವರೀ ಭಜನೆಯಲ್ಲಿಯೇ ಆಯುಷ್ಯವನ್ನು ಕಳೆಯುತ್ತಿದ್ದನೋ, ಯಾವನು ಪರೋಪಕಾರ ಮಾಡುವದೇ ತನ್ನ ಪುನೀತ ಕರ್ತವ್ಯ ಕರ್ಮವೆಂದು ತಿಳಿಯುತ್ತಿದ್ದನೋ, ಯಾವನು ತ್ರಿಕರಣ ಪೂರ್ವಕವಾಗಿ ಅನಾಥರನ್ನು ರಕ್ಷಿಸುತ್ತಿದ್ದನೋ ಅಂಥ ಸುಗುಣಶಾಲಿಯೂ, ಸುಜ್ಞನೂ ಆದ ಗೋವಿಂದರಾಯನ ಮನೆಗೆ ಬೆಂಕಿ ಹತ್ತಿದ ಕೂಡಲೆ ಶಿಷ್ಟರಕ್ಷಕನಾದ ಈಶ್ವರನು ಮೇಲಿಂದ ಮಳೆಯನ್ನು ಬೀಳಿಸಿ, ಅದನ್ನು ನೊಂದಿಸಬೇಕಾಗಿತ್ತು. ಆದರೆ ಹಾಗೆ ಮಾಡಲಿಕ್ಕೆ ಈಶ್ವರನು ಉನ್ಮತ್ತ ವಿಶ್ವನಾಥರಾಯನಿಗೆ ಹೆದರಿದನೋ ಏನೋ! ಹೇಗೆ ಇರಲಿ. ದುರಾತ್ಮರಿಗೆ ಈಗ್ಗೇ ಆಗಲಿ, ಮುಂದೇ ಆಗಲಿ, ಕಡೆಗೆ ಈ ಜನ್ಮದಲ್ಲಿಯಾಗಲಿ, ಮುಂದಿನ ಜನ್ಮದಲ್ಲಿಯಾಗಲಿ ಪ್ರತಿಫಲವು ಸಿಕ್ಕೇ ಸಿಗುತ್ತದೆ. ಎಂಬೀ ವಚನದ ಮೇಲೆ ವಿಶ್ವಾಸವನ್ನಿಟ್ಟು, ಸದ್ಯಕ್ಕೆ ನಾವು ಮುಂದೆ ಹೋಗೋಣ.

---

## ೧೩ನೆಯ ಪ್ರಕರಣ—ಹಿಮೂ.

ಮುಂಬಯಿಯ ಚೌಪಾಟಿಯ ಭಾಗಕ್ಕೆ ಒಂದು ಅತಿ ಮನೋಹರವಾದ ಸಣ್ಣ ತೋಟವದೆ. ಅದರ ಮಧ್ಯದಲ್ಲಿ ಚಿತ್ತಾಕರ್ಷಕವಾದ ಒಂದು ಬಂಗಲೆಯದೆ. ಸಂಜೆಯ ಭವ್ಯವಾದ ವೇಳೆಯಲ್ಲಿ ಬಂಗಲೆಯ ಮುಂದಿನ ಆರಾಮು ಖುರ್ಚಿಯ ಮೇಲೆ ಕುಳಿತು, ಒಬ್ಬ ತರುಣ-ಸ್ತ್ರೀಯು "ರಮಣೀ-ಬೋಧ" ಎಂಬ ಕಾವ್ಯವನ್ನು ಓದುತ್ತಿದ್ದಳು. ಅವಳ ಹತ್ತಿರ ಮೂರು ನಾಲ್ಕು ವರ್ಷದ ಒಬ್ಬ ಹುಡಿಗೆಯು ಏನೋ ಆಟವನ್ನಾಡುತ್ತಿತ್ತು. ಆ ತರುಣಿಯ ಹೆಸರು ರಮಾಬಾಯಿಯು; ಆ ಹುಡಿಗೆಯ ಹೆಸರು ಹಿಮೂ. ರಮಾಬಾಯಿಯು ಸಾಧಾರಣ ನಿಲುವಿಕೆಯುಳ್ಳವಳಾಗಿದ್ದಳು; ಅವಳ ನೇತ್ರಗಳು ವಿಶಾಲವಾದವುಗಳು; ಮುಖ್ಯವಾಗಿ ರಮಾಬಾಯಿಯ ಅಂಗೋಪಾಂಗಗಳಲ್ಲಿ ಯಾವ ತರದ ದೋಷಗಳಿಲ್ಲದ್ದರಿಂದ, ಅವಳು ಕಣ್ಣಿಗೆ ಬಹು ರಮಣೀಯವಾಗಿ ಕಾಣುತ್ತಿದ್ದಳು. ಅವಳು ಆ ವೇಳೆಯಲ್ಲಿ ಕೃಷ್ಣವರ್ಣದ ಚಂದ್ರಕಾಳೀ ಸೀರೆಯನ್ನು ಉಟ್ಟುಕೊಂಡಿದ್ದಳು. ಅವಳ ಲಕ್ಷವೆಲ್ಲ ಓದುವ ಪುಸ್ತಕದ ಕಡೆಗಿತ್ತು. ಆದರೂ ಅವಳು ನಡುನಡುವೆ ತನ್ನ ಸುಕುಮಾರ ಪುತ್ರಿಯ ಕಡೆಗೆ ನೋಡುತ್ತಿದ್ದಳು.

ರಮಾಬಾಯಿಯು, ತನ್ನ ಸುಕುಮಾರಿಯು ಹಿಮಕಾಲದಲ್ಲಿ ಹುಟ್ಟಿದ್ದರಿಂದ ಅವಳಿಗೆ 'ಹಿಮೂ' ಎಂದು ಹೆಸರಿಟ್ಟಿದ್ದಳು. ಹಿಮುವು ಶರೀರದಿಂದ ಸದೃಢೆಯಾಗಿದ್ದು ಸುಂದರವಾಗಿ ತೋರುತ್ತಿದ್ದಳು. ಆ ಹುಡಿಗೆಯ ಸ್ವಭಾವವು ಕೋಮಲವಾದದ್ದು; ಅವಳ ಮಾತುಗಳು ಮಧುರವಾದವುಗಳು; ಅವಳ ಮುದ್ರೆಯು ಮನೋಹರವಾದದ್ದು. ಕಂಡ ಕಂಡ ಜನರೆಲ್ಲರು ಅವಳನ್ನು ಪ್ರೀತಿಯಿಂದ ಎತ್ತಿಕೊಂಡು, "ತಂಗೀ ಬೆಲ್ಲಾ ಕೊಡು—ತಂಗೀ ಬೆಲ್ಲಾ ಕೊಡು" ಎಂದು ಕೇಳುತ್ತಿದ್ದರು. ಯಾರೇ ಏನೇ ವಿಚಾರ ಮಾಡಿದರೂ, ಅವರಿಗೆ ಆ ಹುಡಿಗೆಯು ತಟ್ಟನೆ ಸಮರ್ಪಕವಾದ ಉತ್ತರವನ್ನು ಕೊಡುತ್ತಿದ್ದಳು. ಹಿಮುವು ಆ ವೇಳೆಯಲ್ಲಿ ಗೊಂಬೆಗಳನ್ನು ತಕ್ಕೊಂಡು ಆಡುತ್ತಿದ್ದಳು. ಗೊಂಬೆಗಳನ್ನು ತರತರದ ಉಡಿಗೆ-ತೊಡಿಗೆಗಳಿಂದ ಶೃಂಗರಿಸಿದ್ದಳು. ಒಂದು ಗೊಂಬೆಗೆ ಮಗನು—ಒಂದು ಗೊಂಬೆಗೆ ಮಗಳೆಂದೂ, ಒಂದು ಗೊಂಬೆಗೆ ಸೊಸಿ—ಒಂದು ಗೊಂಬೆಗೆ ಅಳಿಯನೆಂದೂ, ಒಂದು

ಗೊಂಬೆಗೆ ಮಾವನು-ಒಂದು ಗೊಂಬೆಗೆ ಅತ್ತೆಯೆಂದೂ ಹೀಗೆ ಬೇರೆ ಬೇರೆ ಹೆಸರುಗಳನ್ನು ಇಟ್ಟು, ಹಿಮುವು ಆ ಗೊಂಬೆಗಳಿಂದ ಒಂದು ಸಂಸಾರ-ಶಕಟವನ್ನು ಸಾಗಿಸುತ್ತಿದ್ದಳು. ಅವಳ ಮನಸ್ಸಿನಲ್ಲಿ ಎರಡು ಗೊಂಬೆಗಳ ಲಗ್ನ ಮಾಡಬೇಕೆಂಬ ಅಪೇಕ್ಷೆಯು ಹುಟ್ಟಿತು. ಅಪೇಕ್ಷೆಯಂತೆ ಕಾರ್ಯಾರಂಭಿಸಿ, ತಾನೇ ಸ್ವತಃ ಸ್ಪಷ್ಟವಾಗಿ ಇದು ಮದುಮಗನು, ಇದು ಮದುಮಗಳು ಮೊದಲಾದ ಬೇರೆ ಬೇರೆ ಹೆಸರಿಟ್ಟಳು. ಬಹುತೇಕ ಆ ಗೊಂಬೆಗಳು ನಿದ್ರಿತಾವಸ್ಥೆಯಲ್ಲಿಯೇ ಇರುತ್ತಿದ್ದವು. ಎಂದೋ ಒಂದು ಹಿಮುವು ಆಡಲಿಕ್ಕೆ ಹತ್ತಿದಳೆಂದರೆ, ಆ ಗೊಂಬೆಗಳು ತಾಸೆರಡು ತಾಸು ಜಾಗೃತಾವಸ್ಥೆಯಲ್ಲಿ ಇರುತ್ತಿದ್ದವು. ಹಿಮುವು ಇಂದು ಆ ಗೊಂಬೆಗಳಿಗೆ ಸ್ವಚ್ಛ ಹವೆಯ, ಬೆಳಕಿನ ಲಾಭ ಮಾಡಿಕೊಟ್ಟಿದ್ದಳು. ಅವಳು ಎಲ್ಲ ಗೊಂಬೆಗಳನ್ನು ಸ್ವಚ್ಛವಾಗಿ ಒರೆಸಿ, ಅವಕ್ಕೆ ಉತ್ತಮ ತರದ ಬಟ್ಟೆಗಳನ್ನು ಹೊದಿಸಿದ್ದಳು; ತರತರದ ಆಭರಣಗಳನ್ನು ಹಾಕಿದ್ದಳು. ಅಂತೂ ಇಂತೂ ಹಿಮುವು ಲಗ್ನದ ಸಂಬಂಧವಾಗಿ ಬಹಳ ಗಡಬಿಡಿಯನ್ನು ನಡೆಸಿದ್ದಳು. ರಮಾಬಾಯಿಯು ಓದುವದರಲ್ಲಿ ವಿಶೇಷ ಮಗ್ನಳಾಗಿದ್ದಳು; ಆದರೆ ಹಿಮುವಿನ ಗಡಬಿಡಿಯಿಂದ ಅವಳು ಓದುವ ಪುಸ್ತಕವನ್ನು ಕೆಳಗಿಟ್ಟಳು. ಮತ್ತು ಹಿಮುವಿನ ಕಾಲ್ಪನಿಕ-ಸಂಸಾರದ ಕಡೆಗೆ ಸಕೌತುಕ ದೃಷ್ಟಿಯಿಂದ ನೋಡಲಾರಂಭಿಸಿದಳು. ಹಿಮುವಿನ ಎಲ್ಲ ಆಟವನ್ನು ಅವಲೋಕನ ಮಾಡಿದ ಮೇಲೆ ರಮಾಬಾಯಿಯು:—"ಹಿಮೂ, ಇಂದು ಬಹಳ ವಿನೋದದಿಂದ ಆಟವಾಡುತ್ತಿರುವಂತೆ ಕಾಣುತ್ತದೆ" ಎಂದಳು.

ಹಿಮುವು ಲಗ್ನದ ಸಾರಂಭದಲ್ಲಿ ತೊಡಗಿದ್ದಳು. ರಮಾಬಾಯಿಯ ಮಾತಿನ ಕಡೆಗೆ ಅವಳ ಲಕ್ಷ್ಯವಿದ್ದಿಲ್ಲ. ರಮಾಬಾಯಿಯು ಒಂದು ವೇಳೆ ಕರ್ಕಶ ಧ್ವನಿಯಿಂದ ಕೂಗಿ ಕರೆದಿದ್ದರೆ, ಹಿಮುವು ಕೂಡಲೆ ಓಡಿ ಬರುತ್ತಿದ್ದಳು. ಆದರೆ ರಮಾಬಾಯಿಯು ಹಾಗೆ ಮಾಡದೆ, ಮೆಲ್ಲನೆ ಹಿಮುವಿಗೆ ತಿಳಿಯದಂತೆ ಒಂದು ಗೊಂಬೆಯನ್ನು ತೆಗೆದಿಟ್ಟುಕೊಂಡು, ತಿರುಗಿ ತನ್ನ ಪುಸ್ತಕವನ್ನು ಓದಲಾರಂಭಿಸಿದಳು. ಆ ಗೊಂಬೆಯ ಅವಶ್ಯಕತೆಯು ಬಿದ್ದಾಗ ಹಿಮುವು ಅದನ್ನು ನೋಡಿದಳು, ಅದು ಇಲ್ಲದಾಯಿತು. ಆಗ ಹಿಮುವಿಗೆ ಬಹಳ ದಿಗಿಲು ಬಿದ್ದಿತು. ಅದರಲ್ಲಿ ಆ ಗೊಂಬೆಯು ವರನ

ಗೊಂಬೆಯು. ಅವಳು ಆ ಗೊಂಬೆಯನ್ನು ಹುಡುಕಿ ಹುಡುಕಿ ಬೇಸತ್ತಳು. ಎಷ್ಟು ಹುಡುಕಿದರೂ ಅದು ಸಿಗಲಿಲ್ಲ. ಕಡೆಗೆ ಅವಳು ಖಿನ್ನಮುಖಿಯಾಗಿ ಆರ್ತಸ್ವರದಿಂದ ತಾಯಿಯನ್ನು ಕುರಿತು :—

ಹಿಮು:—" ಅವ್ವಾ, ನನ್ನ ಗೊಂಬೆಯು ಏನಾಯಿತು? "

ರಮಾ:—( ನಗಮೊಗದೊಡನೆ ) " ಹಿಮೂ, ನಿನ್ನ ಗೊಂಬೆಯು ಎಲ್ಲಿ ಹೋಯಿತು?

ಹಿಮುವಿಗೆ ರಮಾಬಾಯಿಯ ನಗಮೊಗದ ಕಾರಣವು ತಿಳಿಯಲಿಲ್ಲ. ಅವಳು ತನ್ನ ಗೊಂಬೆಯು ಎಲ್ಲಿ ಹೋಗಿದ್ದೀತು, ಯಾವಾಗ್ಗೆ ಸಿಕ್ಕೀತು, ಈ ಮುಂತಾದ ಕಾರಣಗಳಿಂದ ವ್ಯಸನಾಕ್ರಾಂತಳಾಗಿದ್ದಳು. ಅವಳು ಆಗ:—

ಹಿಮು:—" ಅವ್ವಾ, ನನ್ನ ಗೊಂಬೆಯು ಎಲ್ಲಿ ಅದೆ? "

ರಮಾ:—( ನಗುತ್ತ ) " ನಿನ್ನ ಗೊಂಬೆಯು ಎಲ್ಲಿ ಅದೆಯೋ ಏನೋ ನನಗೇನು ಪರಿಚಯ! "

ಹಿಮೂ:—" ಅವ್ವಾ, ನನ್ನ ಗೊಂಬೆಯು ಎಲ್ಲಿಯೋ ಹೋಗಿದೆ. ಹುಡುಕಿ ಕೊಡುತ್ತೀ ಏನು "

ರಮಾ:—( ಅಪ್ಪಿಕೊಂಡು ) " ಹಿಮೂ, ನಿನ್ನ ಯಾವ ಗೊಂಬೆಯು ಹೋಗಿರುತ್ತದೆ. "

ಹಿಮೂ:—" ಅವ್ವಾ, ಮೊನ್ನೆ ಸಂತೆಯಲ್ಲಿ ಅಣ್ಣನು ತಂದುಕೊಟ್ಟದ್ದು............ಅದು ಕೆಂಪಗಿತ್ತು. ಅದರ ಹೊಟ್ಟೆಯು ಗಣಪತಿಯ ಹೊಟ್ಟೆಯಂತಿತ್ತು. "

ಇಷ್ಟರಿಂದ ರಮಾಬಾಯಿಯು ಸಂತುಷ್ಟ ಮನಸ್ಕಳಾಗಲಿಲ್ಲ.

ರಮಾ:—" ಹಿಮೂ, ಆ ಗೊಂಬೆಯು ಯಾವಾಗ ಹೋಗಿರುತ್ತದೆ. ನೀನು ಪೆಟ್ಟಿಗೆಯನ್ನು ಇಲ್ಲಿ ತಂದಾಗ್ಗೆ ಅದು ಇತ್ತೇನು?

ಹಿಮೂ:—" ನಾನು ಪೆಟ್ಟಿಗೆಯನ್ನು ತಂದಾಗ್ಗೆ ಅದರಲ್ಲಿ ಇತ್ತು—ಹೋಗಿ ಇನ್ನೂ ಬಹಳ ಹೊತ್ತು ಕೂಡ ಆಗಿಲ್ಲ. ಇದೇ ಇನ್ನೂ ಇತ್ತು. ನಾನು ಅದನ್ನು ಪೆಟ್ಟಿಗೆಯಿಂದ ಹೊರಗೆ ತೆಗೆದು ಉದ್ದಕ್ಕೆ ನಿಲ್ಲಿಸಿದ್ದೆನು. "

ತನಗೆ ಬೇಕಾದ ಉತ್ತರವು ದೊರೆಯದ್ದರಿಂದ ರಮಾಬಾಯಿಯು ಅವಳಿಗೆ ತಿರುಗಿ:—" ಹಿಮೂ, ನಿನ್ನ ಆ ಗೊಂಬೆಯನ್ನು ಯಾವ ಕಾರಣದ ಸಲುವಾಗಿ ಎದ್ದು ನಿಲ್ಲಿಸಿದ್ದಿ? "

ಹಿಮೂ:—( ಗೊಂಬೆ ಸಿಕ್ಕೀತು ಎಂಬುದ್ದೇಶದಿಂದ ) "ಗಂಡುಗೊಂಬೆ-ಹೆಣ್ಣುಗೊಂಬೆಗಳ ಲಗ್ನ ಮಾಡಬೇಕಾಗಿತ್ತು. ಇದೇ ನೋಡು ಹೆಣ್ಣು ಗೊಂಬೆಯು. ಇದು ಅತ್ತೆಯು, ಇದು ಮಾವನು, ಇದು ಅಂಥಾದ್ದು, ಇದು ಇಂಥಾದ್ದು, ಇದೇ ಇಲ್ಲಿ ಆ ಗಂಡು ಗೊಂಬೆಯನ್ನು ಇಟ್ಟಿದ್ದೆನು. ಇಷ್ಟರಲ್ಲಿ ಅದು ಎಲ್ಲಿ ಹೋಯಿತೋ ಏನೋ, ಯಾರಿಗೆ ಗೊತ್ತು !!"

ಗೊಂಬೆಯು ಸಲುವಾಗಿ ತೋರಿಸುವ ಕಳಕಳತೆಯನ್ನು ನೋಡಿ, ರಮಾಬಾಯಿಗೆ ನಗೆಯು ಉಕ್ಕೇರಿ ಬಂದಿತು. ಆದರೂ ನಗೆಯನ್ನು ಹೊರಗೆ ತೋರಗೊಡದೆ ಅವಳು:—"ಮಗಳೇ, ಹೋಗಲಿ ಬಿಡು. ಅದು ಹೋದರೆ, ಅದರ ತಲೆಮೆಟ್ಟ ಹಾರುವಂಥ ಮತ್ತೊಂದು ಗೊಂಬೆಯನ್ನು ತಂದುಕೊಡುತ್ತೇನೆ."

ಹಿಮೂ:—( ಅಸಮಾಧಾನದಿಂದ ) "ಅವ್ವಾ, ನನಗೆ ಮತ್ತೊಂದು ಬೇಕಾಗಿಲ್ಲ. ಅದೇ ಬೇಕು."

ಹಿಮುವಿನ ಅಸಮಾಧಾನವು ರಮಾಬಾಯಿಗೆ ವಿನೋದವಾಗಿ ತೋರಿತು. ಅವಳು ಹಿಮುವಿನ ಸುಕುಮಾರವಾದ ಗಲ್ಲಕ್ಕೆ ಮುದ್ದುಕೊಟ್ಟು:—"ಬಾಲೇ, ಕಳೆದ ಗೊಂಬೆಯನ್ನೇ ನಾನು ಹೇಗೆ ತಂದುಕೊಡಲಿ! ನಿನಗೆ ಬೇಕಾದರೆ ನಾನು ಮತ್ತೊಂದು ಮಾತ್ರ ತಂದುಕೊಟ್ಟೇನು. ಅದೇ ಬೇಕಂದರೆ ನನ್ನ ಯತ್ನವಿಲ್ಲ."

ಆ ನಿಷ್ಕಪಟ ಸುಕುಮಾರಿಗೆ ಕಳೆದು ಹೋದ ಗೊಂಬೆಯ ಮೇಲಿನ ಪ್ರೇಮವನ್ನು ಒಮ್ಮೆಲೇ ತೆಗೆದು ಹಾಕುವದಾಗಲಿಲ್ಲ. ಅವಳು ರಮಾಬಾಯಿಯ ಆರ್ಜವ ಮಾಡುತ್ತ:—"ಅವ್ವಾ, ನನಗೆ ಎರಡನೆಯದು ಬೇಕಿಲ್ಲ. ಅದೇ ಬೇಕು."

ರಮಾ:—( ಸ್ವಲ್ಪ ನಕ್ಕು ) "ಒಳ್ಳೇದು. ಹಿಮೂ, ಒಂದು ವೇಳೆ ನಾನು ಅದೇ ಗೊಂಬೆಯನ್ನು ಕೊಟ್ಟರೆ, ನನ್ನನ್ನು ಲಗ್ನದ ಕಾಲದಲ್ಲಿ ಊಟಕ್ಕೆ ಕರೆಸುತ್ತೀ ಹೇಗೆ?"

ಮಾತೆಯ ಮಾತಿನಿಂದ ಹಿಮುವಿಗೆ ಗೊಂಬೆಯು ಸಿಕ್ಕಿತೆಂದು ತೋರಿತು.

ಹಿಮೂ:—"ಹೋ ಹೋ, ಲಗ್ನದ ಖರ್ಚಿಗೆ ನೀನು ಅಕ್ಕಿ-ಬೇಳೆ-ಬೆಲ್ಲಗಳನ್ನು ಕೊಟ್ಟಿದ್ದಾದರೆ, ಅಗತ್ಯವಾಗಿ ಕರೆಯುತ್ತೇನೆ. ಏನೇ ಇರಲಿ. ಅವ್ವಾ, ನನ್ನ ಗೊಂಬೆಯನ್ನು ತಾ."

. . . . . . . . . .

ರಮಾಬಾಯಿಗೆ ಇನ್ನು ವಿಶೇಷ ಚೇಷ್ಟೆಯು ಯೋಗ್ಯವಲ್ಲದಾಗಿ ತೋರಿತು. "ಸಿಗ್ಗುವ ಪದಾರ್ಥವನ್ನು ತೀರ ಸಿಗ್ಗಿಸುವದು ಯುಕ್ತವಲ್ಲ." ಇದರಿಂದ ಹಿಮುವಿಗೆ ದುಃಖವು ಮಿತಿಮೀರಿ, ಅವಳು ಕಾಳಿ–ಬಜಂತ್ರಿಯಿಲ್ಲದ ಲಗ್ನದಲ್ಲಿ ರೋಧನದ ಕಾಳಿ–ಬಜಂತ್ರಿಯನ್ನು ಪ್ರಾರಂಭಿಸ್ಯಾಳು, ಇಲ್ಲಿಯವರೆಗೆ ಮಾಡಿದ್ದೇ ಸಾಕೆಂದು ನೆನಿಸಿ, ಅವಳು ಸೀರೆಯ ಪದರಿನಲ್ಲಿ ಅಡಗಿಟ್ಟದ್ದ ಗೊಂಬೆಯನ್ನು ತೆಗೆದು ಹಿಮುವಿನ ಕೈಯಲ್ಲಿ ಕೊಟ್ಟಳು. ಗೊಂಬೆಯು ಕರಗತವಾಗುತ್ತಲೇ ಹಿಮುವಿಗೆ ಆಗಬಾರದಷ್ಟು ಆನಂದವಾಯಿತು. ಆಕೂಡಲೆ ಅವಳು ತಾಯಿಯ ಮೇಲೆ ಹರಿಹಾಯುತ್ತ:—"ನಾನು ಈಗ ದೂರ ಆಡಲಿಕ್ಕೆ ಹೋಗುತ್ತೇನೆ." ಎಂದನ್ನುತ್ತ ಭರಾಭರಾ ಗೊಂಬೆಗಳನ್ನು ತಕ್ಕೊಂಡು, ಪೆಟ್ಟಿಗೆಯಲ್ಲಿ ತುಂಬಿ, ಸ್ವಲ್ಪ ದೂರ ಹೋಗಿ, ತನ್ನ ಆಟದ ಸಾಮಾನುಗಳನ್ನು ಮತ್ತೆ ಹರಡಿ ಆಟವಾಡುತ್ತ ಕುಳಿತಳು. ರಮಾಬಾಯಿಯು ತಿರುಗಿ ತನ್ನ ಪುಸ್ತಕವನ್ನು ತಕ್ಕೊಂಡು ಓದಹತ್ತಿದಳು.

ಚಾಣಾಕ್ಷ ವಾಚಕರೇ, ಈಶ್ವರನು ಈ ಜಗತ್ತನ್ನು ಬಳ್ಳೇ ಚಮತ್ಕೃತವಾಗಿ ನಿರ್ಮಿಸಿದ್ದಾನೆಂದು ಹೇಳಬಹುದು. ಸುಖ–ದುಃಖ, ಹರ್ಷ–ಶೋಕ, ಸ್ವಾಸ್ಥ್ಯ–ಅಸ್ವಾಸ್ಥ್ಯ, ಶಾಂತ–ಕೋಪ ಇತ್ಯಾದಿ ವ್ಯತ್ಕ್ರಮ ಮನೋವಿಕಾರಗಳನ್ನು ನಾವು ಪ್ರತಿಕ್ಷಣದಲ್ಲಿ ನೋಡುತ್ತೇವೆ, ಬೆರಗಾಗುತ್ತೇವೆ ಮತ್ತು ವಿಚಾರ ವಿಶೇಷದಿಂದ ಕುಂಠಿತರಾಗುತ್ತೇವೆ. ಜಗತ್ತಿನಲ್ಲಿ ಅನೇಕ ಪ್ರಕಾರದ ಪರಸ್ಪರ ವಿರೋಧತ್ವವು ಅಕ್ಷಯವಾಗಿ ನಡೆದಿರುತ್ತದೆ. ಕೆಲವರು ಆಡುತ್ತಿದ್ದರೆ. ಕೆಲವರು ಬೀಳುತ್ತಿರುತ್ತಾರೆ, ಕೆಲವರು ನಗುತ್ತಿದ್ದರೆ ಕೆಲವರು ಅಳುತ್ತಿರುತ್ತಾರೆ, ಕೆಲವರು ಹೆಚ್ಚಳದ ಪರ್ವತವನ್ನು ಏರಿದ್ದರೆ ಕೆಲವರು ಕನಿಷ್ಟತೆಯ ಕಸಗುಡ್ಡಿಯನ್ನು ಏರುತ್ತಿರುತ್ತಾರೆ, ಕೆಲವರು ವ್ಯಾಪಾರದಿಂದ ಸುವರ್ಣಕಲಶದ ೭–೮ ಅಂತಸ್ತಿನ ಮನೆಯನ್ನು ಕಟ್ಟಿಸಿದ್ದರೆ ಕೆಲವರು ಅದೇ ಉದ್ಯೋಗದಿಂದಲೇ ದಿವಾಳಿ ತೆಗೆದು ಲಕ್ಷಾಪತಿಗಳಿದ್ದವರು ಭಿಕ್ಷಾಪತಿಗಳಾಗಿರುತ್ತಾರೆ. ಒಂದು ಕಡೆಗೆ ಬಳ್ಳೇ ಸುಭಿಕ್ಷವಾದರೆ ಮತ್ತೊಂದು ಕಡೆಗೆ ಕರಾಲವಾದ ದುಷ್ಕಾಲವಿರುತ್ತದೆ. ಒಂದು ಕಡೆಗೆ ಸ್ವತಂತ್ರತೆಯಿದ್ದರೆ ಮತ್ತೊಂದು ಕಡೆಗೆ ಪಶುತುಲ್ಯವಾದ ಗುಲಾಮತನವು ದೃಷ್ಟಿಗೆ ಬೀಳುತ್ತದೆ. ಈಪ್ರಕಾರವಾಗಿ ಜಗತ್ತಿನಲ್ಲಿ ಅನಂತ ವಿಲಕ್ಷಣ ಸಂಗತಿ

ಗಳು ನಡದೇ ಇರುತ್ತವೆ. ಈಪ್ರಕಾರದ ರೀತಿಯು ಒಂದೇ ವೇಳೆಯಲ್ಲಿ ಒಂದೇ ಸ್ಥಳದಲ್ಲಿ ದೃಷ್ಟಿಗೆ ಬೀಳುತ್ತದೆ. ಈ ವೇಳೆಯಲ್ಲಿ ಅತ್ತಕಡೆಗೆ ರಮಾಬಾಯಿಯ ತವರ್ಮನೆಯು ಚಿಂತಾಸಾಗರದಲ್ಲಿ ಮುಳುಮುಳುಗಿ ಏಳುತ್ತಿತ್ತು. ಆದರೆ ಇತ್ತಕಡೆಗೆ ರಮಾಬಾಯಿಯು ತನ್ನ ಮನೆಯಲ್ಲಿ ತನ್ನ ಮಗಳು ಹಿಮುವಿನೊಡನೆ ವಿನೋದದಿಂದ ಆಟವಾಡುತ್ತಿದ್ದಳು.

ಗೋವಿಂದರಾಯನೂ, ಗೋವಿಂದರಾಯನ ಪತ್ನಿಯೂ ಶೋಕಾಕುಲರಾಗಿದ್ದರು. ದೀನರ ಮನೆಯು ಸುಟ್ಟು ಇನ್ನೂ ಎರಡು ದಿವಸವಾಗಿತ್ತು. ಅದೇ ಕಾಲಕ್ಕೆ ಕೃಷ್ಣರಾಯನು ಮುಳುಗಿದನೆಂಬ ಅಶುಭವಾರ್ತೆಯನ್ನು ಧೋಂಡೀರಾಜನು ನಾವಾಡಿಗರ ಕಡೆಯಿಂದ ಗೋವಿಂದರಾಯನಿಗೆ ತಿಳಿಸಿದನು. "ಯಾವದೊಂದು ಮುದಿಗಿಡಕ್ಕೆ ಸಿಡಿಲಿನ ಆಘಾತವಾದರೆ ಅದು ಹೇಗೆ ಬೇರು ಸಹಿತ ಕಿತ್ತುಕೊಂಡು ನೆಲಕ್ಕೆ ಉರುಳುವದೋ" ಹಾಗೆ ಕೃಷ್ಣರಾಯನ ಮರಣವಾರ್ತೆಯು ಗೋವಿಂದರಾಯನ ಕಿವಿಗೆ ಬಿದ್ದ ಕೂಡಲೆ ಅವನು ಅರುವುದಪ್ಪಿ ನೆಲಕ್ಕೆ ಬಿದ್ದನು. ಕೃಷ್ಣರಾಯನ ಹಡೆದ ತಾಯಿಯಂತೂ ಪುತ್ರಶೋಕದಿಂದ ಶುದ್ಧ ಹುಚ್ಚಿಯಂತಾದಳು. ವೇಣುವಿನ ತಾಯಿ ಇಂದಿರಾಬಾಯಿಯು ಮೇಲಿನ ವಾರ್ತೆಯಿಂದ ನಿಂತಲ್ಲೆ ನಿಂತುಬಿಟ್ಟಳು. ಅವಳ ಧೈರ್ಯವೆಲ್ಲ ಅಳಿದುಹೋಗಿ ಅವಳಿಗೆ ಕೃಷ್ಣರಾಯನ ಜನನೀ-ಜನಕರನ್ನು ಹೇಗೆ ಸಮಾಧಾನಪಡಿಸಬೇಕೆಂಬುವದು ತಿಳಿಯದೆ ಹೋಯಿತು. ಶ್ರೀಪಾದನಂತೂ ಮೊದಲೇ ಅಜ್ಞಾನ ಬಾಲಕನು. ಅವನು ಮೇಲಿನ ದುಃಖಾಕ್ರಾಂತದಿಂದ ಪೇಚಾಟದಲ್ಲಿ ಬಿದ್ದನು. ಈಪ್ರಕಾರ ಮೇಲಿನ ಎಲ್ಲ ಜನರು ದುಃಖಾರ್ಣವದಲ್ಲಿ ಮುಳುಗಿದ್ದರು. ಆದರೆ ಅತ್ತಕಡೆಗೆ ರಮಾಬಾಯಿಯು ಹಿಮುವಿನೊಂದಿಗೆ ಆಡುವದರಲ್ಲಿಯೂ, ಸವಿಸವಿ ಮಾತುಗಳನ್ನಾಡುವದರಲ್ಲಿಯೂ, ಅವಳನ್ನು ಚೇಷ್ಟೆಯ ಮಾತುಗಳಿಂದ ಆನಂದಬಡಿಸಿ ಅವಳ ಮುದ್ದುಮಾತುಗಳಿಂದ ತಾನು ಆನಂದಬಡುವದರಲ್ಲಿಯೂ ಕಾಲವನ್ನು ಕಳೆಯುತ್ತಿದ್ದಳು. ಈ ರೀತಿಯು ಸೃಷ್ಟಿಯ ವ್ಯುತ್ಕ್ರಮಗತಿಯಿಂದ ವಾಸ್ತವ್ಯವಾಗಿತ್ತೋ ಇಲ್ಲೋ ಎಂಬ ಬಗ್ಗೆ ಇದೊಂದು ಪ್ರಶ್ನೆಯೇ ಇರುತ್ತದೆ. ಯಾವ ಸಂಬಂಧವಾಗಿ ಧೋಂಡೀರಾಜ-ವಿಶ್ವನಾಥರಾಯರಿಗೆ ಆನಂದವಾಗಿತ್ತೋ, ಆ ಸಂಬಂಧವಾಗಿ ರಮಾಬಾಯಿಗೂ ಆನಂದವಾಗಿತ್ತೆಂದು ಅನ್ನ

ಲಿಕ್ಕೆ ಬರುವಂತಿಲ್ಲ. ರಮಾಬಾಯಿಯು ಬೇರೊಂದು ಸ್ಥಿತಿಯಿಂದ ಆನಂದದಿಂದ ಹಿಮುವಿನೊಡನೆ ಆಡುತ್ತಿದ್ದಳು. ಅವಳು ತನ್ನ ತಾಯಿ–ತಂದೆ ಮೊದಲಾದವರು ಕುಶಲದಿಂದಿರುತ್ತಾರೆಂದು ತಿಳಿದು ಹಿಮುವಿನೊಡನೆ ಸಹಜಿಕವಾಗಿ ಸಾನಂದದಿಂದ ಆಡುತ್ತಿದ್ದಳು. ಇದರಲ್ಲಿ ಅವಳ ಅಪರಾಧವೇನೂ ಇರುವದಿಲ್ಲ. ವೇಣುವಿನ ವಿಷಯವಾಗಿ ಮಾತ್ರ ರಮಾಬಾಯಿಗೆ ಸ್ವಲ್ಪ ಅಸಮಾಧಾನವಾಗಿತ್ತು. ಯಾಕಂದರೆ ವೇಣುವು ಇಲ್ಲವೆಂಬುವದು ಅವಳಿಗೆ ತಿಳಿದಿತ್ತು, ಆದರೆ ಅವಳು ಎಲ್ಲಿ ಹೋದಳು, ಯಾರು ಎಳೆದೊಯ್ದರು, ಮೊದಲಾದ ಸಂಗತಿಗಳ ಬಗ್ಗೆ ಅವಳು ತನ್ನ ತಲೆಯನ್ನು ಖರ್ಚುಮಾಡಿದ್ದಿಲ್ಲ. ಅವಳು ವೇಣುವಿನ ಸಂಬಂಧವಾಗಿ ಉದಾಸೀನಳಾಗಿದ್ದಳು. ವೇಣುವು ಹೋದದ್ದರಿಂದ ಕೃಷ್ಣರಾಯನ ಲಗ್ನವು ಹೇಗಾದೀತು, ಈ ಚಿಂತೆಯಂತೂ ಅವಳಿಗೆ ಇದ್ದೇ ಇಲ್ಲ. ಕೃಷ್ಣರಾಯನು ಬಳ್ಳೇ ವಿದ್ವಾಂಸನೂ, ಸುಶೀಲನೂ, ಸುಂದರನೂ ಇದ್ದದರಿಂದ ವೇಣುವಿನ ತಲೆಮೆಟ್ಟ ಹಾಲುವಂಥ ಸ್ತ್ರೀಯಳು ತಾನೇ ಓಡಿ ಬಂದು ಲಗ್ನವಾದಾಳೆಂಬ ಬಗ್ಗೆ ಅವಳಿಗೆ ಸಂಪೂರ್ಣಮನವರಿಕೆಯಿತ್ತು.

ಅತ್ತಕಡೆಗೆ ಧೋಂಡೀರಾಜ–ಮಾಧವರಾಯರ ಯಾವತ್ತೂ ಕಾರ್ಯಗಳು ಯಥಾಪ್ರಕಾರವಾಗಿ ನಡೆದಿದ್ದವು. ಅವರ ಮತವು ಇನ್ನೂ ಸ್ಥಿರವಾಗಿತ್ತು. ಆ ಮಠಾಧಿಪತಿ ಮೊದಲಾದ ಎಲ್ಲ ಜನರ ಅನನ್ವಿತ ಕಾರ್ಯಗಳು ಪೂರ್ವದಂತೆ ನಡೆದೇ ಇದ್ದವು. ವೇಣುವು ವಿಶ್ವನಾಥರಾಯನ ಮನೆಯ ಕೋಣೆಯಲ್ಲಿ ಸೆರೆಮನೆಯ ದುಃಖವನ್ನು ಭೋಗಿಸುತ್ತಿದ್ದಳು. ಅಂಥ ದುಃಖಮಯ ಸ್ಥಿತಿಯಲ್ಲಿ ಅವಳು ಹೇಗೆ ಹೊತ್ತುಗಳೆಯುತ್ತಿದ್ದಳೆಂಬುವ ಕಲ್ಪನೆಯನ್ನು ಅವಳ ಹೊರ್ತು ಇತರರು ಮಾಡುವದು ದುರಾಪಾಸ್ತವೇ ಸರಿ. ಈಗ ವಿಶ್ವನಾಥರಾಯನಿಗೆ ಮಾತ್ರ ಸ್ವರ್ಗವು ಬಂದೂವರಿ ಬೊಟ್ಟು ಉಳಿದಿತ್ತು. ಈ ಯುದ್ಧದಲ್ಲಿ ಸರ್ವಸಾಮಾನ್ಯವಾಗಿ ತನಗೇ ಜಯವಾಯಿತೆಂಬ ಬಗ್ಗೆ ಅವನಿಗೆ ಬಳ್ಳೇ ಅಭಿಮಾನವು ಉತ್ಪನ್ನವಾಗಿತ್ತು. ಈ ಎಲ್ಲ ಕೃಪೆಯು ಶ್ರೀಶಂಕರನದೆಂದು ತಿಳಿದು, ಅವನು ಶ್ರೀ ಆಲಕೇಶ್ವರ ದೇವಾಲಯದಲ್ಲಿ ಒಂದು ದೊಡ್ಡ ಪ್ರಸ್ತಮಾಡಿ ಬ್ರಾಹ್ಮಣರಿಗೆಲ್ಲ ಪಂಚಪಕ್ವಾನ್ನವನ್ನು ಉಣಿಸಿ, ಯಥೇಚ್ಛವಾಗಿ ದಕ್ಷಿಣೆಯನ್ನು ಕೊಟ್ಟನು. ಇದೂ ಇರಲಿ.

ರಮಾಬಾಯಿಯು ಹಿಮುವಿನ ಸಂಗಡ ಆನಂದದಿಂದ ಆಡುತ್ತಿದ್ದರೂ, ಅವಳ ಮುಖದ ಮೇಲೆ ಅಲ್ಪಸ್ವಲ್ಪ ಚಿಂತಾಲಕ್ಷಣವಿತ್ತು. ಅವಳ ತವರೂರಕಡೆಯಿಂದ ಎಷ್ಟೋ ದಿವಸದಿಂದ ಪತ್ರಗಳು ಬಾರದ್ದರಿಂದ ಅವಳಿಗೆ ಸ್ವಲ್ಪ ವ್ಯಸನವಾಗಿತ್ತು. ರಮಾಬಾಯಿಯ ತವರೂರು ಅವಂತೀಪುರವಾಗಿತ್ತೆಂದು, ನಮ್ಮ ತರ್ಕಪರಿಶೀಲರಾದ ವಾಚಕರಿಗೆ ಬೇರೆ ಹೇಳಬೇಕಾಗಿಲ್ಲ. ಅವಂತೀಪುರಕ್ಕೆ ಪೋಸ್ಟಿನ ಸುಲಭತೆಯಿದ್ದರೂ ಪತ್ರವು ಹೋಗಿಬರಲಿಕ್ಕೆ ಎರಡು ದಿವಸ ಬೇಕಾಗುತ್ತಿತ್ತು. ಯಾಕಂದರೆ ಟಪಾಲು ಜಲಮಾರ್ಗವಾಗಿ ಮುಂಬಯಿಗೆ ಹೋಗದೆ, ಭೂಮಾರ್ಗವಾಗಿ ಹೋಗುತ್ತಿತ್ತು. ರೇಲ್ವೇ ಸ್ಟೇಶನ್ನು (ನಿಲ್ಲುವ ಮನೆಯು) ದೂರದಲ್ಲಿದ್ದದರಿಂದ ಟಪಾಲನ್ನು ಅಲ್ಲಿಗೆ ಹೋಗಿ ಮುಟ್ಟಿಸಿ ತರಲಿಕ್ಕೆ ಬಹಳ ವೇಳೆಯು ಬೇಕಾಗುತ್ತಿತ್ತು. ಎರಡು ದಿವಸಗಳ ಬದಲಾಗಿ ೧೦-೧೫ ದಿವಸವಾದರೂ ಅವಂತೀಪುರದಿಂದ ಪತ್ರವಿಲ್ಲ! ತವರೂರಿನ ವಾರ್ತೆಯು ಸ್ವಲ್ಪವಾದರೂ ತಿಳಿಯಲಿಲ್ಲ!! ದೀನನಾದ ಅವಂತೀಪುರದ ಪೋಸ್ಟ ಮಾಸ್ತರನು ಅವಂತೀಪುರದ ಪ್ರತಿರಾಜನಾದ ವಿಶ್ವನಾಥರಾಯನ ಕೈಗೊಂಬೆಯಾಗಿದ್ದನು. ಗೋವಿಂದರಾಯನು ರಮಾಬಾಯಿಗೆ ಬರೆಯುವ, ರಮಾಬಾಯಿಯು ಗೋವಿಂದರಾಯನಿಗೆ ಬರೆಯುವ ಪತ್ರಗಳನ್ನು ಸಂಗ್ರಹಿಸಿ, ಅವನ್ನು ಪೋಸ್ಟ ಮಾಸ್ತರನು ವಿಶ್ವನಾಥರಾಯನ ಕಡೆಗೆ ಕಳಿಸುತ್ತಿದ್ದನು. ವಿಶ್ವನಾಥರಾಯನು ಆ ಎಲ್ಲ ಪತ್ರಗಳನ್ನು ಓದಿಕೊಂಡು ಕೂಡಲೆ ಅವನ್ನು ಅಗ್ನಿಯ ಭಕ್ಷಸ್ಥಾನದಲ್ಲಿ ಚಲ್ಲಿ ಬಿಡುತ್ತಿದ್ದನು. ಈಪ್ರಕಾರವಾಗಿ ಮಧ್ಯದಲ್ಲಿಯೇ ಪತ್ರಗಳು ಮಾಯವಾಗುತ್ತಿದ್ದದರಿಂದ, ರಮಾಬಾಯಿಗೆ ತವರೂರಿನ ವಾರ್ತೆಯು ತಿಳಿಯಲಾಸ್ಪದವಿದ್ದಿಲ್ಲ. ಆದ್ದರಿಂದ ಅವಳ ಮನಸ್ಸು ಬಹಳ ಚಂಚಲವಾಗಿತ್ತು. ಅವಳು ವಿಶ್ವಪ್ರಯತ್ನಮಾಡಿ ತನ್ನ ಮನಸ್ಸನ್ನೆಲ್ಲ ಪುಸ್ತಕದ ಕಡೆಗೆ ಇಟ್ಟರೂ, ಅದು ನಿಜವಾಗಿ ಕೇಶವರಾಯನ ಕಡೆಗೆ ಹೋಗಿತ್ತು. ಪುಸ್ತಕವನ್ನು ಓದುತ್ತಿರುವಾಗ್ಗೆ ಅವಳು ನಡುನಡುವೆ ಬೀದಿಯಲ್ಲಿ ಹೋಗಬರುವ ಗಾಡಿಯ ಕಡೆಗೆ ನೋಡುತ್ತಿದ್ದಳು. ಈಪ್ರಕಾರ ಎಷ್ಟೋ ವೇಳೆಯು ಹೋದನಂತರ ಕೇಶವರಾಯನ ಗಾಡಿಯು ಬಂದಿತು. ಕೇಶವರಾಯನು ಗಾಡಿಯಿಂದ ಇಳಿದು ಉಪ್ಪರಿಗೆಯ ಮೇಲೆ ಬಂದನು. ಕೇಶವರಾಯನನ್ನು ನೋಡಿದ ಕೂಡಲೆ ಹಿಮುವಿನ ಆನಂದಕ್ಕೆ ನೆಲೆಯಿಲ್ಲವಾ

ಯಿತು. ಅವಳು " ಅಪ್ಪನು ಬಂದನು. ಅಪ್ಪನು ಬಂದನು " ಹೀಗನ್ನುತ್ತ ಆನಂದದಿಂದ ಕುಣಿದಾಡಹತ್ತಿದಳು. ಹಿಮುವಿನ ಈ ವಿಲಕ್ಷಣಾನಂದ ವನ್ನು ನೋಡಿ ರಮಾಬಾಯಿಯು:—" ಇದರಲ್ಲಿ ನಿನಗೆ ಇಷ್ಟು ಆನಂದವು ಯಾವ ಕಾರಣದಿಂದ ಆಯಿತು ? "

ಹಿಮು:—" ಅವ್ವಾ, ಇರಲಿ. ನಾನು ಎಲ್ಲ ಸಂಗತಿಯನ್ನು ಅಪ್ಪನಿಗೆ ಹೇಳುತ್ತೇನೆ. ನೀನು ನನ್ನ ಗೊಂಬೆಯನ್ನು ಬಚ್ಚಿಟ್ಟದ್ದನ್ನು ನಾನು ಎಂದೂ ಹೇಳದೆ ಬಿಡುವದಿಲ್ಲ. "

ರಮಾ:—( ಆನಂದದಿಂದ ) " ಅಹಹಾ ! ಎಷ್ಟು ಹೆದರಿಕೆಯನ್ನು ತೋರಿಸುತ್ತೀ ನನಗೆ !! "

ಕೇಶವರಾಯನು ಹೊರಗಿನಿಂದ ಬಂದಕೂಡಲೆ ಮುಂಡಾಸ-ಕೋಟು-ಪಾಟಲನು ಮೊದಲಾದ ಕೋರ್ಟಿನ ಪೋಷಾಕವನ್ನು ತೆಗೆದಿಟ್ಟು, ಪ್ರಥಮ ದಲ್ಲಿ ಹಿಮುವನ್ನು ಎತ್ತಿಕೊಂಡು ಆಲಿಂಗನ ಮಾಡಿ, ಅವಳ ಎರಡು ಚುಂ ಬನಗಳನ್ನು ತಕ್ಕೊಂಡನು. ಹಿಮುವಿಗೆ ತಂದೆಯ ಸಂಪೂರ್ಣಾಶ್ರಯವು ಲಭಿಸಿದ ಕೂಡಲೆ ಅವಳು ಮಾತೆಯ ವಿರುದ್ಧ ವಚನಗಳನ್ನು ಆಡಲಾರಂ ಭಿಸಿದಳು.

ಹಿಮು:—" ಅಪ್ಪಾ, ಅವ್ವನು ಇಂದು ನನ್ನ ಆಟದ ಗೊಂಬೆಯನ್ನು ಕದ್ದಿಟ್ಟದ್ದಳು. "

ಕೇಶವರಾಯ:—" ನೀನು ಅದನ್ನು ಶೋಧಿಸಿದಿಯೇನು ? "

ಹಿಮು:—" ಇಲ್ಲ. ನಾನು ಆ ಗೊಂಬೆಯ ಲಗ್ನಮಾಡಬೇಕಾಗಿತ್ತು. ಆದ್ದರಿಂದ ಅದನ್ನು ಹುಡುಕಿ ಹುಡುಕಿ ಬೇಸತ್ತೆನು. ಆದರೆ ಅದು ಸಿಗಲಿಲ್ಲ. ಕಡೆಗೆ ಅವ್ವನೇ ಅದನ್ನು ಕೊಟ್ಟಳು. "

ಕೇಶವ:—" ಸಿಕ್ಕ ಮೇಲೆ ಲಗ್ನಮಾಡಿ ಕೊಟ್ಟೆಯೇನು ? "

ಹಿಮು:—" ಇಲ್ಲ. "

ಈಪ್ರಕಾರ ಜನಕ-ಪುತ್ರಿಯರ ಸಂವಾದವು ನಡೆದಿರುವಾಗ್ಗೆ ರಮಾ ಬಾಯಿಯು ತನ್ನ ಮೃದುಕರದಿಂದ ಹಿಮುವಿನ ಗಲ್ಲವನ್ನು ಹಿಡಿದು—

ರಮಾ:—" ಹಿಮುವಿಗೆ ನಿಜವಾಗಿ ವಕೀಲರೇ ಸಹಾಯಕರಾಗಿದ್ದಾರೆ. ಅಂದಮೇಲೆ ಕೇಳುವದೇನು ? ಆ ಹಿಮುವಿನ ಲಗ್ನವನ್ನೇ ಮಾಡಿಕೊಟ್ಟರಾ ಯಿತು. ಅಂದರೆ ಗಂಡನ ಮನೆಗೆ ಹೋಗಿಯೇ ಹೋಗುತ್ತಾಳೆ. "

ಹಿಮು:—" ಅಪ್ಪಾ, ನೀನು ಇಷ್ಟು ಲಗು ನನ್ನ ಲಗ್ನವನ್ನು ಮಾಡಿ ಕೊಡುವದಿಲ್ಲವೆಂದು ಅಂದಿದ್ದಿಲ್ಲವೇ ? "

ಕೇಶವರಾಯನು ಜೇನುತುಪ್ಪಕ್ಕಿಂತಲೂ ಸವಿಯಾದ ಹಿಮುವಿನ ಬಾಲವಚನಗಳನ್ನು ಕೇಳಿ ಸಂತೃಪ್ತನಾದ ಮೇಲೆ ಅವಳನ್ನು ಆಡುವದರ ಸಲುವಾಗಿ ಕೈಬಿಟ್ಟು, ತಾನು ಒಂದು ಆರಾಮ ಖುರ್ಚಿಯ ಮೇಲೆ ಕುಳಿತು, ಹತ್ತರದಲ್ಲಿಯೇ ಇದ್ದ ಆ ದಿವಸದ ವರ್ತಮಾನ ಪತ್ರವನ್ನು ಓದಲಾರಂಭಿಸಿದನು. ರಮಾಬಾಯಿಯು ಹತ್ತರದಲ್ಲಿಯೇ ನಿಂತುಕೊಂಡು ವಿನಯದಿಂದ ಮಾತನಾಡಲಾರಂಭಿಸಿದಳು.

ರಮಾ:—" ಇಂದು ತಂದೆಯ ಕಡೆಯ ಪತ್ರವೇನಾದರೂ ಬಂದಿದೆಯೇನು ? "

ಕೇಶವ:—" ಛೆ; ಏನೊಂದೂ ಇಲ್ಲ. ನನಗಂತೂ ಆಕಡೆಯ ಚಿಂತೆಯು ವಿಶೇಷವಾಗಿದೆ. ಕೃಷ್ಣರಾಯನ ಕಡೆಯಿಂದ ನಿದಾನ ೨-೩ ದಿವಸಕ್ಕೊಮ್ಮೆ ಪತ್ರವು ಬಂದೇ ತೀರಬೇಕು; ಆದರೆ ಇಂದಿಗೆ ೧೦-೧೫ ದಿವಸಾವವದರೂ ಒಂದೂ ಪತ್ರವಿಲ್ಲ. ಅಲ್ಲದೆ ನಾನು ಬರೆದ ಪತ್ರಕ್ಕೊಂದಕ್ಕೂ ಉತ್ತರವಿಲ್ಲ. ಇದೇನಾಶ್ಚರ್ಯವೋ ಏನೋ ನನಗಂತೂ ಏನೂ ತಿಳಿಯದಂತಾಗಿದೆ. "

ರಮಾ:—" ಪತ್ರವಿಲ್ಲ, ಪತ್ರವಿಲ್ಲ ಎಂದು ಎಷ್ಟು ದಿವಸ ಹಾದಿಯನ್ನು ನೋಡುವದು ! ನನ್ನ ಮನಸ್ಸಿಗೆ ಬಹಳ ಹಳಹಳಿಯಾಗಿದೆ. ನೀವು ಒಂದು ಸಾರೆ ಹೋಗಿ ನೋಡಿಕೊಂಡು ಬಂದರೆ ನೆಟ್ಟಗಾಗುತ್ತದೆ. "

ಕೇಶವ:—" ನನ್ನ ಮನಸ್ಸಿನಲ್ಲಿಯೂ ಹೋಗಿಬರಬೇಕೆಂಬುವದೇ ಅದೆ. ಹೇಗೂ ನನಗೆ ೨-೩ ದಿವಸ ಅನುಕೂಲವದೆ. ಕಾರಣ ಹೋಗಿ ಬರುತ್ತೇನೆ. "

ರಮಾ:—( ಮೆಲ್ಲನೆ ) ನಾನೂ ತಮ್ಮ ಸಂಗಡ ಬರಲಿಕ್ಕೆ ಅಪ್ಪಣೆಯಾದರೆ ನೆಟ್ಟಗಾಗುತ್ತದೆ. ಎಷ್ಟೋ ದಿವಸದಿಂದ ತಂದೆ ತಾಯಿಗಳ ಭೆಟ್ಟಿಯಿಲ್ಲ. ಕೃಷ್ಣರಾಯನು ಇಲ್ಲಿಂದ ಹೋಗಿ ಎಷ್ಟೋ ದಿವಸವಾಯಿತು. "

ಕೇಶವ:—" ಈಗ ಇಬ್ಬರೂ ಹೋಗುವ ಕಾರಣವಿಲ್ಲ. ನಾನು ಹೋಗಿಬಂದ ಮೇಲೆ ಬೇಕಾದರೆ ನೀನೂ ಹೋಗಬಹುದು. "

---

ಈ ಮೇಲೆ ರಮಾಬಾಯಿಯು ಹೆಚ್ಚಿಗೆ ಮಾತಾಡಲಿಲ್ಲ. ತವರೂರಿಗೆ ಹೋಗುವ ಉತ್ಸುಕತೆಯು ಎಲ್ಲ ಸ್ತ್ರೀಪುರುಗೂ ಇರುವದು ಸ್ವಾಭಾವಿಕವಾಗಿದೆ. ಆದರೆ ಅಷ್ಟರ ಸಲುವಾಗಿ ಹಂಡಿತನ ಮಾಡುವದು ರಮಾಬಾಯಿಗೆ ಪರಿಚಯಿಸುವಿದ್ದಿಲ್ಲ. ಪತಿಯು ಮಾತಾಡಿದ್ದರಲ್ಲಿ ಏನಾದರೂ ಹೇತು ಗರ್ಭಿತವಿರುವದೆಂದು ತಿಳಿದು, ರಮಾಬಾಯಿಯು ಸುಮ್ಮನಾದಳು. ಕೇಶವರಾಯನು ಮಾರನೇ ದಿವಸ ಹೋಗುವದನ್ನು ನಿಶ್ಚಯಿಸಿ, ಆ ಪ್ರಕಾರ ೧೧ ಘಂಟೆಯ ಹೊತ್ತಿಗೆ ಅವಂತೀಪುರಕ್ಕೆ ಹೊರಟು ಹೋದನು.

---

## ೭ನೆಯ ಪ್ರಕರಣ—ದೈವಬಲ.

ವಾಚಕರೆ, ಮನೋರಮೆಯು ಸತೀತ್ವ ರಕ್ಷಣೆಯ ಸಲವಾಗಿ ದಿಗಂಬರ ಮಠದ ಮಾಡಿಯ ಮೇಲಿಂದ ಬಿದ್ದದ್ದು ನಿಮ್ಮ ಲಕ್ಷದಲ್ಲಿರಬಹುದು. ಅಂದ ಬಳಿಕ ಅವಳ ಅವಸ್ಥೆ ಏನಾಗಿರುವದೆಂಬ ಚಿಂತೆಯು ತಮಗಾದರೂ ಇರಬಹುದಲ್ಲವೆ? ಅದನ್ನು ನೋಡುವದಕ್ಕಾಗಿ ಅಲ್ಲಿಗೆ ಹೋಗುವಾ ನಡೆಯಿರಿ. ಆ ಹೊತ್ತು ಸಚ್ಚಿದಾನಂದನೆಂಬ ಒಬ್ಬ ಸಾಧುವು ತನ್ನ ಅನುಯಾಯಿಗಳೊಡನೆ ಆ ಮಠದ ಸಮೀಪದಲ್ಲಿ ಹಾದು ಹೋಗುತ್ತಿದ್ದನು. ಆಗ ಅವನಿಗೆ "ಹಿಡಿ ಬಿಡ್ರಿ, ಹಿಡಿ ಬಿಡ್ರಿ" ಎಂಬ ಹೆಂಗಸಿನ ಬಾಯಿಯಿಂದ ಹೊರಟ ಶೋಕದ ಶಬ್ದವು ಕೇಳಿಸಿತು. ಆ ಕೂಡಲೆ ಅವನು ಮಠದ ಹತ್ತರ ಹೋಗಿ ನೋಡುತ್ತಾನೆ, ಆ ಮಠದ ಮಾಡಿಯ ಮೇಲಿಂದ ಒಬ್ಬ ಸರ್ವಾಂಗ ಸುಂದರಳು ಕೆಳಗ ನೆಲದ ಮೇಲೆ ಹಾರಿಕೊಂಡಿದ್ದಳು. ಆ ಸಂಗತಿಯನ್ನು ನೋಡಿ ಸಚ್ಚಿದಾನಂದನಿಗೆ ಸಖೇದಾಶ್ಚರ್ಯವಾಯಿತು. ಹಾಗೂ ತರ್ಕಪರಿಶೀಲನಾದ ಅವನು, ಈ ಸ್ತ್ರೀಯು ಕೇವಲ ಪಾತಿವ್ರತ್ಯ ರಕ್ಷಣೆಯ ಸಲುವಾಗಿ ಇಂಥ ಘೋರ ಕೃತ್ಯವನ್ನು ಮಾಡಲಿಕ್ಕೆ ಹೆದರಿಲ್ಲವೆಂದು ತಿಳಿದನು. ಮಠದ ಮಾಡಿಯ ಮೇಲಿಂದ ಹಾರಿಕೊಂಡ ಕೂಡಲೆ ಅವಳು ಸಾಯಬೇಕಾಗಿತ್ತು, ಆದರೆ ಕೆಳಗೆ ಎತ್ತರವಾದ ಗಾಂಜಿಯ ಗಿಡಗಳಿದ್ದದರಿಂದ ಮನೋರಮೆಗೆ ವಿಶೇಷ ಘಾಯವೇನೂ ಆಗಿದ್ದಿಲ್ಲ. ಮಠದೊಳಗಿನ ಘೋರ ಕೃತ್ಯದ ದರ್ಶನದಿಂದಲೂ ನೆಲದ ಮೇಲಿನ ವಿಷಮಾಘಾತದಿಂದಲೂ ಅವಳು ಅಚೇತನಾವಸ್ಥೆಯಲ್ಲಿ

ಬಿದ್ದಿದ್ದಳು. ಈ ವೇಳೆಯಲ್ಲಿ ಸಚ್ಚಿದಾನಂದನು ಹೆಚ್ಚಿಗೆ ತರ್ಕ ವಿತರ್ಕ ಮಾಡದೆ ಮನೋರಮೆಯನ್ನು ಸಂಗಡ ತಕ್ಕೊಂಡು ಹೊರಟು ಹೋದನು. ಆಶ್ರಮದಲ್ಲಿ ಹೋಗಿ ಸ್ವಲ್ಪ ಉಪಚಾರ ಮಾಡಿದ ಕೂಡಲೆ ಅವಳು ಜಾಗ್ರತಾವಸ್ಥೆಯನ್ನು ಹೊಂದಿದಳು. ಸಚ್ಚಿದಾನಂದನು ಅವಳ ಸ್ಥಿತಿಗತಿಗಳನ್ನು ವಿಚಾರ ಮಾಡಿ ಅವಳನ್ನು ಅವರ ತಾಯಿಯ ಮನೆಗೆ ಮುಟ್ಟಿಸುವಂತೆ ಮಾಡಿದನು. ಅವಳು ಮನೆಗೆ ಹೋಗಿ ಮುಟ್ಟುವ ಪೂರ್ವದಲ್ಲಿ ಧೊಂಡೀರಾಜ ಮೊದಲಾದ ದುಷ್ಟರು ಅವಳ ವಿಷಯವಾಗಿ ಗ್ರಾಮದಲ್ಲಿ ಅಸಹ್ಯವಾದ ವಾರ್ತೆಯನ್ನು ಹಬ್ಬಿಸಿದ್ದರು.

ಮನೋರಮೆಯು ಒಬ್ಬ ತರುಣ ಬಾಲ ವಿಧವೆಯು. ತನ್ನ ಆಯುಷವನ್ನು ಭಯಂಕರ ವೈಧವ್ಯಾವಸ್ಥೆಯ ದುಃಖದಲ್ಲಿ ಕಳೆದ ಹೊರ್ತು ಅವಳಿಗೆ ಯಾವ ಮಾರ್ಗವೂ ಇದ್ದಿಲ್ಲ. ವಾಚಕರೇ, ಆ ದೀನಳ ದುರ್ಭಾಗ್ಯವೆಷ್ಟು? ಜಗತ್ತೆಂದರೇನೆಂಬುವದನ್ನು ಕೂಡ ಯಾವಳು ಪೂರ್ಣ ಕಣ್ಣುತೆರೆದು ನೋಡಿದ್ದಿಲ್ಲವೋ, ಅವಳು ಬಾಲ್ಯಾವಸ್ಥೆಯಲ್ಲಿಯೇ ಪತ್ನಿಯಾಗಿ ತೀವ್ರವೇ ವಿಧವೆಯಾಗಿದ್ದಳು. ಅಹಹಾ! ನಮ್ಮ ಸಮಾಜದಲ್ಲಿಯ ರೂಢಿಯ ಭಯಂಕರ ಪರಿಣಾಮ.ವೆಂಥಾದ್ದು!! ಆ ದೀನಳಿಗೆ ವಿವಾಹ ಸಮಯದಲ್ಲಿ ಆಗತಕ್ಕ ಪತ್ನಿಯ ಅಧಿಕಾರದ ಬೋಧವಾಗದಿದ್ದರೂ, ಅವಳಿಗೆ ಸಮಾಜವು ಇಂಥವನ ಹೆಂಡತಿಯೆಂದು ಅನ್ನುತ್ತಿತ್ತು. ಅವಳಿಗೆ ವೈಧವ್ಯದೀಕ್ಷೆಯನ್ನು ಕೊಟ್ಟಾಗ್ಗೆ ಆ ಮುಗ್ಧೆಗೆ ವಿಧವೆಯೆಂದರೇನೆಂಬುವದು ಸಹ ತಿಳಿಯಲಿಲ್ಲ. ಶಿವ ಶಿವ! ಆ ಅಬಲೆಯ ವಿಟಂಬನವೆಷ್ಟು!! [ಆ ಬಾಲಿಕೆಯು ನಿರ್ದೋಷಿಯೂ, ನಿರಪರಾಧಿಯೂ ಇದ್ದಳು. ಆ ಅನಾಥಳನ್ನು ಶೈಶವಾವಸ್ಥೆಯಲ್ಲಿ ಪತ್ನಿಯನ್ನಾಗಿ ಮಾಡಿ, ಕೂಡಲೆ ಭಯಂಕರ ವೈಧವ್ಯವನ್ನು ಭೋಗಿಸಲಿಕ್ಕೆ ಹಚ್ಚಿದ್ದೇ ಸಮಾಜದ ನಿಜವಾದ ಅಪರಾಧವಾಗಿತ್ತು. ಸಮಾಜದ ಈ ಚಮತ್ಕಾರ ರೂಢಿ ಬಂಧನದಿಂದ ಆ ಮುಗ್ಧೆಯು ಜೀವಂತಳಿದ್ದು, ಈ ಪ್ರಪಂಚ ಸುಖಕ್ಕೆ ಎರವಾಗಿದ್ದಳು

ಮನೋರಮೆಯು ಜನರ ನಿಂದ್ಯೋಕ್ತಿಗೆ ಹೆದರಿ ಹೇಸಿ ಅರಣ್ಯದ ಭಯಂಕರ ಪಶು ಮೃಗಗಳ ಸಹವಾಸವನ್ನು ಮಾಡಲಿಕ್ಕೆ ಸಿದ್ಧಳಾದದ್ದರ ಮೇಲಿಂದ, ಮೂರ್ಖ ಜನರ ಕುತ್ಸಿತ ವಿಚಾರಗಳು ಭಯಂಕರ ಪಶುವಿನ ತೀಕ್ಷ್ಣ ನಖಕ್ಕಿಂತಲೂ ಅಧಿಕವಾಗಿ ಹೃದಯವಿದಾರಕವಿರುತ್ತವೆಂದು ಅನ್ನ

ಲಿಕ್ಕೆ ಬೇಕಾಗುತ್ತದೆ. ಮನೋರಮೆಗೆ ಸಚ್ಚಿದಾನಂದನ ಆಶ್ರಮದ ಪರಿಚಯವಿತ್ತು. ಅವಳು ಅರಣ್ಯದಲ್ಲಿ ಮಾರ್ಗವನ್ನು ಶೋಧಿಸುತ್ತ ಶೋಧಿಸುತ್ತ ಶೀಘ್ರದಲ್ಲಿಯೇ ಅವನ ಆಶ್ರಮದಲ್ಲಿ ಬಂದಳು. ಸಚ್ಚಿದಾನಂದನು ಅವಳನ್ನು ತನ್ನಾಶ್ರಮದಲ್ಲಿ ಕರಕೊಂಡನು ಮತ್ತು ಅವಳನ್ನು ಸಹೋದರಿಯಂತೆ ಸರ್ವ ರೀತಿಯಿಂದ ಪಾಲಿಸಲಿಕ್ಕೆ ಪ್ರಯತ್ನಿಸಿದನು. ಅವಳು ಸಚ್ಚಿದಾನಂದನ ಪೂಜ್ಯವಾದ ಅಂತಃಕರಣವನ್ನು ನೋಡಿ ಅವನನ್ನು ಅಗ್ರಜನೆಂದೂ, ದೇವಸಮಾನನೆಂದೂ ಭಾವಿಸುತ್ತಿದ್ದಳು. ಸಚ್ಚಿದಾನಂದನು ನಿಜವಾಗಿ ಸಾಧು ಪುರುಷನಿದ್ದು, ಅವನ ಅಂತಃಕರಣವು ಪವಿತ್ರವಾಗಿತ್ತು. ಅವನು ಮನದಿಂದ ಉದಾರನಿದ್ದು, ಭೂತದಯಾಸಂಪನ್ನನಿದ್ದನು.

ಅವನು ದೇಶೋದ್ಧಾರ ಕಾರ್ಯದಲ್ಲಿ ತೊಡಗಿದ್ದರಿಂದ ಅವನ ಕೀರ್ತಿಯು ನಾಲ್ಕೂ ಕಡೆಗೆ ಹಬ್ಬಿತ್ತು. ಮನೋರಮೆಯು ಸಚ್ಚಿದಾನಂದನ ಸದುಪದೇಶದಿಂದ ವೈರಾಗ್ಯಶೀಲಳಾಗಿದ್ದು ಜ್ಞಾನಸಂಪನ್ನಳಾಗಿದ್ದಳು. ಅವಳು ಸ್ತ್ರೀಯರಿಗೆ ಸದ್ಬೋಧೆಯುಂಟಾಗುವಂತೆ ವೇಳಿಂದ ವೇಳೆ ಉಪನ್ಯಾಸ ಮಾಡುತ್ತಿದ್ದಳು. ಮನೋರಮೆಯು ಸ್ತ್ರೀಸಮಾಜ ಸುಧಾರಣೆಯ ಕಾರ್ಯದಲ್ಲಿ ಕೈ ಹಾಕಿದ್ದರಿಂದ ಸಚ್ಚಿದಾನಂದನಿಗೆ ಮತ್ತಿಷ್ಟು ಸಹಾಯವಾಯಿತು. ಅವಳು ಸಾಯುವ ತನಕ ಬ್ರಹ್ಮಚರ್ಯ ವ್ರತದಿಂದಿದ್ದು ಅವನ ರಾಷ್ಟ್ರೋದ್ಧಾರ ಮಹತ್ಕಾರ್ಯಕ್ಕೆ ನೆರವಾಗಿ ಧನ್ಯಳಾಗಬೇಕೆಂದು ದೃಢ ಪ್ರತಿಜ್ಞೆ ಮಾಡಿದ್ದಳು. ಇಬ್ಬರು ಆಗಾಗ್ಗೆ ಉಪದೇಶದ ಸಲುವಾಗಿ ಪರಊರಿಗೆ ಹೋಗುತ್ತಿದ್ದರು. ಒಂದು ದಿವಸ ತಮ್ಮ ಕರ್ತವ್ಯದ ಸಲುವಾಗಿ ಇಬ್ಬರು ನಾವೆಯಲ್ಲಿ ಕುಳಿತುಕೊಂಡು ಮಾರ್ಗಸ್ಥರಾಗಿದ್ದರು.

ಸಾಯಂಕಾಲದ ಸಮಯವಾದ್ದರಿಂದ ಡೋಣಿಯಲ್ಲಿ ಆನಂದವು ತುಂಬಿ ತುಳುಕುತ್ತಿತ್ತು. ತರತರದ ಹಿತೋಕ್ತಿಗಳು ನಡೆದಿದ್ದವು. ನಾವಾಡಿಗರು ಆನಂದದಿಂದ ಡೋಣಿಯನ್ನು ಸಾಗಿಸುತ್ತ ಪದಗಳನ್ನು ಹಾಡುತ್ತಿದ್ದರು. ಈ ಪ್ರಕಾರ ಬೇಸರ ಹೋಗುವ ಕಾರ್ಯವು ಪ್ರಾರಂಭವಾಗಿದ್ದದರಿಂದ ವೇಳೆಯು ಎತ್ತ ಹೋಯಿತು ಎಂಬುವದು ಯಾರಿಗೂ ತಿಳಿಯಲಿಲ್ಲ. ಆ ದಿವಸ ಹುಣ್ಣಿಮೆಯಿತ್ತು. ಸಂಧ್ಯಾಕಾಲವು ಮೀರಿದ್ದರಿಂದ ಚಂದ್ರನ ಸುಪ್ರಕಾಶವು ಸಮುದ್ರದ ಮೇಲೆ ಬಹಳವಾಗಿ ಪಸರಿಸಿತ್ತು. ಈ ರಮ್ಯ

ವೇಳೆಯಲ್ಲಿ ಸಚ್ಚಿದಾನಂದನ ಡೋಣಿಯು ಬಹಳೇ ಭರದಿಂದ ನಡೆದಿತ್ತು. ಇಷ್ಟರಲ್ಲಿ ಸಚ್ಚಿದಾನಂದನ ದೃಷ್ಟಿಗೆ ಒಂದು ದೊಡ್ಡ ಉರಿಯು ಕಾಣಿಸಿತು.

ಆಗ ಸಚ್ಚಿದಾನಂದನು:—" ಎಲೆ ಇದೇನು, ಎದುರಿಗೆ ಎಂಥ ಉರಿಯು ಕಾಣಿಸುತ್ತದೆ." ಎಂದನು.

ನಾವಾಡಿಗರು ಅದನ್ನು ನೋಡಿ ಆಶ್ಚರ್ಯದಿಂದ ಉರಿಯು ಹೊಳೆದ ಕಡೆಗೆ ಡೋಣಿಯನ್ನು ಬಿತ್ತರದಿಂದ ಸಾಗಿಸಿದರು. ಅಷ್ಟರಲ್ಲಿ ಉರಿಯು ಶಾಂತವಾಗಿತ್ತು.

ಒಬ್ಬ ನಾವಾಡಿಗನು ಅತ್ತಿತ್ತ ನೋಡಿ, ಒಂದು ದಿಕ್ಕಿನ ಕಡೆಗೆ ಬೊಟ್ಟು ತೋರಿಸಿ:—" ಅಗೋ ನೋಡಿರಿ, ಯಾವದೋ ಒಂದು ಡೋಣಿಯು ನಡೆದಿದೆ." ಎಂದನು.

ನಾವಾಡಿಗನು ತೋರಿಸಿದ ದಿಕ್ಕಿನ ಕಡೆಗೆ ಎಲ್ಲರೂ ನೋಡಿದ ಮೇಲೆ ಅವರಿಗೆ ಒಂದು ಡೋಣಿಯು ಕಾಣಿಸಿತು; ಆದರೆ ಅದು ಬಹಳ ದೂರದಲ್ಲಿರುವದರಿಂದ, ಅದರ ವಿಷಯವಾಗಿ ಅವರಿಗೆ ಅನುಮಾನವನ್ನು ಹೊರಡಿಸುವದಾಗಲಿಲ್ಲ. ಇಲ್ಲಿಗೆ ಮುಂಬಯಿಯು ತೀರ ಸಮೀಪದಲ್ಲಿದ್ದು, ದಂಡೆಯ ಮೇಲಿನ ಎತ್ತರವಾದ ಸ್ಥಳದ ದೀವಿಗೆಗಳು ತಾರೆಗಳಂತೆ ಥಳಥಳ ಹೊಳೆಯುತ್ತಿದ್ದವು. ಆ ದೀಪದ ದರ್ಶನದಿಂದ ನಾವಾಡಿಗರ ಉತ್ಸಾಹವು ಮಿತಿಮೀರಿ, ಅವರು ಜೋರಿನಿಂದ ಡೋಣಿಯನ್ನು ನಡಿಸಹತ್ತಿದರು. ಡೋಣಿಯು ಭರದಿಂದ ಹೋಗುತ್ತಿರುವಾಗ್ಗೆ ಅದಕ್ಕೆ ಎರಡನೆಯ ಕಟ್ಟಿಗೆಯು ತಾಕಿದ ಸಪ್ಪಳವು ಕೇಳಬಂತು. ಆ ಕೂಡಲೆ ಒಬ್ಬ ನಾವಾಡಿಗನು ಗಟ್ಟಿಯಾಗಿ ಒದರಿ:—" ಹೆಣವಲೇ ಹೆಣವು! ಇದನ್ನು ನೋಡಿರಿ, ಈ ಹಲಿಗೆಯ ಮೇಲೆ ಪ್ರೇತವದೆ!!" ಎಂದನು.

ನಾವಾಡಿಗರೆಂದರೆ ಮೂರ್ಖ ಜನರು. ಅವರು ಈ ಹೆಣವನ್ನು ಒಳಗೆ ತೆಗೆದುಕೊಂಡು ಮೈಮೇಲಿದ್ದ ವಸ್ತ್ರವನ್ನು ಸುಲಿದುಕೊಂಡು ಚಲ್ಲಬೇಕೆಂದು ನೆನಿಸಿ, ಆ ಹೆಣವನ್ನು ಒಳಗೆ ತಕ್ಕೊಂಡರು. ಏನಾದರೂ ಸಿಕ್ಕೀತೆಂದು ಅವರು ಆ ಹೆಣದ ಅಂಗಶೋಧನ ಮಾಡಲು, ಅವರ ಎರಡೂ ಕರಗಳು ರಕ್ತದಿಂದ ಮುಳುಗಿ ಹೋದವು. ಆಗ ಒಬ್ಬನು:—" ಎಲೆ, ಇದೇನು ತಲೆಯಿಂದ ಬಳಬಳಾ ರಕ್ತವು ಸುರಿಯುತ್ತದೆ." ಎಂದನು.

ಸಚ್ಚಿದಾನಂದನಿಗೆ ಇಲ್ಲಿಯವರೆಗೆ ಅದು ಹೆಣವೆಂದು ಕಲ್ಪನೆಯಾಗಿತ್ತು; ಆದರೆ ರಕ್ತದ ಮಾತು ಹೊರಟ ಕೂಡಲೆ ಅವನು ಆಶಾಜನಕ ಸ್ವರದಿಂದ:—"ಇನ್ನೂ ರಕ್ತವು ಹರಿಯುತ್ತಿದ್ದರೆ, ಆ ಮನುಷ್ಯನು ಜೀವಂತನಿರಲಿಕ್ಕೆ ಅಡ್ಡಿಯಿಲ್ಲ. ನಿಲ್ಲಿರಿ. ಈ ವಸ್ತ್ರದಿಂದ ಅವನ ಗಾಯವನ್ನು ಗಟ್ಟಿಯಾಗಿ ಕಟ್ಟುವೆನು. ಸತ್ತ ಮನುಷ್ಯನ ಶರೀರದಿಂದ ಎಂದೂ ರಕ್ತವು ಹೊರಡುವದಿಲ್ಲ." ಹೀಗೆನ್ನುತ್ತ ಸಚ್ಚಿದಾನಂದನು ಗಾಯಕ್ಕೆ ವಸ್ತ್ರವನ್ನು ಕಟ್ಟಿ, ರಕ್ತದಿಂದ ಮುಳುಗಿದ ಮುಖವನ್ನು ಚನ್ನಾಗಿ ವಸ್ತ್ರದಿಂದ ಒರೆಸಿ, ಅವನ ತೊಯ್ದ ಎಲ್ಲ ವಸ್ತ್ರಗಳನ್ನು ತೆಗೆದು, ಮೆತ್ತನ್ನ ಕಂಬಳಿಯ ಮೇಲೆ ಮಲಗಿಸಿದನು. ಮತ್ತು ತಮ್ಮಲ್ಲಿದ್ದ ಅಲ್ಪಸ್ವಲ್ಪ ವಸ್ತ್ರಗಳನ್ನು ಅವನಿಗೆ ಹೊಚ್ಚಿದರು. ಸಚ್ಚಿದಾನಂದನು ಅವನ ಎದೆಯನ್ನು ತಿಕ್ಕಹತ್ತಿದನು. ಮನೋರಮೆಯು ಅವನ ಅಂಗಾಲನ್ನು ತಿಕ್ಕಹತ್ತಿದಳು. ಈ ಪ್ರಕಾರ ಉಪಚಾರವು ಪ್ರಾರಂಭವಾದ ಮೇಲೆ ಆ ಮನುಷ್ಯನ ಶ್ವಾಸೋಚ್ಛ್ವಾಸವು ಸ್ವಲ್ಪಸ್ವಲ್ಪ ಪ್ರಾರಂಭವಾಯಿತು. ಇಷ್ಟರಲ್ಲಿ ದೋಣಿಯೂ ದಂಡೆಗೆ ಹತ್ತಿತು.

## ೪ನೆಯ ಪ್ರಕರಣ—ಸೇಡು.

ಮನುಷ್ಯನ ಸ್ವಭಾವ-ವೈಚಿತ್ರ್ಯದ ಯಥಾರ್ಥ ವರ್ಣನ ಮಾಡುವದು, ಕುಶಲ ಲೇಖಕರ ಹೊರತು ಇತರರಿಗೆ ಕಠಿಣವೇ ಸರಿ. ಈ ಕಾದಂಬರಿಯೊಳಗಿನ ಉಪನಾಯಕ ವಿಶ್ವನಾಥರಾಯನ ವಿಷಯವಾಗಿ ನಾವು ಎಷ್ಟೆ ಬರೆದರೂ, ಆ ಪುರುಷಾಲ್ಪನ ಸ್ವಭಾವ-ಚಿತ್ರವು ಸ್ವಲ್ಪವೇ ಇರುವದು. ಪ್ರಭುತ್ವೈಶ್ವರ್ಯ-ವಿದ್ಯೆಗಳಿಂದ ಗರ್ವಿತರಾಗಿ, ಎಷ್ಟೋ ಜನರು ಈ ಜಗತ್ತನ್ನು ತೃಣೀಕರಿಸುತ್ತಾರೆ. ತಮ್ಮಿಂದ ಜಗತ್ತಿಗೆ ಯಾವ ಹಿತವಾಗುತ್ತದೆಂಬುದು ಅವರಿಗೆ ತಿಳಿಯುವದಿಲ್ಲ. ಸಣ್ಣ ಹುಡುಗರು ಕೂಡ ನಗುವಷ್ಟು ಯಾರ ದುರಭಿಮಾನವಿರುತ್ತದೆಯೋ ಅವರಿಗೆ ಜಗತ್ತಿನ ಶ್ರೇಷ್ಠತೆಯ ತಿಳುವಳಿಕೆಯು ಇಲ್ಲದಿರುವದು ಸಹಜವಾಗಿದೆ. ಮತ್ತು ಯಾವ ಈಶ್ವರನ ಸತ್ತೆಯಿಂದ ಜಗತ್ತಿನ ಕಾರ್ಯವು ಸುಯಂತ್ರವಾಗಿ ನಡೆಯುತ್ತದೆಯೋ, ಆ ಈಶ್ವರನ ಮನೆಯಲ್ಲಿ ತಮ್ಮ ಗರ್ವವನ್ನು ಯಾವ ಮಾಪಿನಿಂದ ಅಳೆದಿಡು

ತ್ತಾರೆಂಬುವದನ್ನೂ, ಅಲ್ಲಿ ತಮ್ಮ ಅಭಿಮಾನದ ಬೆಲೆಯಾದರೂ ಎಷ್ಟಿರುತ್ತದೆಂಬುವದನ್ನೂ, ಅಲ್ಲಿ ತಮ್ಮ ಕೃತಿಯ ಸಂಬಂಧವಾಗಿ ಪಾರಿತೋಷಕವಾವರೂ ಯಾವದು ಸಿಗುತ್ತದೆಂಬುವದನ್ನೂ ಈ ಮದಾಂಧರು ಎಂದೂ ವಿಚಾರ ಮಾಡುವದಿಲ್ಲ. ವಾಸ್ತವಿಕ ಈಶ್ವರೀ ಸೂತ್ರದಲ್ಲಿ ಹೆಚ್ಚು ಕಡಿಮೆ ಮಾಡುವದು ನಮ್ಮಂಥ ಕ್ಷುದ್ರ ಮಾನವರ ಶಕ್ತಿಯು ಹೊರಗಿನದೇ ಸರಿ. ಆದರೂ ಎಷ್ಟೋ ಮದಾನ್ವಿತ ನೀಚರು ಈಶ್ವರೀಸೂತ್ರವು ತಮ್ಮ ಕರದಲ್ಲಿಯೇ ಇರುತ್ತದೆಂದು ಅಭಿಮಾನವನ್ನು ತಾಳುತ್ತಾರೆ.

ಅವಂತೀಪುರದ ವಿಶ್ವನಾಥರಾಯನಿಗೆ ತಾನು ಒಳ್ಳೇ ಕರ್ತೃತ್ವವುಳ್ಳವನಿದ್ದೇನೆಂದು ದುರಭಿಮಾನವಿತ್ತು. ಮತ್ತು ತನ್ನ ಮನಸ್ಸಿಗೆ ತಿಳಿದದ್ದನ್ನ ಮಾಡಲಿಕ್ಕೆ ತನಗೆ ಒಳ್ಳೇ ಸಾಮರ್ಥ್ಯವುಂಟೆಂದು ಅವನು ಭಾವಿಸುತ್ತಿದ್ದನು. ವೇಣುವನ್ನು ಮಾಧವರಾಯನೊಡನೆ ಲಗ್ನ ಮಾಡಬೇಕೆಂದು ಮನಸ್ಸಿನಲ್ಲಿ ಹುಟ್ಟುತ್ತಲೇ ಅವನು ಅಷ್ಟರ ಸಲುವಾಗಿ ಘೋರ ಪ್ರಯತ್ನವನ್ನು ನಡೆಸಿದ್ದನು. ಮೊದಲು ವೇಣುವನ್ನು ವಂಚಿಸಿ, ಅವಳನ್ನು ತನ್ನ ಸ್ವಾಧೀನದಲ್ಲಿ ಇಟ್ಟುಕೊಂಡನು. ಕೃಷ್ಣರಾಯನು ತನ್ನ ಕಾರ್ಯಕ್ಕೆ ಪ್ರತಿಬಂಧ ಮಾಡಬಹುದೆಂದು ಅವನನ್ನು ಸಮುದ್ರದಲ್ಲಿ ಚಲ್ಲಿಸಿ ತನ್ನ ತಿಳುವಳಿಕೆಯ ಪ್ರಕಾರ ಅವನ ಜಲಸಮಾಧಿಯನ್ನು ಮಾಡಿಸಿದ್ದನು. ಗೋವಿಂದರಾಯನ ಮನೆಗೆ ಬೆಂಕಿಯನ್ನು ಹಚ್ಚಿ ಅವನನ್ನು ಮೂಲೆಗುಂಪಾಗಿ ಮಾಡಿ ಪರಗೃಹದಲ್ಲಿ ಕೂಡ್ರಿಸಿದ್ದನು. ವೇಣುವಿನ ಮಾತೆಯು ಮೊದಲೆ ಅಬಲೆಯು, ಆದರಲ್ಲಿ ಅನಾಥೆಯು. ಅವಳ ಸಂಬಂಧವಾಗಿಯಂತೂ ತಿಲಾಂಶವಾದರೂ ಜಹಾಗೀರದಾರನಿಗೆ ಭೀತಿಯಿದ್ದಿಲ್ಲ. ಈ ಪ್ರಕಾರ ವಿಶ್ವನಾಥರಾಯನು ತನ್ನ ಕಾರ್ಯಸಿದ್ಧಿಗೆ ಅಡ್ಡವಾಗುತ್ತಿದ್ದ ಎಲ್ಲ ಕಂಟಕಗಳನ್ನು ದೂರ ಮಾಡಿಕೊಂಡಿದ್ದರೂ ಸರ್ವಸಾಕ್ಷಿಯಾದ ಪರಮೇಶ್ವರನು ವಿಶ್ವನಾಥರಾಯನ ವ್ಯೂಹವನ್ನು ನಾಶ ಮಾಡುವದಕ್ಕಾಗಿ ತರತರದ ಯುಕ್ತಿ-ಪ್ರಯುಕ್ತಿಗಳನ್ನು ಮಾಡಲಾರಂಭಿಸಿದ್ದನು. ಅದರೂ ಆ ಈಶ್ವರೀ ಯೋಜನೆಯ ಸಂಬಂಧವಾಗಿ ಜಹಾಗೀರದಾರಸಾಹೇಬರು ಸ್ವಲ್ಪವಾದರೂ ವಿಚಾರ ಮಾಡುತ್ತಿದ್ದಿಲ್ಲ. ಅವನು ಹಿತಾಹಿತ-ಪಾಪಪುಣ್ಯ-ಧರ್ಮಾಧರ್ಮಗಳ ಸಲುವಾಗಿ ಎಂದೂ ಆಲೋಚಿಸುತ್ತಿದ್ದಿಲ್ಲ. ಅವನು ವಿವಾಹ-ತಂತುವನ್ನು ಹೊಸೆಹೊಸೆದು ಹಗ್ಗವನ್ನು ಮಾಡಿ

ಎರಡನೆಯವರ ಟೊಂಕಕ್ಕೆ ಕಟ್ಟುವ ಪ್ರಯತ್ನ ಮಾಡುತ್ತಿದ್ದನು. ತನ್ನ ಕೆಲಸಕ್ಕೆ ಮಧ್ಯದಲ್ಲಿ ಯಾವ ಯಾವ ತೊಂದರೆಗಳು ಬಂದಾವೆಂಬ ಬಗ್ಗೆ ಅವನು ಎಂದೂ ವಿಚಾರ ಮಾಡುತ್ತಿದ್ದಿಲ್ಲ. ಬಹಳ ಹೇಳುವದೇನು! ತಾನು ನಡೆಸಿದ ಪ್ರಯತ್ನದಲ್ಲಿ ಈಶ್ವರನು ಕೈ ಹಾಕುವ ಅಧಿಕಾರವಿಲ್ಲೆಂದು ದರ್ಶಿಸುತ್ತಿದ್ದನು. ಇರಲಿ, ಈಗ ನಾವು ಮದಾಂಧ ವಿಶ್ವನಾಥರಾಯನನ್ನು ಬಿಟ್ಟುಕೊಟ್ಟು ಮುಂಬಯಿಯ ಚೌಪಾಟಿಯ ಮೇಲಿದ್ದ ರಮಾಬಾಯಿಯ ಬಂಗಲೆಯ ಕಡೆಗೆ ದೃಷ್ಟಿಯನ್ನು ಹೊರಳಿಸೋಣ.

ಕೇಶವರಾಯನು ಅವಂತೀಪುರಕ್ಕೆ ಹೊರಟು ಹೋದ ಸಂಗತಿಯು ನಮ್ಮ ವಾಚಕರ ಸ್ಮರಣೆಯಲ್ಲಿರಬಹುದು. ಅವನು ಹೋಗಿ ೫-೬ ದಿವಸವಾದರೂ ಅವನ ಕಡೆಯಿಂದ ಪತ್ರ ಮೊದಲಾದವುಗಳು ಬಾರದ್ದರಿಂದ ರಮಾಬಾಯಿಗೆ ಬಳ್ಳೇ ಚಿಂತೆಯು ಉತ್ಪನ್ನವಾಯಿತು. ಇಂದಂತೂ ಅವಳ ಮನಸ್ಸಿನಲ್ಲಿ ಸ್ಥಿರತ್ವವೇ ಇದ್ದಿಲ್ಲ. ಹೇಗಾದರೂ ಮಾಡಿ ಕಾಲಹರಣ ಮಾಡಬೇಕೆಂದು ಅವಳು ತನ್ನ ಹಿಮುವಿನೊಡನೆ ಮಾತಾಡುತ್ತ ಕುಳಿತಿದ್ದಳು. ಹಿಮುವು ತನ್ನ ಅವ್ವನಿಗೆ “ಅಪ್ಪನು ಯಾವಾಗ್ಗ ಬರುತ್ತಾನೆ” ಎಂಬೀ ಒಂದೇ ಪ್ರಶ್ನೆಯನ್ನು ಮೇಲಿಂದ ಮೇಲೆ ಕೇಳುತ್ತಿದ್ದಳು. ಒಮ್ಮೆ ರಮಾಬಾಯಿಯು ಹಿಮುವನ್ನು ಅಪ್ಪಿಕೊಳ್ಳುತ್ತ, ಒಮ್ಮೆ ಅವಳ ಗುಲಾಬೀ ವರ್ಣದ ಗಲ್ಲಕ್ಕೆ ಮುದ್ದುಗೊಡುತ್ತ ‘ಈಗ ಬಂದಾನು’ ಎಂದು ಉತ್ತರವನ್ನು ಕೊಡುತ್ತಿದ್ದಳು. ಕೇಶವರಾಯನು ಇವತ್ತಿನವರೆಗೂ ಬಾರದ್ದರಿಂದ ರಮಾಬಾಯಿಗೆ ಬಳ್ಳೇ ದುಃಖವಾಗಿತ್ತು. ರಮಾಬಾಯಿಯ ಮನಸ್ಸಿನಲ್ಲಿ ತಂದೆ, ತಾಯಿ, ಗಂಡ ಮೊದಲಾದವರ ವಿಷಯವಾಗಿ ತರತರದ ಕಲ್ಪನೆಗಳು ಹುಟ್ಟುತ್ತಿದ್ದವು. ಎರಡನೆಯವರ ಅನಿಷ್ಟವನ್ನು ಚಿಂತಿಸತಕ್ಕ ವೈರಿಯ ಮನಸ್ಸಿನಲ್ಲಿ ಹೆಚ್ಚು ಕಲ್ಪನೆಗಳು ಉತ್ಪನ್ನವಾಗುವದಿಲ್ಲ. ಆದರೆ ತನ್ನವರ ಸಂಬಂಧವಾಗಿ ಸುಖ-ದುಃಖಗಳ ವಿಚಾರದ ಕಲ್ಪನೆಯು ವಿಶೇಷವಾಗಿ ಉಗಮಿಸುವದು ಯಥಾ ಸ್ವಭಾವವಾಗಿದೆ.

ರಮಾಬಾಯಿಯು ತಿರುತಿರುಗಿ ಬೀದಿಯ ಕಡೆಗೆ ನೋಡುತ್ತ ತನ್ನ ಮನೆಯ ಕಡೆಗೆ ಗಾಡಿಯು ಬರುತ್ತದೆಯೋ ಇಲ್ಲವೋ ಎಂದು ಹಣಿಕಿ ಹಾಕಿ ನೋಡುತ್ತಿದ್ದಳು. ಯಾವದೊಂದು ಗಾಡಿಯು ದೃಷ್ಟಿಗೆ ಬೀಳುವದೊಂದೇ

ತಪ; ಆ ಗಾಡಿಯ ಕಡೆಗೆ ಬಹಳೇ ಉತ್ಸುಕತೆಯಿಂದ ನೋಡುತ್ತಿದ್ದಳು
ಆ ಗಾಡಿಯು ತನ್ನ ಮನೆಯ ಮುಂದೆ ನಿಲ್ಲದೆ ಹಾಗೆಯೇ ಮುಂದೆ ಹೋಯಿ
ತೆಂದರೆ ನಿರಾಶಳಾಗಿ ತಿರುಗಿ ದುಃಖಾಕ್ರಾಂತಳಾಗುತ್ತಿದ್ದಳು. ಈ ಪ್ರಕಾರ
ರಮಾಬಾಯಿಯ ಕ್ರಮವು ನಡೆದಿತ್ತು. ಈ ವೇಳೆಯಲ್ಲಿ ರಮಾಬಾಯಿಯು
ಚಿಂತಾವಸ್ಥೆಯನ್ನು ಅಲ್ಪಸ್ವಲ್ಪ ಕಡಿಮೆ ಮಾಡುವವಳೆಂದರೆ, ಹಿಮುವೇ
ಆಗಿದ್ದಳು. ಹಿಮುವಾದರೂ ಪುನಃ ಪುನಃ ತನ್ನ ತಂದೆಯ ಸಲುವಾಗಿ
ವಿಚಾರಿಸುತ್ತಿದ್ದಳು. ಇದರಿಂದ ಅವಳಿಗೆ ಸಮಾಧಾನಬಡಿಸಿ, ತನ್ನ ಮನ
ಸ್ಸನ್ನು ಸಮಾಧಾನ ಮಾಡಿಕೊಳ್ಳುವ ಪ್ರಸಂಗವು ರಮಾಬಾಯಿಗೆ ಪ್ರಾಪ್ತ
ವಾಗಿತ್ತು. ಸಣ್ಣ ಹುಡುಗರ ಬಾಯಿಯಿಂದ ಹೊರಟ ಶಬ್ದಗಳು ತೀವ್ರ
ಸಿಜತ್ವಕ್ಕೆ ಬರುತ್ತವೆಂದು ಹೆಂಗಸರ ತಿಳುವಳಿಕೆಯಿರುವ ಮೂಲಕ ರಮಾ
ಬಾಯಿಯು ಹಿಮುವನ್ನು ಆಲಿಂಗಿಸಿ ಮಾತನಾಡಲಾರಂಭಿಸಿದಳು.

ರಮಾ:—"ಹಿಮು, ನೀನು ಹೇಳು, ಅವರು ಯಾವಾಗ್ಗೆ ಬರುತ್ತಾರೆ."

ಹಿಮು:—(ಒಂದು ಗಾಡಿಯ ಕಡೆಗೆ ಬೊಟ್ಟು ತೋರಿಸಿ) "ಅವ್ವಾ,
ಈಗ ಬರುತ್ತಾನೆ; ಅಕೋ ನೋಡು; ಗಾಡಿಯು ಬಂದಿತು."

ಹಿಮುವು ಬೊಟ್ಟು ತೋರಿಸಿದ ದಿಕ್ಕಿನ ಕಡೆಗೆ ರಮಾಬಾಯಿಯು
ನೋಡಿದಳು. ಅವಳು ನಿಜವಾಗಿ ಓಡಿ ಬರುತ್ತಿರುವ ಒಂದು ಗಾಡಿಯನ್ನು
ಕಂಡಳು. ರಮಾಬಾಯಿಯ ದೃಷ್ಟಿಯು "ಗಾಡಿಯು ತನ್ನ ಮನೆಯ ಮುಂದೆ
ನಿಲ್ಲುತ್ತದೆಯೋ ಇಲ್ಲವೋ ಎಂಬೀ ಕಡೆಗಿತ್ತು. ಇಷ್ಟರಲ್ಲಿ ಆ ಗಾಡಿಯು
ನಿಲ್ಲುತ್ತದೆಯೋ ಬಂಗಲೆಯ ಮುಂದೆಯೇ ನಿಂತಿತು. ಮತ್ತು ಆ
ಒಂದು ರಮಾಬಾಯಿಯ ಬಂಗಲೆಯ ಮುಂದೆಯೇ ನಿಂತಿತು. ಕೇಶವರಾಯನನ್ನು
ಗಾಡಿಯಿಂದ ಕೇಶವರಾಯನೇ ಇಳಿದು ಬಂದನು. ಕೇಶವರಾಯನನ್ನು
ನೋಡುತ್ತಲೇ ಹಿಮೂ-ರಮಾಬಾಯಿಯರ ಆನಂದಕ್ಕೆ ಸೀಮೆಯಿಲ್ಲವಾಯಿ
ತು. ಹಿಮುವಿಗಾದ ಆನಂದವನ್ನಂತೂ ವರ್ಣಿಸಲಿಕ್ಕೆ ಅಸಾಧ್ಯವಾಗಿದೆ!
ಆದರೆ ರಮಾಬಾಯಿಗೆ ಆದ ಆನಂದವು ಕೂಡಲೇ ಇಲ್ಲವಾಯಿತು. ಯಾಕಂ
ದರೆ ಕೇಶವರಾಯನ ಮುಖಮುದ್ರೆಯು ಬಾಡಿಗಿದ ಹೂವಿನಂತೆ ಜೋಲು
ಬಿದ್ದಿತ್ತು. ಕೇಶವರಾಯನು ಮಾಡಿಯ ಮೇಲೆ ಬಂದ ಕೂಡಲೆ ರಮಾಬಾ
ಯಿಯು:—

ರಮಾ:—"ಬೀದಿಯಲ್ಲಿ ಬರುವಾಗ್ಗ ಬಿಸಿಲು ತಾಕಿದಂತೆ ಕಾಣು ತ್ತದೆ. ಮುಖ-ಕಮಲವು ತೀರ ಬತ್ತಿ ಹೋಗಿದೆ. ಮನೆಯಲ್ಲಿ ಎಲ್ಲ ಜನರು ಕುಶಲದಿಂದಿರುವರೇ?"

ಕೇಶವರಾಯನು ಈ ಪ್ರಶ್ನೆಗೆ ಏನೂ ಉತ್ತರ ಕೊಡಲಿಲ್ಲ. ಅವನು ಮೈಮೇಲಿನ ಪ್ರವಾಸದ ಪೋಷಾಕನ್ನು ತೆಗೆದಿಟ್ಟು, ಒಂದು ದೀರ್ಘ ನಿಶ್ವಾಸ ವನ್ನು ಬಿಟ್ಟು, ಹತಾಶನಾಗಿ ಒಂದು ಆರಾಮ ಖುರ್ಚಿಯ ಮೇಲೆ ಕುಳಿತನು. ಕೇಶವರಾಯನ ದೀರ್ಘ ನಿಶ್ವಾಸವನ್ನು ಕೇಳಿಯೂ, ಅವನ ಹತಾಶ ಮುದ್ರೆ ಯನ್ನು ನೋಡಿಯೂ ರಮಾಬಾಯಿಯ ಎದೆಯೊಡೆದು ನೀರಾಯಿತು. ಅವ ಳು ತಿರುಗಿ ಮೃದು ಸ್ವರದಿಂದ:—

ರಮಾ:—"ತಂದೆ, ತಾಯಿ ಮೊದಲಾದವರು ಕುಶಲದಿಂದ ಇರು ತ್ತಾರಷ್ಟೇ?"

ಕೇಶವ:—"(ಕಣ್ತುಂಬ ನೀರು ತಂದು) ನಿನ್ನ ತಂದೆ ತಾಯಿಗಳಿ ಬ್ಬರು ಕುಶಲದಿಂದಿರುತ್ತಾರೆ."

ರಮಾ:—"(ಬಹಳ ಗಾಬರಿಯಾಗಿ) ಮತ್ತು ಕೃಷ್ಣರಾಯನು!

ಕೇಶವರಾಯನ ಸ್ಥಿತಿಯು ಬಹಳ ವಿಲಕ್ಷಣವಾಗಿತ್ತು. ಅವನ ಎದೆ ಯು ದುಃಖದಿಂದ ಜರ್ಝರವಾಗಿತ್ತು. ಇದರಿಂದ ಅವನ ಬಾಯಿಯಿಂದ ಒಂದು ಶಬ್ದವೂ ಹೊರಡಲಿಲ್ಲ. ರಮಾಬಾಯಿಯು ಪುನಃ ಮೃದುಸ್ವರ ದಿಂದ:—

ರಮಾ:—"ಹೇಳಿರಿ. ನನ್ನ ಕೃಷ್ಣರಾಯನು ಸುಖದಿಂದ ಇದ್ದಾ ನೋ ಇಲ್ಲೋ? ಅವನು ಅನಂತಪುರದಲ್ಲಿಯೇ ಇರುತ್ತಾನೋ?"

ಕೇಶವ:—"ಇಲ್ಲ."

ರಮಾಬಾಯಿಗೆ "ಇಲ್ಲ" ಎಂಬ ಶಬ್ದದ ಅರ್ಥವೇ ತಿಳಿಯಲಿಲ್ಲ. ಕೇಶವರಾಯನ ಎಲ್ಲ ಸ್ಥಿತಿಯು ಮೇಲಿಂದ ಏನಾದರೂ ಅಮಂಗಲ ವಾರ್ತೆ ಯನ್ನು ಕೇಳುತ್ತೇನೆಂಬು ಅವಳಿಗೆ ತಿಳಿಯಹತ್ತಿತು.

ರಮಾ:—"(ದೀನಸ್ವರದಿಂದ) ಇಲ್ಲ! ಇಲ್ಲ ಇದರ ಅರ್ಥವೇನು? ಅವನು ಕುಶಲದಿಂದ ಇಲ್ಲೋ, ಅನಂತಪುರದಲ್ಲಿ ಇಲ್ಲೋ?

ಕೇಶವ:—“ಅವನು ಕುಶಲದಿಂದ ಇದ್ದಾನೋ ಇಲ್ಲೋ ಎಂಬುವ ದು ಇನ್ನೂ ಶೋಧವಾಗಿಲ್ಲ. ಆದರೆ ಅವನು ಅವಂತೀಪುರದಲ್ಲಿ ಮಾತ್ರ ಇಲ್ಲ.”

ಕೇಶವರಾಯನ ಸಂದಿಗ್ಧ ಭಾಷಣವನ್ನು ಕೇಳಿ ರಮಾಬಾಯಿಯ ತಲೆಯಲ್ಲಿ ಬೇರೊಂದು ಕಲ್ಪನೆಯು ಉತ್ಪನ್ನವಾಯಿತು. ಕೃಷ್ಣರಾಯನು ವೇಣುವಿನೊಂದಿಗೆ ಎಲ್ಲಿಯಾದರೂ ಹೋಗಿರಬಹುದೆಂದು ನೆನಿಸಿ ಆ ಕಲ್ಪನೆಯನ್ನು ಮನಸ್ಸಿನಲ್ಲಿ ಸ್ಥಿರವಾಗಿ ಇಟ್ಟುಕೊಂಡು ರಮಾಬಾಯಿಯು:—

ರಮಾ:—“ವೇಣುವು ಅವರ ಮನೆಯಲ್ಲಿ ಇದ್ದಾಳೋ?”

ಕೇಶವ:—ಛೇ! ಅವಳೂ ಮನೆಯಲ್ಲಿ ಇಲ್ಲ!!

ರಮಾ:—“ಕೃಷ್ಣರಾಯನು ಎಲ್ಲಿ ಹೋದನೆಂಬದರ ಶೋಧವಾಗಿರುವದೇ?”

ಕೇಶವ:—“(ಶೋಕದಿಂದ ವಿಹ್ವಲನಾಗಿ) ನಿನಗೆ ಈಗ ಹೇಳಿಯಾದರೂ ಏನು ಫಲ? ಕೃಷ್ಣರಾಯನು ಹೋದನು! ಅವನು ಸರ್ವರನ್ನು ಬಿಟ್ಟು ಸ್ವರ್ಗಲೋಕಕ್ಕೆ ತೆರಳಿದನು!!”

ಈ ಹೃದಯವಿದಾರಕವಾದ ವಾರ್ತೆಯನ್ನು ಕೇಳುತ್ತಲೇ ರಮಾಬಾಯಿಯ ಹೃದಯವು ವಿದೀರ್ಣವಾಯಿತು. ಅವಳು ದುಃಖಾತಿರೇಕದಿಂದ ಒಮ್ಮೆಲೆ ನೆಲಕ್ಕೆ ಕುಳಿತಳು. ಮತ್ತು ದುಃಖದ ಭರದಲ್ಲಿ ಗಂಡನ ಮೈಮೇಲೆ ಬಿದ್ದು:—

ರಮಾ:—“ನೀವು ಕೃಷ್ಣರಾಯನು ಪರಲೋಕಕ್ಕೆ ತೆರಳಿದ್ದನ್ನು ನೋಡಿದಿರೋ? ಅವನು ಹೋಗುವಾಗ್ಗೆ ನನ್ನ ವಿಷಯವಾಗಿ ಏನು ಹೇಳಿದನು? ಅಯ್ಯೋ! ಅಂಥ ರೋಗವಾದರೂ ಯಾವದು ಆಗಿತ್ತು! ಆ ಹಳ್ಳಿಯಲ್ಲಿ ಯೋಗ್ಯ ವೈದ್ಯರು ಸಿಗಲಿಲ್ಲೇ? ಕೃಷ್ಣರಾವ, ಏನು ಮಾಡಿದಿ? ಮುಪ್ಪಿನ ಕಾಲದಲ್ಲಿ ತಂದೆ ತಾಯಿಗಳನ್ನು ಸಂರಕ್ಷಿಸುವವರು ಯಾರು? ಅಕಟಕಟಾ! ತಂದೆ-ತಾಯಿಗಳು ಕೃಷ್ಣರಾವ, ಕೃಷ್ಣರಾವ ಎಂದು ಅಳುತ್ತಿದ್ದಾರು!! ಕೃಷ್ಣರಾವ, ನಿನ್ನನ್ನು ನೋಡಿ ಕರೇ ಶಿಲೆಗೂ ಕೂಡ ದಯೆಯು ಬರುತ್ತಿತ್ತು; ಆದರೆ ನಿಷ್ಕರುಣಿಯಾದ ಅಂತಕನಿಗೆ ದಯೆಯು ಬರಲಿಲ್ಲೇ! ದೇವಾ ಎಂಥ ದುರ್ಧರ ಪ್ರಸಂಗ!! ಅಯ್ಯೋ, ನನ್ನ ಹಿಮುವಿನ ಮೇಲೆ

ಕೃಷ್ಣರಾಯನು ಎಷ್ಟು ಪ್ರೇಮಿ!! ಅವ್ವಾ, ಹಿಮೂ, ಬಾ, ಇಲ್ಲಿ ಬಾ. ನಿನ್ನ ಮಾವನು ನಿನ್ನನ್ನು ಬಿಟ್ಟುಕೊಟ್ಟು ಹೋದನು ಬಾ. ಅವನಿಗೆ ನಿನ್ನನ್ನು ಬಿಟ್ಟು ಹೋಗಲಿಕ್ಕೆ ಹೇಗೆ ಮನಸ್ಸಾಯಿತು. ನನ್ನ ಹಿಮುವಿನ ಬಗ್ಗೆ ಕೃಷ್ಣ ರಾಯನು ಏನಾದರೂ ಹೇಳಿದನೇನು?"

ಕೇಶವ:—(ಹತಾಶನಾಗಿ) ಇಲ್ಲ. ಅವನು ಯಾರ ಸಲುವಾಗಿಯೂ "ಬ್ರ" ಎಂಬ ಒಂದು ಅಕ್ಷರವನ್ನಾದರೂ ಉಚ್ಚರಿಸಿಲ್ಲ. ಒಂದು ವೇಳೆ ಅವನು ಉಚ್ಚರಿಸಿದ್ದರೂ ಆ ಭಯಂಕರ ಸಮುದ್ರದಲ್ಲಿ ಯಾರಿಗಾದರೂ ಕೇಳುವ ಬಗ ಹೇಗೆ?

ರಮಾ:—"(ಕಣ್ಣೀರು ಸ್ರವಿಸುತ್ತ) ಭಯಂಕರ ಸಮುದ್ರ! ಅಲ್ಲಿ ಅವನು ಏನು ಮಾತಾಡಿದನು? ನೀವು ಅನ್ನುವದೇ ನನಗೆ ತಿಳಿಯಲೊಲ್ಲದು."

ಕೇಶವ:—ಅವನು ಸಮುದ್ರದಲ್ಲಿ ಮುಳುಗಿ ಹೋದನು. ಅವನ ಶವವಾದರೂ ಕೂಡ ಸಿಕ್ಕಿಲ್ಲ. ಕೃಷ್ಣರಾಯನು ಮುಂಬಯಿಗೆ ಬರುವಾಗ್ಗೆ ಹಾದಿಯಲ್ಲಿ ವಿಶ್ವನಾಥರಾಯನ ಹೇಳಿಕೆಯಂತೆ ನಾವಿಕರು ಅವನನ್ನು ಸಮುದ್ರದಲ್ಲಿ ದೂಡಿದರು. ಅನಾಥನ ಅಸ್ಥಿಯು ಕೂಡ ಕ್ರಿಯಾಕರ್ಮದ ಸಲುವಾಗಿ ಲಭಿಸಲಿಲ್ಲ."

ರಮಾ:—"(ದುಃಖಾತಿಶಯದಿಂದ ಹಣೆಯನ್ನು ಹೊಡೆದುಕೊಂಡು) ವಿಶ್ವನಾಥರಾಯನಿಗೆ ಕೃಷ್ಣರಾಯನಾದರೂ ಅಂಥ ಅಪರಾಧವನ್ನೇನು ಮಾಡಿದ್ದನು? ದೇವಾ, ನಿನ್ನ ಮನೆಯಲ್ಲಿ ಕೂಡ ನ್ಯಾಯವಿಲ್ಲವಲ್ಲ! ನನ್ನ ಕೃಷ್ಣರಾಯನು ತಪ್ಪಿಯಾದರೂ ಎಂದೂ ಯಾರಿಗೂ ಒಂದು ಕೆಟ್ಟ ಶಬ್ದವನ್ನು ಆಡುತ್ತಿದ್ದಿಲ್ಲ; ಇಂಥ ನನ್ನ ಬಂಧುವನ್ನು ಸಮುದ್ರದಲ್ಲಿ ದೂಡಿಸಿದ್ದರಿಂದ ವಿಶ್ವನಾಥರಾಯನಿಗಾದರೂ ಯಾವ ಇನಾಮು ಸಿಕ್ಕಿತು? ಕೃಷ್ಣರಾವ, ಆ ಘೋರ ಸಮುದ್ರದಲ್ಲಿ ನಿನ್ನ ಸ್ಥಿತಿಯು ಎಂಥ ಭಯಂಕರವಾಗಿದ್ದೀತು! ಅವ್ವಾ-ಅವ್ವಾ, ಅಪ್ಪಾ-ಅಪ್ಪಾ, ಎಂದು ನೀನು ಎಷ್ಟೋ ಸಾರೆ ಒದರಿದ್ದೀ; ಆದರೂ ನಿನಗೆ ಆ ವೇಳೆಯಲ್ಲಿ ಯಾರು ಬಂದು ಬಿಡಿಸಬೇಕು! ನನ್ನ ಮತ್ತು ನನ್ನ ಕೂಸಿನ ಸಲುವಾಗಿ ನಿನ್ನ ಅಂತರಾತ್ಮವು ಕಳವಳಿಗೊಂಡಿದ್ದೀತಷ್ಟೆ. ಏನು ಉಪಯೋಗ? ಹೇಳಿ ಕಳಿಸಲಿಕ್ಕಾದರೂ ನಿನಗೆ ಅಲ್ಲಿ ಯಾರು

ಸಿಗಬೇಕು. ದೇವಾ, ನಾವು ನಿನಗಾದರೂ ಏನು ಅಪರಾಧ ಮಾಡಿದ್ದೆವು.
ಅವ್ವನಿಗೂ, ಅಪ್ಪನಿಗೂ ಆ ಸುಂದರ ಭವನವು ಶೂನ್ಯವಾಗಿ ಕಾಣಿಸುತ್ತಿ
ದ್ದೀತು. ಅವರಿಬ್ಬರೂ ದುಃಖದಿಂದ ಹುಚ್ಚರಂತಾಗಿದ್ದಾರು. ಅವರು ಹಗ
ಲಿರುಳು ಕೃಷ್ಣರಾವ, ಕೃಷ್ಣರಾವ ಎಂದು ಹೊರಳಾಡುತ್ತಿದ್ದಾರು. ಆದರೂ
ಉಪಯೋಗವೇನು? ತಂದೆ-ತಾಯಿಗಳನ್ನಾದರೂ ಇತ್ತ ಕರಕೊಂಡು
ಬರಬೇಕಾಗಿತ್ತು. ಅವರಿಗೆ ಆ ಮನೆಯಲ್ಲಿ ಎಂದೂ ದುಃಖವು ಕಡಿಮೆಯಾ
ಗಲಿಕ್ಕಿಲ್ಲ."

ಕೇಶವ:—"(ನಿರಾಶಾ ಸ್ವರದಿಂದ) ನಿಮ್ಮ ಮನೆಯಾದರೂ ಎಲ್ಲಿ
ಯಿದೆ. ಅದೂ ಭಸ್ಮೀಭೂತವಾಗಿ ಮೃತ್ತಿಕೆಯೊಡನೆ ಬೆರತು ಹೋಯಿತು.
ಕೃಷ್ಣರಾಯನು ಮುಂಬಯಿಗೆ ಹೊರಟ ದಿವಸವೇ ಆ ನರಪಶುವಾದ ಜಹಾ
ಗೀರದಾರನು ನಿಮ್ಮ ಮನೆಗೆ ಬೆಂಕಿಯನ್ನು ಹಚ್ಚಿಸಿದನು. ಸರ್ವ ಸದನವು
ಸುಟ್ಟು ಬೂದಿಯಾಯಿತು. ನಿನ್ನ ತಂದೆ-ತಾಯಿಗಳು ಕಷ್ಟದಿಂದ ಸುಖರೂ
ಪವಾಗಿ ಹೊರಬಿದ್ದರು. ಸರ್ವ ಸಾಮಾನುಗಳು ಸುಟ್ಟು ಹೋದವು. ಹಕ್ಕೆ
ಯಲ್ಲಿದ್ದ ದನಕರಗಳು ಒದರೊದರಿ ಸುಟ್ಟು ಸೂರೆಯಾದವು!! ನಿನ್ನ ಜನನೀ
ಜನಕರು ವೇಣುವಿನ ಮಾತಾಗ್ರಹದಲ್ಲಿದ್ದಾರೆ. ಆದರೆ ಅಲ್ಲಿಯೂ ಕೂಡ
ದುಃಖದ ರಾಶಿಯೇ ಅದೆ. ವಿಶ್ವನಾಥರಾಯನು ವೇಣುವನ್ನು ವಂಚಿಸಿ, ಅವ
ಳನ್ನು ತನ್ನ ಮನೆಯಲ್ಲಿ ಗುಪ್ತವಾಗಿ ಇಟ್ಟುಕೊಂಡಿದ್ದಾನೆ. ಮತ್ತು ನಾಡದು
ಕರೇ ಮಾಧವರಾಯನ ಸಂಗಡ ಅವಳ ಲಗ್ನವನ್ನು ಮಾಡುತ್ತಾನೆ. ಏನು
ಮಾಡಬೇಕು? ನನಗಂತೂ ಸಂತಾಪವು ಮಿತಿಮೀರಿ ಹೋಗಿದೆ. ಆದರೆ
ಅದಕ್ಕೆ ಉಪಾಯವೇನು? ಪ್ರಯತ್ನ ಮಾಡಿದರೂ ಲಾಭವಿಲ್ಲ. ಕೃಷ್ಣರಾ
ಯನು ಇದ್ದದ್ದಾದರೆ ನಾವು ಪ್ರಯತ್ನ ಮಾಡಿ ವಿಶ್ವನಾಥರಾಯನಿಗೆ ಚನ್ನಾಗಿ
ಶಾಸನ ಮಾಡಿಸುತ್ತಿದ್ದೆನು."

ರಮಾ:—"(ವಿಹ್ವಲಳಾಗಿ) ಪರಮೇಶ್ವರಾ, ನಿನ್ನಲ್ಲಿಯೂ ಕೂಡ
ನ್ಯಾಯಾನ್ಯಾಯದ ವಿಚಾರವಿಲ್ಲವೇ! ಮನೆಯು ಸುಟ್ಟರೂ ಸುಡಲಿ! ನನ್ನ
ಪ್ರಿಯ ಬಾಂಧವನನ್ನು ರಕ್ಷಿಸಬಾರದಿತ್ತೇ!!"

ರಮಾಬಾಯಿ ಕೇಶವರಾಯರು ದುಃಖದಲ್ಲಿ ಮಗ್ನರಾಗಿದ್ದರು. ಇಬ್ಬರ
ನಿಲ್ಲಾಸದಿಂದ್ದ ಹಿಮ್ಮನ್ನೂ ಅಳುತ್ತಿದ್ದಳು. ಇಷ್ಟರಲ್ಲಿ ಒಬ್ಬ ೧೩, ೧೪ ವರ್ಷ

ದ ಹುಡುಗನು ಕೇಶವರಾಯನ ಮುಂದೆ ಬಂದು ನಿಂತನು. ಅವನ ಕೈಯಲ್ಲಿ ಪಾಕೇಟಿನೊಳಗೆ ಹಾಕಿ ಬಂದು ಮಾಡಿದ ಒಂದು ಪತ್ರವಿತ್ತು. ಆ ಹುಡುಗನು ಬಂದ ಕೂಡಲೆ ಆ ಪತ್ರವನ್ನು ಕೇಶವರಾಯನ ಕಡೆಗೆ ಕೊಟ್ಟನು. ಆ ಪತ್ರವನ್ನು ನೋಡಿದ ಕೂಡಲೆ ಕೇಶವರಾಯನ ಮನಸ್ಸಿನಲ್ಲಿ ವಿಲಕ್ಷಣವಾದ ಕಲ್ಪನೆಯು ಹುಟ್ಟಿತು. ಆದರೆ ಕೂಡಲೇ ಅವನು ಸಿರಃಶೋನ್ಮುಖನಾಗಿ ಬಂದ ಹುಡುಗನನ್ನು ಕುರಿತು ಕೆಳಗೆ ಬರೆದಂತೆ ಮಾತಾಡಿದನು.

ಕೇಶವ:—"ತಮ್ಮಾ, ಈ ಪತ್ರವನ್ನು ನಿನ್ನ ಕಡೆಗೆ ಕೊಟ್ಟು ಎಷ್ಟು ದಿವಸವಾಯಿತು?"

ಹುಡುಗ:—"ಈಗ ಕೊಟ್ಟರು. ಬಹಳವಾದರೆ ಒಂದು ತಾಸು ಆಗಿದ್ದೀತು."

ಕೇಶವ:—"(ಆಶ್ಚರ್ಯದಿಂದ) ಏನು? ಒಂದು ತಾಸಾಯಿತು! ವಿಳಾಸದ ಅಕ್ಷರವನ್ನು ನೋಡಿದರೆ, ಕೃಷ್ಣರಾಯನವು. ಹಾ, ಇದೇನು ಆಶ್ಚರ್ಯ!"

ರಮಾ:—"(ಕೇಶವರಾಯನ ಕೈಯಲ್ಲಿದ್ದ ಪತ್ರವನ್ನು ಕಸುಕೊಂಡು) ಹೌದು, ಹೌದು ಅಕ್ಷರಗಳಂತೂ ನಿಜವಾಗಿ ಕೃಷ್ಣರಾಯನವು ಹೌದು. ತಮ್ಮಾ, ಯಾರು ನಿನ್ನ ಕೈಯಲ್ಲಿ ಈ ಪತ್ರವನ್ನು ಕೊಟ್ಟರು?"

ಹುಡುಗ:—"ಅವರ ಹೆಸರು ನನಗೆ ಗೊತ್ತಿಲ್ಲ."

ಕೇಶವ:—"ಅವರ ಮುಖಲಕ್ಷಣವು ನನ್ನಂತೆಯಿದೆಯೋ? ಯಾಕೆ—"

ಕೇಶವರಾಯನು ಮುಂದೆ ಏನೋ ಮಾತಾಡುತ್ತಿದ್ದನು. ಅಷ್ಟರಲ್ಲಿ ಆ ಹುಡುಗನು:—

ಹುಡುಗ:—"ನಿಮ್ಮಂತೆ ಇಲ್ಲ. ಅದೇ ಆ ಅಪ್ಪನಂತೆ ಇದ್ದಾರೆ."

ರಮಾಬಾಯಿ ಕೇಶವರಾಯರು ಒಮ್ಮೆಲೆ ಸಾನಂದಾಶ್ಚರ್ಯದಿಂದ:— "ಕೃಷ್ಣರಾಯನಂತೂ ಹೌದು" ಎಂದುಚ್ಚರಿಸಿದರು.

ರಮಾಬಾಯಿಯು ಪತ್ರವನ್ನು ಓದಲಿಕ್ಕೆ ಬಹಳ ಆತುರವುಳ್ಳವಳಾಗಿದ್ದಳು. ಅವಳು ಬೇಗನೆ ಪತ್ರದ ಮೇಲಿನ ಹೊದಿಕೆಯನ್ನು ತೆಗೆದೊಗೆದು ಪತ್ರವನ್ನು ಓದಲಾರಂಭಿಸಿದಳು.

ಶ್ರೀ

ಮುಂಬಯಿ, ಶಾರದಾಶ್ರಮ.

ಶ್ರೃ. ಸಾ. ನ. ವಿ. ವಿ.

ನಿಮಗೆ ಅವಂತೀಪುರದ ಸಾದ್ಯಂತ ವೃತ್ತಾಂತವು ತಿಳಿದಬ್ಬಾದರೆ, ನಾನು ಜೀವಂತನಿದ್ದೇನೆಂಬುವದನ್ನು ಕೇಳಿ, ಆನಂದಾಶ್ಚರ್ಯಗಳು ಆಗದಿರ ಲಾರವು. ಒಬ್ಬ ಸದ್ಗೃಹಸ್ಥನ ಕೃಪೆಯಿಂದ ನಾನು ಬದುಕಿದೆನು. ಈಗ ನನ್ನ ಪ್ರಕೃತಿಯು ನೆಟ್ಟಗದೆ. ಅವಂತೀಪುರದಲ್ಲಿ ನಾಡದು ಮಾಧವರಾಯ ನೊಡನೆ ವೇಣುವಿನ ಲಗ್ನವೆಂದು ಒಬ್ಬ ಗೃಹಸ್ಥನು ತಿಳಿಸಿದನು. ಕಾರಣ ನೀವು ತೀವ್ರವಾಗಿ ನನ್ನ ಬಳಿಗೆ ಬರಬೇಕು. ಭಗಿನಿಗೆ ನಮಸ್ಕಾರ. ಹಿಮು ವಿಗೆ ಆಶೀರ್ವಾದ. ತಿಳಿಯುವದು.

ತಮ್ಮ,

" ಕೃಷ್ಣರಾವ "

ಈ ಪತ್ರವನ್ನು ಓದಿ ಸರ್ವರ ಮನೋವೃತ್ತಿಯಲ್ಲಿ ಬದಲಾದದ್ದನ್ನು ಪ್ರತಿಬಿಂಬಿಸುವದು ಅಶಕ್ಯವೇ ಸರಿ. ಕೇಶವರಾಯನು ಆ ಹುಡುಗನಿಗೆ ೫೦ ರೂಪಾಯಿ ಪಾರಿತೋಷಕವಾಗಿ ಕೊಟ್ಟು ಕಳಿಸಿದನು. ವಿಶ್ವನಾಥರಾ ಯನ ಗರ್ವವನ್ನು ಮುರಿಯುವ ಅವನ ಅಪೇಕ್ಷೆಯು ಪ್ರದೀಪ್ತವಾಯಿತು. ಆ ದುಷ್ಟನ ಸೇಡು ತೀರಿಸಿಕೊಳ್ಳುವದಕ್ಕಾಗಿ ಅವನು ವಿಚಾರ ಮಾಡಹತ್ತಿ ದನು.

## ೩ನೆಯ ಪ್ರಕರಣ—ದರ್ಶನ.

ಈಶ್ವರೀ-ಘಟನಾ-ಚಕ್ರವು ಅತ್ಯಂತ ವಿಲಕ್ಷಣವಾಗಿದೆ. ಈಶ್ವರೀ ಸೂತ್ರವು ಬಹಳ ಅಗಮ್ಯವಾಗಿದ್ದು, ಅದು ಮಾನವ-ದೃಷ್ಟಿಗೆ ಅಗೋಚರ ವಾಗಿದೆ. ಆ ವಿಷಯಕ್ಕೆ ವಿಚಾರಿಸುವದು ನಮ್ಮ ಹುಚ್ಚತನವೇ ಸರಿ. ನಮ್ಮ ಯೋಜನೆ, ನಮ್ಮ ಕಲ್ಪನೆ, ನಮ್ಮ ಕೃತಿ ಮೊದಲಾದವುಗಳು ಮೃಗ ಜಲ ನದಿಯಂತೆ ಇರುತ್ತವೆ. ನಾವು ಮಾಡುವದೊಂದಾದರೆ, ಈಶ್ವರನು ಮಾಡುವದೊಂದಾಗುತ್ತದೆ. ಅವಂತೀಪುರದ ಜಹಾಗೀರದಾರನು ತನ್ನ ಮೃಗಜಲದ ಸಂಚಯದಿಂದ ಮರುಭೂಮಿಯಲ್ಲಿ ನಂದನವನವನ್ನು ಮಾಡು

ಟ ಪ್ರಯತ್ನದಲ್ಲಿ ತೊಡಗಿದ್ದನು; ಆದರೆ ಅತ್ತ ಈಶ್ವರೀ ಯೋಜನೆಯು ಬೇರೆಯಿತ್ತು. ವಾಸ್ತವಿಕ ವಿಶ್ವನಾಥರಾಯನಿಗೆ ತನ್ನೀ ಕ್ಷುದ್ರತ್ವವು ತಿಳಿಯಲಿಕ್ಕೆ ಬೇಕಾಗಿತ್ತು; ಆದರೆ ಅಧಿಕಾರ, ದ್ರವ್ಯ, ಮದ ಮೊದಲಾದ ಅನೇಕ ಪಟಲಗಳು ದೃಷ್ಟಿ ಪಥದಲ್ಲಿ ಅಡ್ಡ ಬಿದ್ದುಕೊಂಡಿದ್ದದರಿಂದ ಅವನಿಗೆ ಈಶ್ವರೀ ಪ್ರಚಂಡ ಶಕ್ತಿಯ ಕಲ್ಪನೆಯನ್ನು ಮಾಡುವದಾಗಲಿಲ್ಲ. ಅವನ ಕೈಯಲ್ಲಿ ಎಷ್ಟು ಅಧಿಕಾರವಿದ್ದರೂ, ಅದು ಈಶ್ವರೀ ಅಧಿಕಾರವನ್ನು ವಿಕಲಕ್ಷಾಂಶದಿಂದಾದರೂ ಸರಿಗಟ್ಟಲಾರದು. ದುಡ್ಡುದುಡ್ಡು ಎಂದು ಅವನಿಗಿದ್ದ ಅಭಿಮಾನವಂತೂ ಮೂರ್ಖತನದ ಪರ್ವತವೇ ಆಗಿತ್ತು. ವಿಶ್ವನಾಥರಾಯನು ಆಲೋಚಿಸಿದ ವಿವಾದಕ್ಕೆ ಮುಖ್ಯ ಕಂಟಕನಾದ ಕೃಷ್ಣರಾಯನನ್ನು ನಿವಾರಣೆ ಮಾಡಲು ಮಾಡಿದ ಅವನ ಘೋರ ಪ್ರಯತ್ನವು ನಿಷ್ಫಲವಾಯಿತು. ನಾವಾಡಿಗರು ಕೃಷ್ಣರಾಯನನ್ನು ಸಮುದ್ರದಲ್ಲಿ ದೂಡಿದ ದಿವಸವೇ ಸಚ್ಚಿದಾನಂದನಿಗೆ ಸಮುದ್ರದಲ್ಲಿ ಒಬ್ಬ ಮರಣೋನ್ಮುಖ ಮನುಷ್ಯನು ಸಿಕ್ಕನೆಂಬುವದು ನಮ್ಮ ವಾಚಕರ ಲಕ್ಷ್ಯದಲ್ಲಿದ್ದೀತು. ಆ ಸಚ್ಚಿದಾನಂದನಿಗೆ ಸಿಕ್ಕ ಮನುಷ್ಯನೇ ಕೃಷ್ಣರಾಯನು. ಇದರ ಮೇಲಿಂದ ಈಶ್ವರೀ ಘಟನಾಚಕ್ರವು ಎಷ್ಟು ವಿಲಕ್ಷಣವಾಗಿರುತ್ತದೆಂಬುವದು ಯಾರ ಲಕ್ಷ್ಯದಲ್ಲಿಯಾದರೂ ಬಾರದಿರಲಿಕ್ಕಿಲ್ಲ. ಇರಲಿ.

ಸೂರ್ಯೋದಯವಾಗಿತ್ತು. ಆಕಾಶವು ಅನಭ್ರವಾಗಿದ್ದದರಿಂದ ಪ್ರಾತಃಕಾಲದ ಮನೋಹರವಾದ ಬಿಸಿಲು ಸರ್ವಕಡೆಗೂ ಪಸರಿಸಿತ್ತು. ಪಕ್ಷಿಗಳು ಮರಗಳ ಮೇಲೆ ಕುಳಿತು, ಆನಂದದಿಂದ ಕಿಲಕಿಲಾಟವನ್ನು ಮಾಡುತ್ತಿದ್ದವು. ಯಾವತ್ತೂ ಜನರು ತಂತಮ್ಮ ಉದ್ಯೋಗದಲ್ಲಿ ತೊಡಗಿದ್ದರು. ಪ್ರಾತಃಕಾಲದ ವೇಳೆಯು ಇಡೀ ದಿವಸದಲ್ಲಿ ಮಹತ್ವದ್ದೂ, ಆಹ್ಲಾದಕಾರಕವಾದದ್ದೂ ಆಗಿರುತ್ತದೆ. ಪ್ರತ್ಯೇಕ ಮನುಷ್ಯನು ಸುಖಿಯಿರಲಿ-ದುಃಖಿಯಿರಲಿ, ರಾಜನಿರಲಿ-ರಂಕನಿರಲಿ, ಘನತರವಾದ ಚಿಂತೆಯವನಿರಲಿ-ವಿಲಾಸಯುಕ್ತನಿರಲಿ, ಬೆಳಗಾಯಿತೆಂಬ ಶಬ್ದದಿಂದಲೇ ಅವನ ಮನಸ್ಸಿನಲ್ಲಿ ಏನೋ ಒಂದು ಆನಂದದ ಪರಿಣಾಮವಾಗುತ್ತದೆ.

ಮುಂಬಯಿಯ ಶಹರದ ಒಂದು ಭಾಗದಲ್ಲಿ ಒಂದು ಸಣ್ಣ ರಮಣೀಯವಾದ ತೋಟವಿದ್ದು, ಅದರಲ್ಲಿ ಒಂದು ಸುಂದರವಾದ ಆಶ್ರಮವಿತ್ತು.

ಅದೇ ಆ ಸಚ್ಚಿದಾನಂದನ ಶಾರದಾಶ್ರಮವು. ಆಶ್ರಮದ ಒಂದು ಕೋಣೆಯಲ್ಲಿ ಒಬ್ಬ ತರುಣ ಗೃಹಸ್ಥನು ಹಾಸಿಗೆಯ ಮೇಲೆ ಮಲಗಿಕೊಂಡಿದ್ದನು. ಅವನ ತಲೆಗಿಂಬಿನ ಹತ್ತರ ಒಬ್ಬ ತರುಣನೂ, ಒಬ್ಬ ಸುಸ್ವರೂಪ ಸ್ತ್ರೀಯೂ ಒಳ್ಳೇ ಭಕ್ತಿಭಾವದಿಂದ ಗೀತವನ್ನು ಅನ್ನುತ್ತ ಕುಳಿತುಕೊಂಡಿದ್ದರು. ಹಾಸಿಗೆಯ ಮೇಲೆ ಮಲಗಿದ ಮನುಷ್ಯನು ಎಷ್ಟೋ ದಿವಸ ಅನಾರೋಗ್ಯದಿಂದ ಇದ್ದದರಿಂದ ಅವನು ನಿಸ್ತೇಜಿಯಾಗಿದ್ದನು. ಅವನ ಪ್ರಕೃತಿಯು ಸುಧಾರಿಸುತ್ತ ನಡೆದಿದ್ದು, ಇತ್ತಕಡೆಗೆ ಅವನಿಗೆ ನಿದ್ರೆಯೂ ಚನ್ನಾಗಿ ಬರುತ್ತಿತ್ತು. ರೋಗಿ ಮನುಷ್ಯರಿಗೆ ಬೆಳಗಾಗುವದು ಒಳ್ಳೇ ಪ್ರಿಯವಾಗಿರುತ್ತದೆ. ಆ ಪ್ರಕಾರ ಈ ರೋಗಿಯು ತನ್ನ ನಿದ್ರೆಯು ಪೂರ್ಣವಾದ ಮೇಲೆ ಬೆಳಗಾಗಿರುವದೋ ಇಲ್ಲೋ ಎಂದು ನೋಡಿದನು. ಆಗ ಅವನ ದೃಷ್ಟಿಗೆ ದಿವ್ಯವಾದ ಪ್ರಕಾಶವು ಕಾಣಿಸಿತು. ಕೋಣೆಯಲ್ಲಿ ಪಸರಿಸಿದ ಸೂರ್ಯನ ಕಿರಣದ ಪ್ರಕಾಶವನ್ನು ನೋಡಿ ಅವನಿಗೆ ಒಳ್ಳೇ ಆಹ್ಲಾದವಾಯಿತು. ಅವನು ತನ್ನ ಬಳಿಯಲ್ಲಿ ಕುಳಿತುಕೊಂಡ ಸ್ತ್ರೀಯ ಸಂಗಡ ಕೆಳಗೆ ಬರೆದಂತೆ ಮಾತಾಡಿದನು.

ಕೃಷ್ಣ:—"ಮನೋರಮಾ ತಾಯಿ, ತಾವು ಸಂಪೂರ್ಣ ರಾತ್ರಿ ಹೀಗೆಯೇ ನನ್ನ ಹತ್ತರ ಕುಳಿತಂತೆ ಕಾಣಿಸುತ್ತದೆ."

ಮನೋ:—"ನಾನು ಇಡೀ ರಾತ್ರಿ ಕುಳಿತುಕೊಂಡಿಲ್ಲ. ಸ್ವಲ್ಪ ನಿದ್ರೆ ಮಾಡಿ ನಂತರ ನಿನ್ನ ಹತ್ತರ ಬಂದು ಕುಳಿತಿದ್ದೇನೆ. ಈಗ ನಿನ್ನ ಪ್ರಕೃತಿಯು ನೆಟ್ಟಗಾದೆಯೋ ಹೇಗೆ?"

ಕೃಷ್ಣ:—"(ಎದ್ದು ಕುಳಿತು) ತಾಯಿ, ನಿಮ್ಮ ಅಮಾನುಷ ಸ್ನೇಹವನ್ನು ನಾನು ದೊಡ್ಡ ಸಂಪತ್ತೆಂದು ಭಾವಿಸಿರುತ್ತೇನೆ. ಸಚ್ಚಿದಾನಂದರ ಮತ್ತು ನಿಮ್ಮ ಪ್ರಯತ್ನದಿಂದ ನಾನು ಬದುಕಿದೆನು; ಇಲ್ಲವಾದರೆ ನಾನು ಇಹಲೋಕ ಯಾತ್ರೆಯನ್ನು ಮುಗಿಸಿದ್ದೆನು. ನನ್ನ ಮೇಲೆ ನಿಮ್ಮ ಉಪಕಾರವು ಅಗಣ್ಯವಾಗಿದೆ. ಆ ಉಪಕಾರದ ಋಣವನ್ನು ನನ್ನಿಂದ ಎಂದೂ ತೀರಿಸುವದಾಗುವದಿಲ್ಲ. ಅಯ್ಯೋ! ಆ ವೇಳೆಯಲ್ಲಿ ನನ್ನ ಮೇಲೆ ಎಂಥ ದುರ್ಧರ ಪ್ರಸಂಗ!! ನೆನಿಸಿಕೊಂಡರೆ ಎದೆ ಧುಗಿಲ್ಲನ್ನುತ್ತದೆ. ಆ ವೇಳೆಯ ಎಲ್ಲ ದುರ್ಧರ ಸ್ಥಿತಿಯು ನನ್ನ ಕಣ್ಣಿನ ಮುಂದೆ ಕಟ್ಟಿದಂತಾಗಿರುತ್ತದೆ.

ಆ ಅಗಾಧ ಸಮುದ್ರವೂ, ಆ ಭಯಂಕರರಾದ ನಾವಾಡಿಗರೂ ಮೊದಲಾಗಿ ಎಲ್ಲವೂ ನನ್ನ ಕಣ್ಣಿನ ಮುಂದೆ ಮೂರ್ತಿಮಂತವಾಗಿರುತ್ತವೆ. ಅಯ್ಯೋ! ಎಷ್ಟು ಆ ನಾವಾಡಿಗರ ದುಷ್ಟತನವು!! ನನ್ನ ತಲೆಗೆ ಹೊಡೆದ ಕೂಡಲೆ ಎಚ್ಚರದಪ್ಪಿದೆನು. ಮತ್ತು ಆ ಅವಸ್ಥೆಯಲ್ಲಿಯೇ ೮, ೧೦ ತಾಸು ಬಿದ್ದು ಕೊಂಡಿದ್ದೆನು. ಕೇವಲ ನಿಮ್ಮಿಬ್ಬರ ಪ್ರಯತ್ನದಿಂದಲೇ ನಾನು ಬದುಕಿದೆನು. ನನ್ನ ಸಲುವಾಗಿ ನಿಮಗೆ ಬಹಳ ಕಷ್ಟವಾಯಿತು."

ಮನೋ:—"(ಶಾಂತಚಿತ್ತದಿಂದ) ಕೃಷ್ಣರಾವ, ಇದರಲ್ಲಿ ನಮಗೇನು ಶ್ರಮವಾಯಿತು. ಪ್ರಭುಪ್ರಸಾದದಿಂದ ನೀನು ಬದುಕಿದಿ. ಕಾರಣ ಆ ಸಂಬಂಧವಾಗಿ ಆ ಪ್ರಭುವನ್ನು ಹೊಗಳುವದು ಯುಕ್ತವಾದದ್ದು. ಆ ದುಷ್ಟ ನಾವಾಡಿಗರು ನಿನಗಂಥ ದುಷ್ಟತನವನ್ನು ಏನು ಮಾಡಿದರು?"

ಕೃಷ್ಣರಾವ:—"(ಸ್ವಲ್ಪ ಸಿಟ್ಟಿನಿಂದ) ಇದೆಲ್ಲ ದುಷ್ಟನೂ, ಅಧಮಾಧಮನೂ, ನರರಾಕ್ಷಸನೂ ಆದ ಧೋಂಡೀರಾಜನ ಆಟವು. ಆ ನೀಚನು ನನ್ನನ್ನು ಮೃತ್ಯುವಿನ ಸ್ವಾಧೀನ ಮಾಡಲಿಕ್ಕೆ ಘೋರ ಪ್ರಯತ್ನವನ್ನು ಮಾಡಿದ್ದನು. ಆದರೆ ಸಂತಸಂರಕ್ಷಕನಾದ ಈಶ್ವರನು ನನ್ನನ್ನು ರಕ್ಷಿಸಿದನು. ಆ ದುಷ್ಟನನ್ನು ಶಿಕ್ಷಿಸುವದಕ್ಕಾಗಿ ಇನ್ನೂ ಈಶ್ವರನು ಯಾಕೆ ಪ್ರಯತ್ನಿಸಿಲ್ಲವೆಂಬದರ ಬಗ್ಗೆ ನನಗೆ ಆಶ್ಚರ್ಯವಾಗುತ್ತದೆ."

ಕೃಷ್ಣರಾಯನ ಅಂತ್ಯವಾಕ್ಯವು ಇನ್ನೂ ಪೂರ್ಣವಾಗಿ ಉಚ್ಚಾರಿತವಾಗಿತ್ತೋ ಇಲ್ಲೋ ಅಷ್ಟರಲ್ಲಿ ಆದೇ ಕೇಶವರಾಯನೂ, ರಮಾಬಾಯಿಯೂ, ಹಿಮುವೂ ಕೃಷ್ಣರಾಯನ ಮುಂದೆ ಬಂದು ನಿಂತರು. ರಮಾಬಾಯಿಗೆ ಕೃಷ್ಣರಾಯನನ್ನು ನೋಡಿ ಅತ್ಯಾನಂದವಾಯಿತು. ಹಿಮುವು ಮಾವಾ, ಮಾವಾ ಎಂದು ಜಯಘೋಷವನ್ನು ಮಾಡಲಾರಂಭಿಸಿದಳು.



## ೭ನೆಯ ಪ್ರಕರಣ—ವಿನೋದ.

ಈಗ ವಿಶ್ವನಾಥರಾಯನ ಆನಂದಕ್ಕೆ ಸೀಮೆಯುಳಿದಿದ್ದಿಲ್ಲ. ತಾನು ಯಃಕಶ್ಚಿತ್ ಮನುಷ್ಯಪ್ರಾಣಿಯಿದ್ದೇನೆಂಬುವದನ್ನು ಅವನು ಸಂಪೂರ್ಣವಾಗಿ ಮರೆತು ಬಿಟ್ಟಿದ್ದನು. ಅಭಿಮಾನದ ಅಂಧತ್ವದಿಂದ ತನ್ನ ಹಡಗವು

ಯಾವ ಬಂದರದ ಕಡೆಗೆ ಹರಿದು ಹೋಗುತ್ತದೆಂಬುವದನ್ನು ಅವನು ಆಲೋಚಿಸಿದ್ದಿಲ್ಲ. ತಾನು ಆರಂಭಿಸಿದ ಕೆಲಸವು ನಿಶ್ಚಯವಾಗಿ ಆಗುತ್ತದೆಂಬು ಅವನ ತಿಳುವಳಿಕೆಯಿತ್ತು. ಈ ಯಶದ ಕಾರಣವು ತನ್ನ ಕಾರ್ಯ ಕುಶಲತೆಯ ಹೊರ್ತು ಮತ್ತೊಂದಿಲ್ಲವೆಂಬು ಅವನ ಭಾವನೆಯಿತ್ತು. ತನ್ನ ಕರ್ತವ್ಯಕರ್ಮವು ಧನ್ಯ! ತನ್ನ ಪ್ರಯತ್ನವು ಧನ್ಯ ಧನ್ಯ!! ಮತ್ತು ತಾನೂ ಧನ್ಯ ಧನ್ಯ ಧನ್ಯ!!! ಎಂದನ್ನುತ್ತ ಜಹಾಗೀರದಾರ ಸಾಹೇಬರು ಸ್ವತಃ ತಮ್ಮ ಕೈಯಿಂಡ ತಾವೇ ತಮಗೆ ಆರತಿಯನ್ನು ಬೆಳಗಿಕೊಳ್ಳುತ್ತಿದ್ದರು. ಅವರಿಗೆ ಈಗ ಸ್ವರ್ಗವು ಮೂರೇ ಮೂರು ಬೊಟ್ಟು ಉಳಿದಿತ್ತು. ಈ ಕಾಲದಲ್ಲಿ ಅವಂತೀಪುರದೊಳಗೆ ಎಲ್ಲ ಕಡೆಗೂ ವೇಣುವಿನ ಲಗ್ನದ ಚರ್ಚೆಯು ನಡೆದಿತ್ತು. ವಿಶ್ವನಾಥರಾಯನ ಕಡೆಯ ಭಿಕ್ಷುಕ ಮೊದಲಾದ ಜನರಿಗೆ ಬಳ್ಳೇ ಆನಂದವಾಗಿತ್ತು. ಈ ಆಶಾಬದ್ಧರಾದ ಜನರು ಪ್ರತಿನಿತ್ಯ ವಿಶ್ವನಾಥರಾಯನ ಬಳಿಗೆ ಬಂದು:—"ಯೋಗ್ಯ ಯೋಗ್ಯ. ರಾವಸಾಹೇಬರಿಗೆ ಈ ಕೆಲಸದ ಸಲುವಾಗಿ ಬಹಳ ಕಷ್ಟವಾಯಿತು; ಆದರೂ ಈಶ್ವರನು ತಮಗೆ ಕೀರ್ತಿಯನ್ನು ಕೊಟ್ಟನು. ಇದು ಆನಂದಕರವಾದ ಸಂಗತಿಯೇ ಸರಿ." ಎಂದನ್ನುತ್ತಿದ್ದರು. ಆ ಮೇಲೆ ವಿಶ್ವನಾಥರಾಯನು ಸ್ವಲ್ಪ ಸ್ಮಿತಹಾಸ್ಯ ಮಾಡಿ "ಇದೆಲ್ಲ ಶ್ರೀ ಕಾಶೀ ವಿಶ್ವೇಶ್ವರನ ಪ್ರಭಾವ! ಪ್ರಯತ್ನವು ನನ್ನದು, ಯಶವು ಅವನದು!!" ಎಂದುತ್ತರಗೊಡುತ್ತಿದ್ದರು. ಈ ಪ್ರಕಾರ ತನ್ನ ಬಳಿಗೆ ಬಂದು, ತನ್ನನ್ನು ಕಡ್ಲಿಯ ಗಿಡದ ಮೇಲೆ ಏರಿಸುವವರೊಂದಿಗೆ ವಿಶ್ವನಾಥರಾಯನು ಸವಿಸವಿ ಮಾತುಗಳನ್ನಾಡುತ್ತಿದ್ದನು; ಅವರಿಗೆ ಪಾನ ಸುಪಾರಿಯನ್ನು ಮಾಡಿಸುತ್ತಿದ್ದನು; ಅವರಿಗೆ ಚನ್ನಾಗಿ ಆದರಸತ್ಕಾರವನ್ನು ಮಾಡುತ್ತಿದ್ದನು.

ಇನ್ನು ವೇಣುವಿನ ಲಗ್ನಕ್ಕೆ ಅವಕಾಶವಿದ್ದಿಲ್ಲ. ನಾಳೆ ಮುಂಜಾನೆ ೧೦ ಹೊಡೆಯುವಾಗ ವಿಶ್ವನಾಥರಾಯನ ಮೈದುನ ಮಾಧವರಾಯನೊಂದಿಗೆ ವೇಣುವಿನ ಜನ್ಮದ ಗಂಟು ಹೊಡೆಯುವದು ನಿಶ್ಚಯಿಸಿತ್ತು. ನಾಳೆಯೇ ಲಗ್ನವಿದ್ದದರಿಂದ ವಿಶ್ವನಾಥರಾಯನ ಮನೆಯಲ್ಲಿ ಬಳ್ಳೇ ಗಡಬಿಡಿಯಿತ್ತು. ಆಪ್ತೇಷ್ಟರು ಮೊದಲಾಗಿ ಎಲ್ಲ ಜನರು ಲಗ್ನಕ್ಕೆ ಬಂದಿದ್ದರು. ಜಹಾಗೀರದಾರ ಸಾಹೇಬರ ಪ್ರಚಂಡವಾದ ವಾಡೆಯು ಜನರ ಗದ್ದಲದಿಂದ ತುಂಬಿತ್ತು.

ಸರ್ವರ ವ್ಯವಸ್ಥೆಯು ವಾಡೆಯಲ್ಲಿ ಆಗಲಿಕ್ಕಿಲ್ಲವೆಂದು ಬಾಗಿಲಿನ ಮುಂದೆ ಸಿದ್ಧಪಡಿಸಿದ ಶೋಭಾಯಮಾನವಾದ ಮಂಟಪವು ಚಿತ್ತಾಕರ್ಷಕವಾಗಿತ್ತು. ಮಂಟಪದ ಚತುರ್ಭಾಗಕ್ಕೆ ನಾಲ್ಕು ಕಮಾನುಗಳನ್ನು ಮಾಡಿದ್ದು, ಅದರ ಮಧ್ಯದಲ್ಲಿ ಮೂರು ಕಾರಂಜಿಗಳು ಕಂಗೊಳಿಸುತ್ತಿದ್ದವು. ನೂರಾರು ತರ ತರದ ಝುಮುರುಗಳನ್ನು ಹಚ್ಚಿದ್ದು, ಮುಂಬಯಿಯಿಂದ ಇಂಜನವನ್ನು ತಂದು ವಿದ್ಯುದ್ದೀಪಿಕೆಯನ್ನು ಹಚ್ಚುವ ವ್ಯವಸ್ಥೆ ಮಾಡಿತ್ತು. ಲಗ್ನ ಸಮಾರಂಭಕ್ಕೆ ತಾಲೂಕ-ಜಿಲ್ಹೆಗಳ ಅಧಿಕಾರಿಗಳು ಬರುವವರಿದ್ದದರಿಂದ, ಅವರಿಗಾಗಿ ವಾಡೆಯ ಹತ್ತರ ತಂಬೂ, ಡೇರೆ, ರಾಹುಟ ಮೊದಲಾದವುಗಳ ಸಿದ್ಧತೆಯನ್ನು ಮಾಡಿದ್ದರು. ಅವಂತೀಪುರದಲ್ಲಿ ವಿಶ್ವನಾಥರಾಯನ ಅಧಿಕಾರವಿದ್ದದರಿಂದ, ಅವನು ಊರೆಲ್ಲ ಶೃಂಗರಿಸಲಿಕ್ಕೆ ಜನರಿಗೆ ಆಜ್ಞೆ ಮಾಡಿದ್ದನು. ಸಾರಾಂಶ:—ಈ ವೇಳೆಯಲ್ಲಿ ಅವಂತೀಪುರದ ಯಾವ ಭಾಗಕ್ಕೆ ಹೋದರೂ ವೇಣುವಿನ ಲಗ್ನದ ಹೊರ್ತು ಇತರ ವಿಷಯವೇ ಇದ್ದಿಲ್ಲ.

ಮಾಧವರಾಯನ ಸಂಬಂಧವಾಗಿ ವಿಶ್ವನಾಥರಾಯನಲ್ಲಿ ಅಷ್ಟು ಪ್ರೀತಿಯೇನೂ ಇದ್ದಿಲ್ಲ. ಅವನ ಲಗ್ನಕ್ಕೆ ಇಷ್ಟು ಖರ್ಚು ಮಾಡಬೇಕೆಂದು ಅವನ ಮನಸ್ಸಿನಲ್ಲಿ ಎಳ್ಳಷ್ಟಾದರೂ ಇದ್ದಿಲ್ಲ; ಆದರೆ ಕೇವಲ ತನ್ನ ದೊಡ್ಡಿಸ್ತನವನ್ನೂ, ಅಧಿಕಾರವನ್ನೂ ತೋರಿಸುವದಕ್ಕಾಗಿ ಅವನು ಇಂಥ ಧನ ನಾಶದ ಕಾರ್ಯಕ್ಕೆ ಮುಖವಿಟ್ಟಿದ್ದನು. ವಾಸ್ತವಿಕ ಮಾಧವರಾಯನ ಲಗ್ನವಾಗುವ ಸಂಭವವೇ ಇದ್ದಿಲ್ಲ; ಕದಾಚಿತ್ ಆದರೂ ಅವನಂಥ ರೂಪಗೇಡಿಯು ಸ್ತ್ರೀಯೊಂದಿಗೆ ಆದೀತೆಂದು ಸರ್ವರಿಗೆ ತಿಳಿದಿತ್ತು. ಆದರೆ ವಿಶ್ವನಾಥರಾಯನು ಅತ್ತ ಲಕ್ಷಗೊಟ್ಟದ್ದರಿಂದ ಸುಂದರಿ, ಸುಸ್ವರೂಪೆ, ಸುಶೀಲೆಯಾದ ಸ್ತ್ರೀಯ ಸಂಗಡ ಮೈದುನಸಾಹೇಬರ ವಿವಾಹವಾಗುವ ಪ್ರಸಂಗವು ಬಂದಿತ್ತು. ಈ ವಿಲಕ್ಷಣ ಸಂಗತಿಯಿಂದ ಮಾಧವರಾಯರಿಗೆ ಮಿತಿಮೀರಿ ಆನಂದವಾಗಿತ್ತು. ಲಗ್ನಕ್ಕಾಗಿ ಬಂದ ಜನರು ವಧುವನ್ನು ನೋಡಿ ಬಳ್ಳೇ ಸಂತೋಷವನ್ನು ಹೊಂದಿದ್ದರು. ವಿಶ್ವನಾಥರಾಯನ ರಾಣಿ ರಾಧಾಬಾಯಿಯವರಿಗೆ ಆದ ಆನಂದವನ್ನು ವರ್ಣಿಸಲಿಕ್ಕೆ ನಮ್ಮಂಥ ಸಾವಿರ ಲೆಕ್ಕಣಿಕೆಯಾದರೂ ಸಾಲಲಾರವು. ಆ ಸ್ವಾಭಿಮಾನದಿಂದ ರಾಣಿಯವರು ಮೂಗಿನೊಳ

ಗಿನ ಮುಕ್ಕುರವನ್ನು ಹಾರಿಸುತ್ತ ಹಾರಿಸುತ್ತ "ಮಾಧವರಾಯನ ಲಗ್ನವು ಅಂಥ ಇಂಥ ಸ್ತ್ರೀಯ ಸಂಗಡ ಆಗುವದಿಲ್ಲ; ಅಪ್ಸರೆಯೊಡನೆ ಆಗುತ್ತದೆ." ಹೀಗೆನ್ನುತ್ತ ಅತ್ತಿತ್ತ ತಿರುಗಾಡುತ್ತಿದ್ದರು. ಈ ವಿವಾಹ ಪ್ರಸಂಗಕ್ಕೆ ಮೂಲ ಕಾರಣೀಭೂತನಾದ ಭೋಂಡೀರಾಜನಂತೂ ತನ್ನ ಕರ್ತವ್ಯ ಕರ್ಮಾತಿಶಯವನ್ನು ಹೊಗಳುತ್ತ ಸಾನಂದ ಚಿತ್ತದಿಂದ ತಿರುಗಾಡುತ್ತಿದ್ದನು. ಲಗ್ನದ ಸಂಬಂಧವಿಲ್ಲದ ಜನರಿಗೂ ಕೂಡ ಒಂದು ತರದ ಆನಂದವಾಗಿತ್ತು. "ಯಾರ ಸಂಗಡ ಯಾರ ಲಗ್ನವೇ ಆಗಲಿ, ನಮಗೇನು ? ನಮಗೆ ನಾಲ್ಕೈದು ದಿವಸ ಚಲೋ ಚಲೋ ಪಕ್ವಾನ್ನವು ಸಿಗುತ್ತದೆ; ವೇಶ್ಯೆಯರ ಮಧುರವಾದ ಗೀತವನ್ನು ಕೇಳಲಿಕ್ಕೆ ಸಿಗುತ್ತದೆ; ನಾಚು ನೋಡಲಿಕ್ಕೆ ಸಿಗುತ್ತದೆ. ಮಧುರವಾದ ಯಲೆಯಡಿಕೆಯನ್ನು ಮೆಲ್ಲಲಿಕ್ಕೆ ಅನುವಾಗುತ್ತದೆ." ಎಂದನ್ನುತ್ತಿದ್ದರು.

ಈ ಪ್ರಕಾರ ಗ್ರಾಮವಾಸಿಗಳೆಲ್ಲ ಆನಂದಮಗ್ನರಾಗಿದ್ದರು; ಆದರೆ ಅಬಲೆಯಾದ ವೇಣುವಿನ ಹಾಡು ಎಂಥಾದ್ದಿದ್ದೀತು? ಶಿವ ಶಿವ! ಅವಳ ದುಃಖಸಮುದ್ರಕ್ಕೆ ದಂಡೆಯಿಲ್ಲ!! ಕಾರಾಗೃಹದಂತೆ ಪೂರ್ಣ ಕತ್ತಲೆಯುಳ್ಳ ವಿಶ್ವನಾಥರಾಯನ ನಡುಮನೆಯ ಒಂದು ಕೋಣೆಯ ಮೂಲೆಯಲ್ಲಿ ವೇಣುವು ಅಳುತ್ತ ಕುಳಿತುಕೊಂಡಿದ್ದಳು. ಅವಳಿಗೆ ಅಲ್ಲಿ ಯಾತಕ್ಕೇನೂ ಕೊರತೆಯಿದ್ದಿಲ್ಲ; ಆದರೆ ಕೃಷ್ಣರಾಯನೊಡನೆ ಆಗುವ ತನ್ನ ಲಗ್ನವು ಮಾಧವರಾಯನೊಡನೆ ಆಗುವ ಸಮಯವು ಬಂದಿತೆಂದು ಅವಳು ಭಯಂಕರ ಚಿಂತೆಯನ್ನು ಮಾಡುತ್ತಿದ್ದಳು. ಅಲ್ಲಿ ವೇಣುವು ಒಂದೇಸವನೆ ಆಕ್ರೋಶವನ್ನು ಮಾಡುತ್ತಿದ್ದರೂ, ಆ ಕಡೆಗೆ ಒಬ್ಬರೂ ಹಣಿಕಿ ಹಾಕಿ ನೋಡುತ್ತಿದ್ದಿಲ್ಲ. "ಅತ್ತರೆ ಅವಳು ಅತ್ತಳು, ನಾವಾದರೂ ಅದಕ್ಕೇನು ಮಾಡಬೇಕು" ಎಂದು ಸರ್ವರೂ ಅನ್ನುತ್ತಿದ್ದರು. ವಿಶ್ವನಾಥರಾಯನಂತೂ "ಲಗ್ನಕ್ಕಾಗಿ ವೇಣುವಿನ ಅನುಮತಿಯೇನೂ ಅವಶ್ಯವಿಲ್ಲ" ಎಂದನ್ನುತ್ತ ತಿರುಗಾಡುತ್ತಿದ್ದನು. ವಿಶ್ವನಾಥರಾಯನದೇ ರಾಕ್ಷಸೀ ಮತವಾದ ಮೇಲೆ ವೇಣುವಿನ ಇಷ್ಟಾನಿಷ್ಟದ ಕಡೆಗೆ ಯಾರು ಲಕ್ಷ್ಯಗೊಡಬೇಕು? ಅಹಹಾ!! ನಮ್ಮ ಸಮಾಜದ ವಿವಾಹ ಬಂಧನದಲ್ಲಿ ಎಷ್ಟು ಅನ್ಯಾಯವು!! ತನ್ನ ಹಿತಾಹಿತವು ತಿಳಿಯದೆ ಇದ್ದಂಥ, ಪತಿಯ ಬಗ್ಗೆ ತಿಳುವಳಿಕೆಯಿಲ್ಲ

ದಂಥ, ಅವ್ವನ ಮನೆಯು ಅತ್ತೆಯ ಮನೆಯ ಕಲ್ಪನೆಯಿಲ್ಲದಂಥ ಅಜ್ಞಾನ ಕುಮಾರಿಕೆಯರ ಮನಬಂದಂತೆ ಲಗ್ನ ಮಾಡುವದೂ ಅಥವಾ ತನ್ನ ಹಿತಾಹಿತವನ್ನು ಬಲ್ಲಂಥ ಕುಮಾರಿಕೆಯರ ಸಮ್ಮತಿಯನ್ನು ತಕ್ಕೊಳ್ಳದೆ ಅಯೋಗ್ಯವಾದ ವರನ ಸಂಗಡ ಲಗ್ನ ಮಾಡುವದೂ ಎಲ್ಲ ಸಮಾಜದ ಮತ್ತು ರಾಷ್ಟ್ರದ ಅವನತಿಯ ಕಾರಣವೇ ಹೊರ್ತು ಬೇರೆ ಏನೂ ಇಲ್ಲ.

ರಾಷ್ಟ್ರದ ನಿಜವಾದ ಸಂಪತ್ತೆಂದರೆ ಸುಮಾತೆಯೇ ಸರಿ. ಸುಮಾತೆಯು ರಾಷ್ಟ್ರದ ನಿಜವಾದ ಮತ್ತು ಪವಿತ್ರವಾದ ಶಕ್ತಿಯಾಗಿದ್ದಾಳೆ. ನಮ್ಮ ರಾಷ್ಟ್ರದ ಅಧೋಗತಿಗೆ ನಿಜವಾದ ಕಾರಣವು ಸುಮಾತೆಯ ಅಭಾವವೇ ಆಗಿರುವದು. ನಮ್ಮ ರಾಷ್ಟ್ರದ ಮಾನಭಂಗವಾಗಲಿಕ್ಕೂ, ತೇಜೋಭಂಗವಾಗಲಿಕ್ಕೂ ಮೂಲ ಕಾರಣವೆಂದರೆ ಸುಮಾತೆಯ ಅಭಾವವೇ ಸರಿ. ಜಗತ್ತಿನ ಅವನತಿಗೆ ವಿಶ್ವನಾಥರಾಯನಂಥ ಸಮಾಜ ಕಂಟಕರೇ ಕಾರಣೀಭೂತರು. ಇಂಥ ಜನರ ಗರ್ವಹರಣವಾದ ಹೊರ್ತು, ಇಂಥ ಜನರ ಹೆಸರನ್ನು ಸಮಾಜದ ಲಿಸ್ಟಿನೊಳಗಿಂದ ತೆಗೆದು ಹಾಕಿದ ಹೊರ್ತು ನಮ್ಮ ರಾಷ್ಟ್ರದ ಕಲ್ಯಾಣವಾಗದು.

ಸಮಾಜದೊಳಗಿನ ದುರಾಗ್ರಹೀ ಜನರು ವಿವಾಹ ಮೊದಲಾದ ಪರಮ ಮಂಗಲವಾದ ಮಹತ್ವದ ಕಾರ್ಯದಲ್ಲಿ ಕೈಹಾಕಿ ರಾಷ್ಟ್ರದ ನಿಜವಾದ ಹಿತವನ್ನು ಹಾಳು ಮಾಡುತ್ತಾರೆ. ಈ ಸಮಾಜಕಂಟಕರು ವಧೂವರರ ಸಮ್ಮತಿಯ ಕಡೆಗೂ, ಅವರ ಕುಲಶೀಲಗಳ ಕಡೆಗೂ, ಅವರ ಶಾರೀರಿಕ ಪ್ರಕೃತಿಯ ಕಡೆಗೂ, ಅವರ ವಯೋಮಾನದ ಕಡೆಗೂ, ಅವರ ಜ್ಞಾನದ ಕಡೆಗೂ ದುರ್ಲಕ್ಷ ಮಾಡಿ ಎಲ್ಲ ಸಮಾಜಕ್ಕೆ ದುರವಸ್ಥೆಯನ್ನು ತರುತ್ತಾರೆ. ನಮ್ಮ ರಾಷ್ಟ್ರವು ಪರಕೀಯರ ಅಧಿಕಾರದಿಂದ ದುರ್ಬಲವಾಗುತ್ತದೆಂದು ಕುರಿಕುರಿ ಮಾಡುವವರೆಲ್ಲ ಕೇವಲ ವಿಷಮ ವಿವಾಹದ ನಿರ್ಘೃಣ ರೂಢಿಯಿಂದ ರಾಷ್ಟ್ರದ ಜನರು ನಿಸ್ಸತ್ವಿಗಳಾಗುತ್ತಾರೆಂಬುವದನ್ನು ತಿಳಿಯದ್ದಕ್ಕೆ ಪರಮಾಶ್ಚರ್ಯವಾಗುತ್ತದೆ. ನಮ್ಮ ರಾಷ್ಟ್ರವು ಈ ಇಬ್ಬಗೆಯ ಪೇಚಿನಲ್ಲಿ ಸಿಕ್ಕಿದ್ದಾದರೆ, ಮೊದಲು ಯಾವ ಪೇಚಿನಿಂದ ಪಾರಾಗುವದು ಸುಲಭವೂ, ಅವಶ್ಯವೂ ಆದೀತೆಂಬ ವಿಚಾರ ಮಾಡುವ ಭಾರವನ್ನು ನಾವು ನಮ್ಮ ವಾಚಕ ಮಹನೀಯರ ಕಡೆಗೆ ಒಪ್ಪಿಸಿರುತ್ತೇವೆ.

ವಿಷಮ ವಿವಾಹದ ದುಷ್ಪರಿಣಾಮವು ಪುನಃ ಪುನಃ ದೃಷ್ಟಿಗೆ ಬೀಳು ತ್ತಿದ್ದರೂ ಅತ್ತಕಡೆಗೆ ದುರ್ಲಕ್ಷಿಸುವದು ನಮ್ಮ ಮೂರ್ಖತನದ ನಿರ್ಮಲ ದ್ಯೋತಕವಾಗಿದೆ. ಸುಮಾತಾ ಪ್ರಾಪ್ತಿಯ ಸಲುವಾಗಿ ಪ್ರತ್ಯೇಕ ಭಾರತ ವಾಸಿಯರು ಪ್ರಯತ್ನ ಮಾಡಲಿಕ್ಕೆ ಬೇಕು. ಬೇರೆ ಬೇರೆ ರಾಷ್ಟ್ರದ ಇತಿಹಾ ಸದಲ್ಲಿಯೂ, ನಮ್ಮ ಪೂರ್ವದ ಇತಿಹಾಸದಲ್ಲಿಯೂ ಇದೇ ತತ್ವವು ಗ್ರಥಿತ ವಾಗಿದೆ. ಮನಸ್ಸಿನಿಂದ ಗಂಭೀರವೂ, ಶರೀರದಿಂದ ಸದೃಢವೂ, ನೀತಿ ಯಿಂದ ಪೂರ್ಣವೂ, ತೇಜದಿಂದ ಉಜ್ವಲವೂ ಆದ ಸಂತತಿಯ ಲಾಭವು ಭಾರತವರ್ಷಕ್ಕೆ ಸುಮಾತೆಯ ಹೊರ್ತು ಆಗಲಾರದು. ವಿಷಮ ವಿವಾಹದ ರೂಢಿಯು ನಾಶವಾಗುವ ಹೊರ್ತು, ಸುಮಾತೆಯ ಲಾಭವು ಹಿಂದುಸ್ತಾನಕ್ಕೆ ಆಗಲಾರದು. ಈ ಪ್ರಾಪ್ತಿಯ ಸಲುವಾಗಿ, ಈ ಮಹತ್ಕಾರ್ಯದ ಸಲುವಾಗಿ ಮೊದಲು ಸಮಾಜ ಪುಷ್ಪವಾಟಿಕೆಯೊಳಗಿನ ದುಷ್ಟ ಸಮಾಜವನ್ನು ದೂರ ಮಾಡುವ ಹೊರ್ತು ಸಮಾಜದ ಸುಧಾರಣೆಯಾಗಲಿಕ್ಕೆ ಬಗೆಯಿಲ್ಲ.

ವಿವಾಹ ಸಂಬಂಧದಲ್ಲಿ ವಧೂವರರ ಅನುಮತಿಯನ್ನು ಪಡೆಯು ವದು ಎಷ್ಟೋ ಜನರಿಗೆ ಅನಿಷ್ಟಕಾರಕವೆಂದು ತೋರುವದರಿಂದ, ಅವರು ಅವರ ಅಜ್ಞಾನಾವಸ್ಥೆಯಲ್ಲಿಯೇ ವಿವಾಹವನ್ನು ಮಾಡಿ ಬಿಡುತ್ತಾರೆ. ಮುಂದೆ ವಿವಾಹಿತರಿಗೆ ಜ್ಞಾನಾವಸ್ಥೆಯು ಪ್ರಾಪ್ತವಾದ ಮೇಲೆ ಅವರಿಂದ ಸಮಾಜದಲ್ಲಿ ಆಗಬಾರದ ಅನಿಷ ವೃತ್ತಿಯು ಸಂಭವಿಸುತ್ತದೆ. ವಿಷಮ ವಿವಾಹದಿಂದ ಪತಿ-ಪತ್ನಿಯರಲ್ಲಿ ಮತೈಕ್ಯವಿರುವದಿಲ್ಲ; ಸಣ್ಣ ದೊಡ್ಡ ಕಾರಿ ಕಾರಿಗಳು ಇದ್ದೇ ಇರುತ್ತವೆ; ಸಂಸಾರದಲ್ಲಿ ವ್ಯವಸ್ಥೆಯಿರುವದಿಲ್ಲ; ಉಭ ಯತರಿಂದಲೂ ಅನನ್ವಿತ ಕಾರ್ಯಗಳು ಸಂಭವಿಸುತ್ತಿರುತ್ತವೆ; ಅವರಿಗೆ ನಾನಾ ಪ್ರಕಾರದ ಸಂಕಟಗಳು ಬಂದೇ ಬರುತ್ತವೆ. ಸಂತತಿಯು ಅಶಕ್ತ ವಾಗುವದರಿಂದ ಅದರ ಚಿಂತೆಯಲ್ಲಿಯೇ ಉಭಯತರು ಕಾಲಹರಣ ಮಾಡ ಬೇಕಾಗುತ್ತದೆ; ಅವರಿಗೆ ಈ ಪ್ರಪಂಚವು ಕಷ್ಟಮಯವಾಗಿ ತೋರುತ್ತದೆ. ಅವರಿಗೆ ಸಂಸಾರಿಕ ಅಪತ್ತಿನಿಂದ ಆತ್ಮಹತ್ಯ ಮಾಡಿಕೊಳ್ಳುವ ಪ್ರಸಂಗವೂ ಬರುತ್ತದೆ. ಈ ವಿಷಮ ವಿವಾಹದಿಂದ ನಾವಿಷ್ಟು ದುರ್ಗತಿಯನ್ನು ಹೊಂದಿ ದ್ದರೂ, ಎಷ್ಟೋ ದುರಾಗ್ರಹಿಗಳು ತಮ್ಮ ಹಟವನ್ನು ಬಿಡಲಿಕ್ಕೆ ಒಪ್ಪುವದಿಲ್ಲ. ಇದು ನಮ್ಮ ಸಮಾಜದ ಘನತರವಾದ ದೌರ್ಭಾಗ್ಯವೇ ಸರಿ.

ನಾಳೆ ಮುಂಜಾನೆ ಹತ್ತು ಹೊಡೆಯುವಾಗ್ಗೆ ಮಾಧವರಾಯನೊಡನೆ ತನ್ನ ಲಗ್ನವಾಯಿತೆಂದರೆ, ಮುಂದೆ ತನ್ನ ಸ್ಥಿತಿಯು ಏನಾದೀತೆಂಬ ದಾರುಣ ಶೋಕಾಕುಲ ವಿಚಾರದಿಂದ ವೇಣುವಿನ ಅವಸ್ಥೆಯು ತೀರ ಹುಚ್ಚಿಯ ಅವಸ್ಥೆಯಂತಾಗಿತ್ತು. ಅಂತಃಕರಣದೊಳಗಿನ ಭಯಂಕರ ದುರ್ಘಟಾಲೋಚನೆಯಿಂದ ಅವಳಿಗೆ ಬಾಹ್ಯಶರೀರದ ಸ್ಮೃತಿಯೇ ಇದ್ದಿಲ್ಲ. ಅವಳು ದುಃಖಾತಿರೇಕದಿಂದ ದೀರ್ಘ ನಿಶ್ವಾಸವನ್ನು ಬಿಡುತ್ತಿದ್ದರೂ, ಅವಳಿಗೆ ಅದು ಗೊತ್ತಾಗುತ್ತಿದ್ದಿಲ್ಲ. ಅವಳ ನೇತ್ರಗಳಿಂದ ಅಶ್ರು-ಬಿಂದುಗಳು ಸುರಿಯುತ್ತಿದ್ದರೂ ಅವು ಅವಳಿಗೆ ಕಾಣಿಸುತ್ತಿದ್ದಿಲ್ಲ. ಇಷ್ಟು ಅವಳು ವಿವಾಹ-ವಿಚಾರದಲ್ಲಿ ಮಗ್ನಳಾಗಿದ್ದಳು. ಅವಳಿಗೆ ಅನ್ನ, ನೀರು ಬೇಕಾಗಿದ್ದಿಲ್ಲ. ಅವಳು ವಿಶ್ವನಾಥರಾಯನ ಮನೆಯ ಜನರ ವಿಶೇಷವಾದ ಪ್ರತಿಬಂಧದಿಂದ ಹೇಗಾದರೂ ಮಾಡಿ ಒಂದೆರಡು ತುತ್ತು ಅನ್ನವನ್ನು ಉಣ್ಣುತ್ತಿದ್ದಳು. ಈ ವಿವಾಹ ಚಿಂತೆಯಿಂದ ವೇಣುವು ಕ್ಷಯರೋಗದಿಂದ ಪೀಡಿತಳಾದ ಹೆಂಗಸಿನಂತೆ ಕಾಣಿಸುತ್ತಿದ್ದಳು.

ಇಂದು ಸಂಧ್ಯಾಕಾಲದ ವೇಳೆಯಲ್ಲಿ ವಿಶ್ವನಾಥರಾಯನ ವಾಡೆಯೂ, ಮಂಟಪವೂ ಜನರ ಗದ್ದಲದಿಂದ ಶೋಭಿಸುತ್ತಿದ್ದವು. ವಧೂವರರ ಮಂಡಪವು ಒಂದೇ ಇದ್ದದರಿಂದ "ಕೆಲವು ಜನರು ಆಕಡೆ, ಕೆಲವು ಜನರು ಈಕಡೆ" ಎಂಬ ಭೇದಾಭೇದವಿದ್ದಿಲ್ಲ. ಈ ವೇಳೆಯಲ್ಲಿ ಅಕ್ಷತೆಯ ಮೆರವಣಿಗೆಯು ಹೊರಡುವದಿದ್ದದರಿಂದ ಪ್ರತಿಯೊಬ್ಬರು ಅಮೌಲ್ಯವಾದ ಬೆಲೆಯ ಪೋಷಾಕು ಹಾಕಿಕೊಂಡಿದ್ದರು. ಹೆಂಗಸರು ಮೈಮೇಲೆ ಹಾಕಿಕೊಳ್ಳಲಿಕ್ಕೆ ಅನುಕೂಲವಾದ ಸ್ಥಳದಲ್ಲೆಲ್ಲ ಆಭರಣಗಳನ್ನು ಹಾಕಿಕೊಂಡಿದ್ದರು. ತಾಶೆ, ಬಜಂತ್ರಿ, ಬ್ಯಾಂಡ ಮೊದಲಾದ ವಾದ್ಯಗಳ ಪ್ರಚಂಡ ಗರ್ಜನೆಯಿಂದ ಊರೆಲ್ಲ ಧಿಮಿಗುಟ್ಟಿತ್ತು. ಎರಡು ಸುಂದರವಾದ ಅಮೌಲ್ಯವಾದ ಬೆಲೆಯ ಕುದುರೆಗಳು ಭೂಷಣಾಲಂಕೃತವಾಗಿ ನಿಂತಿದ್ದವು. ಕಾಗದದ ಹೂವಿನ ಗಿಡಗಳ ತೋಟವೇ ಸಿದ್ಧವಾಗಿತ್ತು. ಕಲಾವಂತಿಣೀ ಅಪ್ಸರೆಯರಂತೆ ಚಿತ್ತಾಕರ್ಷಕವಾದ ಪೋಷಾಕು ಹಾಕಿಕೊಂಡು ವೇಶ್ಯಾ ಸ್ತ್ರೀಯರು ಸಿದ್ಧರಾಗಿ ನಿಂತಿದ್ದರು.

ಮೆರವಣಿಗೆಯ ಸಲುವಾಗಿ ಸಾವಿರಾರು ದೀವಿಗೆಗಳು ಸಿದ್ಧವಾಗಿದ್ದವು. ಈ ಪ್ರಕಾರ ಸರ್ವ ಸಿದ್ಧತೆಯಾದ ಮೇಲೆ ಈ ದೊಡ್ಡ ಮೆರವಣಿಗೆಯು

ತರತರದ ವಾದ್ಯಗಳೊಡನೆ ಹೊರಗೆ ಹೊರಟಿತು. ಸಾವಿರಾರು ಜನ ಸ್ತ್ರೀ ಪುರುಷರಿಂದಲೂ, ಸಾವಿರಾರು ಜನ ನವಕರ-ಚಾಕರರಿಂದಲೂ, ಸಾವಿರಾರು ಗಾಡಿ-ಕುದುರೆಗಳಿಂದಲೂ, ನೋಡಲಿಕ್ಕೆ ಬಂದ ಸಾವಿರಾರು ಜನರ ಸಂಚಯದಿಂದಲೂ ಆ ಮೆರವಣಿಗೆಗೆ ಬಳ್ಳೇ ಭವ್ಯ ಸ್ವರೂಪವು ಪ್ರಾಪ್ತವಾಗಿತ್ತು. ಸರ್ವರು ಈ ಅಭೂತಪೂರ್ವ ಮೆರವಣಿಗೆಯನ್ನು ನೋಡಿ ಧಕ್ಕಾಗಿ ಹೋದರು. ಈ ಎಲ್ಲ ಸಮಾರಂಭದ ಸಲುವಾಗಿ ವಿಶ್ವನಾಥರಾಯನಿಗೆ ಎಷ್ಟ್ಯೋ ಸಾಲವಾಗಿತ್ತು. ಈ ವೇಳೆಯಲ್ಲಿ ಎಲ್ಲ ಸಾಲವು ಕೂಡಿ ಐವತ್ತು ಸಾವಿರ ರೂಪಾಯಿಯಾಗಿತ್ತು. ಜಹಾಗೀರದಾರಸಾಹೇಬರು ತನ್ನ ದೊಡ್ಡಿಸ್ತನವನ್ನೂ, ತನ್ನ ಭರಭರಾಟಿಯನ್ನೂ ತೋರಿಸುವದಕ್ಕಾಗಿ ಇಷ್ಟು ಸಾಲವನ್ನು ಮಾಡಿದ್ದರು. ಜನರನ್ನು ಆಶ್ಚರ್ಯಗೊಳಿಸುವಂಥ ಅವನ ಮುಖ್ಯ ಹೇತುವು ಸಾಧಿಸಿದ್ದದರಿಂದ ಅವನಿಗೆ ಈ ಸಾಲದ ಸಲುವಾಗಿ ಸ್ವಲ್ಪವದರೂ ಚಿಂತೆಯಿದ್ದಿಲ್ಲ.

ಅವಂತೀಪುರವು ಅಷ್ಟೇನೂ ದೊಡ್ಡದಿದ್ದಿಲ್ಲ; ಆದರೆ ಗ್ರಾಮದ ಮನೆಗಳು ಅಲ್ಲಿಗೊಂದು ಇಲ್ಲಿಗೊಂದು ಇದ್ದದರಿಂದ ಮೆರವಣಿಗೆಯು ಬಳ್ಳೇ ರಂಗಾಯಿತು. ವಿಶ್ವನಾಥರಾಯನು ಬೇಕಂತ ಈ ಮೆರವಣಿಗೆಯು ವೇಣುವಿನ ಮನೆಯ ಮುಂದೆ ಹಾಯ್ದು ಹೋಗಬೇಕೆಂದು ನಿರ್ಣಯಿಸಿದ್ದನು. ಆ ಪ್ರಕಾರ ಸ್ವಲ್ಪ ವೇಳೆಯಾದ ಮೇಲೆ ಮೆರವಣಿಗೆಯು ವೇಣುವಿನ ಬಾಗಿಲದ ಮುಂದೆ ಬಂದಿತು. ಮನೆಯಲ್ಲಿ ಇಂದಿರಾಬಾಯಿಯೂ, ಗೋವಿಂದರಾಯನೂ, ಗೋವಿಂದರಾಯನ ಪತ್ನಿಯೂ, ಶ್ರೀಪಾದನೂ ಇದ್ದರು. ಇಂಥ ವಾದ್ಯಧ್ವನಿಯು ಯಾಕೆ ಆಗುತ್ತದೆಂಬುವದರ ಕಾರಣವು ಶ್ರೀಪಾದನ ಹೊರ್ತು ಉಳಿದವರೆಲ್ಲರಿಗೂ ಆಗಲೇ ತಿಳಿಯಿತು. ಶ್ರೀಪಾದನು ಸಣ್ಣ ಹುಡುಗನು, ಸ್ವಾಭಾವಿಕ ಉತ್ಸಾಹಪ್ರಿಯನು! ಅವನು ಆ ಮೆರವಣಿಗೆಯನ್ನು ನೋಡುವದರ ಸಲುವಾಗಿ ಸಹಜಿಕ ಉತ್ಸಾಹದಿಂದ ಹೊರಗೆ ಬಂದನು. ವೇಣುವಿನ ಮನೆಯ ಮುಂದೆ ಬೇಕಂತ ಮೆರವಣಿಗೆಯನ್ನು ನಿಲ್ಲಿಸಿ ಮಜಲು ಮಾಡಹತ್ತಿದರು. ಶ್ರೀಪಾದನಿಗೆ ಮನೆಯ ಮುಂದೆ ಅನಾಯಾಸವಾಗಿ ಆಟವು ಸಿಕ್ಕಿತು. ವೇಣುವಿನ ಮನೆಯು ಬಂದ ಕೂಡಲೆ ವಿಶ್ವನಾಥರಾಯನು ಇಬರು ಭಿಕ್ಷುಕರೊಡನೆ ಬಳ್ಳೇ ಶಿಸ್ತಿನಿಂದ ಮನೆಯಲ್ಲಿ ಹೋದನು.

ವಿಶ್ವನಾಥರಾಯನು ಗೋವಿಂದರಾಯನನ್ನು ಪರಿಪರಿಯಿಂದ ಪೀಡಿಸಿದ್ದರೂ ಗೋವಿಂದರಾಯನ ಅಂತರಾತ್ಮದಲ್ಲಿ ಕ್ಷಮಾಶೀಲಗುಣವು ನಾಶವಾಗಿದ್ದಿಲ್ಲ. ವಿಶ್ವನಾಥರಾಯನು ಒಳಗೆ ಬಂದ ಕೂಡಲೆ ಗೋವಿಂದರಾಯನು ಅವನ ಯೋಗ್ಯ ಆದರಸತ್ಕಾರವನ್ನು ಮಾಡಿ ಕೂಡ್ರಿಸಿಕೊಂಡನು. ವಿಶ್ವನಾಥರಾಯನ ಸಂಗಡ ಇದ್ದ ಉಪಾಧ್ಯಾಯರು ಅಥವಾ ಗ್ರಾಮ ಜೋಯಿಸರು "ವಿಶ್ವನಾಥರಾಯನ ಮೈದುನ ಮಾಧವರಾಯನ ಲಗ್ನವು ಇಂದಿರಾಬಾಯಿಯ ಪುತ್ರಿ ವೇಣುವಿನೊಡನೆ ನಾಳೆ ಪ್ರಾತಃಕಾಲದ ಅಷ್ಟ ಘಟಿಕೆಗೆ ಜರಗುವದು; ಕಾರಣ ಸಕುಟುಂಬ ಪರಿವಾರ ಬಂದು ಕಾರ್ಯಸಿದ್ಧಿ ಮಾಡಬೇಕು." ಎಂಬದಾಗಿ ಗರ್ಜನೆ ಮಾಡಿ ಗೋವಿಂದರಾಯನ ಕೈಯಲ್ಲಿ ಅಕ್ಷತೆಯನ್ನು ಕೊಟ್ಟನು. ಶಿವ ಶಿವ! ಎಷ್ಟು ಮಾನಭಂಗ! ಎಷ್ಟು ಅಪ್ರತಿಷ್ಠೆಯು!! ಎಷ್ಟು ದೀನರ ದುಃಖದ ಮೇಲೆ ದುಃಖ!!! ಆದರೂ ಧೈರ್ಯದಲ್ಲಿ ಪರ್ವತದಂತೆಯೂ, ಕ್ಷಮೆಯಲ್ಲಿ ಸಾಗರನಂತೆಯೂ ಇದ್ದ ಗೋವಿಂದರಾಯನು ವಿಶ್ವನಾಥರಾಯನು ಮಾಡಿದ ಅಪರಾಧಕ್ಕೆ ಸ್ವಲ್ಪವಾದರೂ ಸಿಟ್ಟಾಗಲಿಲ್ಲ. ತಿರುಗಿ ಶಾಂತತನದಿಂದ ಅವನು ಸರ್ವರಿಗೆ ತಾಂಬೂಲವನ್ನು ಕೊಟ್ಟು ನಿರೂಪ ಹೇಳಿದನು. ಆದರೆ ಇದಕ್ಕೆ ಆ ದುಷ್ಟನೂ, ಚಾಂಡಾಲನೂ ಆದ ವಿಶ್ವನಾಥರಾಯನು ದಂಭವನ್ನು ತೋರಿಸುತ್ತ ಅಂದದ್ದೇನಂದರೆ:—

"ಗೋವಿಂದರಾವ, ಇಂದಿರಾಬಾಯಿ, ಲಗ್ನಕ್ಕೆ ಬರಲಿಕ್ಕೆ ಬೇಕು. ಯಾವ ಮಾಧವರಾಯನಿಗೆ ನೀವು ವೇಣುವನ್ನು ಕೊಡಲಿಕ್ಕೆ ಅಸಮ್ಮತಿಯನ್ನು ತೋರಿಸಿದಿರೋ, ಅದೇ ಮಾಧವರಾಯನ ಸಂಗಡ ವೇಣುವಿನ ಲಗ್ನವಾಗುವದದೆ, ಇಂಥ ಪ್ರಸಂಗದಲ್ಲಿ ನೀವು ಅಗತ್ಯವಾಗಿ ಬರಲಿಕ್ಕೆ ಬೇಕು. ವೇಣುವನ್ನು ಕೇಳಲಿಕ್ಕೆ ಬಂದಾಗ್ಗೆ ಉಪಹಾಸ ಮಾಡಿ ನನಗೆ "ಇಲ್ಲ" ವೆಂದು ಹೇಳಿದಿರಿ. ಹಾಗೆಯೇ 'ನಮ್ಮ ಸುವರ್ಣಪ್ರಾಯವಾದ ಹುಡುಗೆಯನ್ನು ಆ ಕಾಳ್ಯಾ ಮಾಧವನಿಗೆ ಕೊಡುವದಿಲ್ಲ" ವೆಂದು ಅಂದಿರಿ. ಆದರೆ ಈಗ ಅದೇ ಇದ್ದಲಿಯ ಗೊಂಬೆಯೊಡನೆ ಆ ನಿಮ್ಮ ಸುವರ್ಣದ ಪುತ್ಥಳಿಯ ವಿವಾಹವಾಗುವದು. ಕಾರಣ ಅಗತ್ಯವಾಗಿ ತಮಗೆ ನಿಮಂತ್ರಣ ಮಾಡಿರುತ್ತದೆ.

ಈ ಪ್ರಕಾರ ವಿಶ್ವನಾಥರಾಯನು ಮನಸ್ಸಿಗೆ ಬಂದಂತೆ ಮಾತಾಡಿದನು; ಆದರೆ ಆ ಸಂಬಂಧವಾಗಿ ವಿಶ್ವನಾಥರಾಯನಿಗೆ ಗೋವಿಂದರಾಯನ ಕಡೆಯಿಂದಲೂ ಅಥವಾ ಇಂದಿರಾಬಾಯಿಯ ಕಡೆಯಿಂದಲೂ ಯಾವ ಪ್ರಕಾರದ ಪ್ರತ್ಯುತ್ತರವು ಸಿಗಲಿಲ್ಲ. ಇದರಿಂದ ವಿಶ್ವನಾಥರಾಯನಿಗೆ ಅಧಿಕವಾಗಿ ಸಂತಾಪವು ಬಂದಿತು. ಆದರೆ ಮಾತಾಡಲಿಕ್ಕೆ ಸವಡಿಲ್ಲವಾದ್ದರಿಂದ ವಿಶ್ವನಾಥರಾಯನ ಮೂರ್ತಿಯು ಮನೆಯ ಹೊರಗೆ ಬಿದ್ದಿತು; ಮತ್ತು ಮೆರವಣಿಗೆಯು ಅಷ್ಟೈಶ್ವರ್ಯದೊಡನೆ ಮುಂದಕ್ಕೆ ಹೊರಟು ಹೋಯಿತು.



## ೭ನೆಯ ಪ್ರಕರಣ—ವಿವಾಹ.

ವಿಶ್ವನಾಥರಾಯನ ಮೆರವಣಿಗೆಯು ಮೆರೆಯುತ್ತ ಮೆರೆಯುತ್ತ ಸುಶೋಭಿತವಾದ ಮಂಟಪಕ್ಕೆ ಬಂದು ನಿಂತಿತು. ಮಂಟಪದ ಶೋಭೆಯು ಅಗಮ್ಯವಾಗಿತ್ತು. ಝುಮರು, ವಿದ್ಯುದ್ದೀಪಿಕೆಗಳಿಂದ ಆ ಮಂಟಪವು ಶೋಭಾಯಮಾನವಾಗಿತ್ತು. ಮಂಟಪದಲ್ಲಿ ಗಾದೆ, ಲೋಡು, ತೆಕ್ಕೆ, ಬಣ್ಣದ ಜಮಖಾನು, ರತ್ನಗಂಬಳಿ, ಖುರ್ಚಿ, ಟೇಬಲ್, ಹುಲಿಯ ಚರ್ಮ ಮೊದಲಾದವುಗಳ ವ್ಯವಸ್ಥೆಯು ಚನ್ನಾಗಿತ್ತು. ಅವರವರ ಯೋಗ್ಯತೆಯಂತೆ ಸರ್ವರೂ ತಂತಮ್ಮ ಸ್ಥಾನಾಪನ್ನರಾದ ಮೇಲೆ ವೇಶ್ಯೆಯರ ಹಾಡು-ಕುಣಿತಗಳು ಪ್ರಾರಂಭವಾದವು. ಕಾರಂಜಿಯಲ್ಲಿಯು ಬೇರೆ ಬೇರೆ ಬಣ್ಣದ ನೀರೂ ಹಾರಹತ್ತಿತು. ಬಹಳ ಹೇಳುವದೇನು! ಆ ಕಾರಂಜಿಯು ನೀರಿನ ಹಾರುವಿಕೆಯು ವೇಶ್ಯೆಯರ ಸಂಗೀತದ ಸ್ಪರ್ಧೆಯನ್ನು ಮಾಡುತ್ತಿರುವಂತೆ ಕಾಣಿಸುತ್ತಿತ್ತು. ಈ ಎಲ್ಲ ವಿಲಕ್ಷಣ ದರ್ಶನೀಯುತ್ಸವದಿಂದ ಎಲ್ಲ ಜನರು ಚಿತ್ರದಂತೆ ತಟಸ್ಥರಾಗಿದ್ದರು. ಎಷ್ಟೋ ವೇಳೆಯವರೆಗೆ ನಾಚುರಂಗು ಆದ ಮೇಲೆ ಯಾವತ್ತೂ ಜನರನ್ನು ಅತ್ತರ-ಗುಲಾಬ-ಪಾನ-ಸುಪಾರಿಗಳಿಂದ ಸತ್ಕರಿಸುವ ಸಮಾರಂಭವು ಜರುಗಿತು. ಬಳಿಕ ಮೆರವಣಿಗೆಯ ಸಮಾರಂಭವು ಪರಿಸಮಾಪ್ತವಾಯಿತು. ನಂತರ ಆಪ್ತೇಷ್ಟರು ಭೋಜನಕ್ಕೆ ಕುಳಿತರು. ಅಂದು ನಾನಾಪ್ರಕಾರದ ಪಕ್ವಾನ್ನವನ್ನು ಮಾಡಿದ್ದರು. ಊಟವಾದ ಕೆಲಹೊತ್ತಿನ ಮೇಲೆ ಎಲ್ಲ ಜನರು ನಿದ್ರಾಸುಖವನ್ನು ಭೋಗಿಸಹತ್ತಿದರು.

ಸರ್ವರೂ ನಿದ್ರಾದೇವತೆಯ ಸ್ವಾಧೀನರಾಗಿದ್ದರು. ಮಿತಿಮೀರಿ ರಾತ್ರಿಯಾಗಿತ್ತು. ಪೂರ್ಣವಾಗಿ ಅಂಧಕಾರವು ಪಸರಿಸಿದ್ದದರಿಂದ, ವಸುಂಧರೆಯು ಕೃಷ್ಣವಸನವನ್ನು ಪರಿಧಾನ ಮಾಡಿಕೊಂಡಂತೆ ಕಾಣಿಸುತ್ತಿದ್ದಳು. ಈ ವೇಳೆಯಲ್ಲಿ ಸೃಷ್ಟಿಗೆ ಸಂಪೂರ್ಣವಾಗಿ ಸ್ತಬ್ಧತೆಯು ಪ್ರಾಪ್ತವಾಗಿತ್ತು. ಆಕಾಶದಲ್ಲಿ ನಕ್ಷತ್ರಗಳು ಲಕಲಕ ಮಿನುಗುತ್ತಿದ್ದವು. ಹಗಲೆಲ್ಲ ದಣಿದ ಜನರು ಗಾಢನಿದ್ರಾಸುಖವನ್ನು ಭೋಗಿಸಹತ್ತಿದ್ದರು. ಸರ್ವ ಪ್ರಾಣಿಕೋಟಿಯು ವಿಶ್ರಾಂತಿ ಸುಖದ ಲಾಭವನ್ನು ತಕ್ಕೊಳ್ಳುವದರಲ್ಲಿ ಮಗ್ನವಾಗಿತ್ತು. ಅಹಹ! ಎಷ್ಟು ಶಾಂತ ವೇಳೆಯು! ಆದರೆ ನಮ್ಮ ವೇಣುವಿಗೆ ಆ ಪ್ರಶಾಂತ ವೇಳೆಯಿಂದ ಏನು ಉಪಯೋಗ! ಇಂಥ ಶಾಂತ ವೇಳೆಯಲ್ಲಿ ಅನಾಥಳಾದ ವೇಣುವು ದಾರುಣವಾದ ವಿಪದ್ವಿಚಾರವನ್ನು ಮಾಡುತ್ತ ಕುಳಿತಿದ್ದಳು. ಅವಳ ಅವಸ್ಥೆಯು ಬಹಳ ಕಠಿಣವಾದದ್ದಿತ್ತು. ಅವಳ ನೇತ್ರಗಳಿಂದ ಒಂದೇ ಸವನೆ ಅಶ್ರುಗಳು ಸುರಿಯುತ್ತಿದ್ದವು. ಇಂಥ ಬಹು ಮನೋಹರವಾದ ಜಗತ್ತು ಅವಳ ಕಣ್ಣಿಗೆ ಶೂನ್ಯರೂಪವಾಗಿ ಕಾಣಿಸುತ್ತಿತ್ತು. ಅವಳ ಸರ್ವಾಶೆಯು ನಿಷ್ಫಲವಾಗಿ ಅವಳು ಹತಾಶೆಯಾಗಿದ್ದಳು. ಅವಳು ಆ ಕಾರಾಗಾರದಲ್ಲಿ ಅಳುತ್ತ ಕುಳಿತಿದ್ದಳು. ಅವಳ ಹತ್ತರ ಯಾರೂ ಇದ್ದಿಲ್ಲ. ಅವಳ ಕಡೆಗೆ ಯಾರ ಲಕ್ಷ್ಯವೂ ಇದ್ದಿಲ್ಲ. ಆ ಆಶ್ರಯ ಹೀನಳಾದ ಅನಾಥೆಯು ಹಗಲಿರುಳು ಆ ಕೈದಿನ ಮನೆಯಲ್ಲಿ ಪ್ರಾರಬ್ಧಗತಿಯ ಬಗ್ಗೆ ವಿಚಾರ ಮಾಡುತ್ತಿದ್ದಳು. ವೇಣುವಿನ ಪೂರ್ವದ ಆ ಭುವನ-ಮೋಹಿನೀ-ಸೌಂದರ್ಯವು ನಾಶವಾಗಿತ್ತು. ಅವಳ ಅಪೂರ್ವ ಶರೀರಕಾಂತಿಯು ಪೂರ್ಣವಾಗಿ ವಿರುದ್ಧವಾಗಿತ್ತು. ಅವಳ ಪೂರ್ವಶ್ರೀಯು ಲೋಪವಾಗಿ ಹೋಗಿತ್ತು. ವಿಶ್ವನಾಥರಾಯನ ಆ ಕಾರಾಗಾರದಲ್ಲಿ ಬಿದ್ದ ಹದಿನೈದು ದಿವಸದೊಳಗಾಗಿಯೇ ಅವಳು ಶಕ್ತಿಹೀನಳೂ, ರೂಪಹೀನಳೂ, ಕಾಂತಿಹೀನಳೂ ಆಗಿದ್ದಳು. ಅವಳ ಪವಿತ್ರ ಹೃದಯವು ದುಃಖಮಯವಾಗಿತ್ತು. ತನ್ನ ಮಾತೆಯು ಎಲ್ಲಿದ್ದಾಳು, ಶ್ರೀಪಾದನು ಹೇಗಿದ್ದಾನು, ಕೃಷ್ಣರಾಯನು ಏನು ಮಾಡುತ್ತಿದ್ದಾನು, ಎಂಬೀ ವಿಷಯವಾಗಿ ಅವಳ ವಿಚಾರವು ಅವಿಶ್ರಾಂತವಾಗಿ ನಡೆದಿತ್ತು. ಇವೆಲ್ಲವುಗಳಿಗಿಂತ ತನ್ನ ಲಗ್ನದ ಸಲುವಾಗಿ ಅವಳಿಗೆ ಜೀವವು ಬೇಡಾಗಿತ್ತು. ಬಲಾತ್ಕಾರದಿಂದ ಪಶುಪ್ರಾಯನಾದ ವಿಶ್ವನಾಥರಾಯನು ಕೋಮಲಾಂಗಿ

ಯಾದ ನನ್ನನ್ನು ಕಲ್ಲಿದ್ದಲಿ ಗೊಂಬೆಯಂತಿರುವ ಮಾಧವನ ಕೊರಳಿನಲ್ಲಿ ಕಟ್ಟುವದರೆ ಇದಕ್ಕೆ ಉಪಾಯವೇನೆಂದು ಅವಳು ಆ ದಯಾಮಯ ಈಶ್ವರನನ್ನು ಅನನ್ಯಭಾವದಿಂದ ಬೇಡಿಕೊಳ್ಳುತ್ತಿದ್ದಳು. ಆ ಭಯಂಕರ ಪ್ರಸಂಗದಿಂದ ಮುಕ್ತ ಮಾಡುವದಕ್ಕಾಗಿ ಆ ಕೃಪಾಘನನನ್ನು ಅಂತಃಕರಣಪೂರ್ವಕವಾಗಿ ಪ್ರಾರ್ಥನೆ ಮಾಡುತ್ತಿದ್ದಳು. ಹರಹರ! ದರಿದ್ರೆ, ನಿರಾಶ್ರಯೆ, ನಿಷ್ಪಾಪೆಯಾದ ವೇಣುವಿನ ಮೇಲೆ ಎಂಥ ಘನತಮ ಭೀಕರ ಪ್ರಸಂಗ!!

ವೇಣುವು ವಿಶ್ವಸಾಕ್ಷಿಯಾದ ವಿಶ್ವೇಶ್ವರನನ್ನು ಪ್ರಾರ್ಥನೆ ಮಾಡುತ್ತ ಕುಳಿತಿರಲಿಕ್ಕೆ ರಾತ್ರಿಯು ಮುಗಿಯುತ್ತ ನಡೆಯಿತು. ಮೂರು ಹೊಡೆಯಿತು. ಬೆಳಗಿನ ಗಾಳಿಯು ಬೀಸಹತ್ತಿತು. ಮನೆಯ ಯಜಮಾನರು ತೀವ್ರ ಹೊಲಕ್ಕೆ ಹೋಗುವವರೆಂದು ಒಕ್ಕಲಿಗರ ಹೆಂಗಸರು ಬೀಸಲಿಕ್ಕೆ ಎದ್ದರು. ನಾಲ್ಕು ಹೊಡೆದ ಮೇಲೆ ವಿಶ್ವನಾಥರಾಯನ ಮನೆಗೆ ಬಂದ ಆಚಾರ್ಯರು ಮೊದಲಾದವರು ಕಣ್ಣು ಒರೆಸುತ್ತ ಮೇಲಕ್ಕೆದ್ದರು. ರಾತ್ರಿಯಲ್ಲಿ ಭೋಜನದ ಮೇಲೆ ಕೈ ತೋರಿಸಿದ ಜನರಿಗೆ ಅಜೀರ್ಣತೆಯಿಂದ ನಸುಕಿನಲ್ಲಿಯೇ ಎಚ್ಚರವಾಯಿತು. ಹಳ್ಳಿಗಳಲ್ಲಿ ಶೌಚಕೂಪದ ಸುಲಭತೆಯಿರುವದಿಲ್ಲ; ಆದರೆ ವಿಶ್ವನಾಥರಾಯನು ಬೇಕಂತಾ ವಾಡೆಯಿಂದ ಕೆಲವು ಅಂತರದ ಮೇಲೆ ಈ ವ್ಯವಸ್ಥೆಯನ್ನು ಮಾಡಿಸಿದ್ದನು. ಆ ಭಾಗಕ್ಕೆ ನಸುಕಿನಲ್ಲಿ ಎದ್ದ ಜನರೆಲ್ಲ ಭರಾಭರಾ ಶೌಚಕೂಪ ವಿಧಿಯ ಸಲುವಾಗಿ ಹೋಗಹತ್ತಿದರು; ಆದರೆ ಐವತ್ತು ಅರವತ್ತು ಹೆಜ್ಜೆ ಹೋಗಿರಲಿಕ್ಕಿಲ್ಲ, ಆಗ ಅವರಿಗೆ ಕರೇ ಇಜಾರವನ್ನೂ, ಕಳೇ ಡಗಲಿಯನ್ನೂ, ಕರೇ ಟೊಪ್ಪಿಗೆಯನ್ನೂ ಹಾಕಿಕೊಂಡು ನಿಂತಂಥ ಜನರು ಕಾಣಿಸಹತ್ತಿದರು. ಅವರು ಗಟ್ಟಿಯಾಗಿ:—

ಶಿಪಾಯಿಗಳು:—"ಏಹೋ, ಕಿದರ ಜಾತೇ ಹೋ? ಚಲೋ ಪಿಛೆ ಜಾವ" ಎಂದಂದರು.

ಶಿಪಾಯಿಗಳ ಭಯಂಕರ ಗರ್ಜನೆಯನ್ನು ಕೇಳಿ, ಎಷ್ಟೋ ಅಂಜುಬುರುಕರು ಧೋತರವನ್ನು ಹೊಲಸು ಮಾಡಿಕೊಂಡರು. ಅದರಲ್ಲಿ ಧೈರ್ಯವುಳ್ಳವರು ಸ್ವಲ್ಪ ಮುಂದಕ್ಕೆ ಬಂದು:—"ಏನಿರಿ ಸಾಹೇಬರೇ, ನಮ್ಮನ್ನು ಯಾಕೆ ಮುಂದಕ್ಕೆ ಹೋಗಗೊಡುವದಿಲ್ಲ" ಎಂದದರು.

ಈ ಪ್ರಶ್ನೆಗೆ ಶಿಪಾಯಿಗಳು ಏನೂ ಉತ್ತರಗೊಡಲಿಲ್ಲ. ವಿಶ್ವನಾಥರಾಯನ ವಾಡೆಯ ಸುತ್ತಲೂ ಶಿಪಾಯಿಗಳ ಸಂಚಯವು ಸಂದಟಿತವಾಗಿ ನಿಂತಿತ್ತು. ಇನ್ನೂರು ಪೋಲೀಸ ಶಿಪಾಯಿಗಳೂ, ಎಂಟು-ಹತ್ತು ಸವಾರರೂ, ಜಮಾದಾರರೂ, ಫೌಜದಾರರೂ, ಇನಸ್ಪೇಕ್ಟರರೂ ಹಾಜರಿದ್ದರು. ಈ ಶಿಪಾಯಿಗಳು ಹೊರಗಿನ ಜನರನ್ನು ಒಳಗೂ, ಒಳಗಿನ ಜನರನ್ನು ಹೊರಗೂ ಹೋಗಗೊಡುತ್ತಿದ್ದಿಲ್ಲ. ಜಹಾಗೀರದಾರ ಸಾಹೇಬರ ಲಗ್ನವಾದ್ದರಿಂದ ಇಷ್ಟು ಮಂದಿ ಶಿಪಾಯಿಗಳು ಬಂದೋಬಸ್ತಿನ ಸಲುವಾಗಿ ಬಂದಿದ್ದಾರೆಂದು ಶೌಚಕೂಪಕ್ಕೆ ಹೋದ ಜನರು ತರ್ಕಿಸಿದರು. ಪೋಲಿಸ ಶಿಪಾಯಿಗಳು ಬಂದಿದ್ದಾರೆಂಬದನ್ನು ಕೇಳಿದಾಕ್ಷಣಕ್ಕೆ ವಿಶ್ವನಾಥರಾಯನ ಎದೆಯೊಡೆಯಿತು. ಈ ವೇಳೆಯಲ್ಲಿ ಮಾಡಬೇಕಾದದ್ದು ಅವನಿಗೆ ತಿಳಿಯಲಿಲ್ಲ. ಹಾಗೂ ಹೀಗೂ ಧೈರ್ಯಮಾಡಿ, ಅವನು ಧೋಂಡೀರಾಜ-ಮಾಧವರನ್ನು ಸಂಗಡ ಕರಕೊಂಡು ಇನಸ್ಪೆಕ್ಟರ ಸಾಹೇಬರ ಬಳಿಗೆ ಬಂದು ನಮಸ್ಕಾರ ಮಾಡಿ ಅವರಿಗೆ:—

ವಿಶ್ವ:—"ನನ್ನ ಮನೆಯಲ್ಲಿ ಇಂದು ಶುಭಕರವಾದ ಲಗ್ನವದೆ. ತಾವು ಬಂದದ್ದಕ್ಕೆ ಸಂತೋಷವಾಯಿತು. ಕಲೆಕ್ಟರ ಸಾಹೇಬರೂ ಬರುವವರಿದ್ದಾರೆ. ವಾಡೆಯಲ್ಲಿ ದಯಮಾಡಿಸಿರಿ. ನಾನು ಇಳಿಯುವ ವ್ಯವಸ್ಥೆ ಮಾಡುತ್ತೇನೆ. ಸರ್ವರ ಭೋಜನ ವ್ಯವಸ್ಥೆಯನ್ನು ಮಾಡುತ್ತೇನೆ. ಅಲ್ಲದೆ ತಮ್ಮ ಮನಸ್ಸನ್ನೂ ಆನಂದಪಡಿಸುತ್ತೇನೆ."

ವಿಶ್ವನಾಥರಾಯನು ಕಡೆಯ ವಾಕ್ಯವನ್ನು ಬಳ್ಳೇ ಮಾರ್ಮಿಕತನದಿಂದ ಉಚ್ಚರಿಸಿದ್ದನು. ಆದರೆ ಇನಸ್ಪೇಕ್ಟರ ಸಾಹೇಬರು ಪರರ ಪ್ರಾಷಾಣಕ್ಕೆ ಕೈಯೊಡ್ಡದವರಾದ್ದರಿಂದ ಆ ಕಡೆಗೆ ತುಚ್ಛೀಕರಿಸಿದರು.

ಇನ:—"ತಮ್ಮ ಹೆಸರು ವಿಶ್ವನಾಥರಾವ ಹೌದೇನು? ನಿಮ್ಮ ಮನೆಯಲ್ಲಿ ಯಾರ ಲಗ್ನವದೆ?"

ವಿಶ್ವ:—"ಹೌದು, ಇದೇ ನಮ್ಮ ಮೈದುನ ಮಾಧವರಾಯನದು."

ಇನ:—"ತಮ್ಮ ಮಗನಾದ ಧೋಂಡೀರಾಜನು ಎಲ್ಲಿದ್ದಾನೆ?"

ವಿಶ್ವ:—"ತಮ್ಮ ಎದುರಿನಲ್ಲಿಯೇ ಇದ್ದಾನೆ, ಸಾಹೇಬ."

ಮೂವರ ಪರಿಚಯವಾದ ಕೂಡಲೆ ಇನಸ್ಪೆಕ್ಟರರು ಜಮಾದಾರರಿಗೆ:—

" ಜಮಾದಾರ, ಈ ಮೂವರು ಆರೋಪಿಗಳು ಇಲ್ಲಿಯೇ ಇದ್ದಾರೆ. ಇವರಿಗೆ ಕೈದು ಮಾಡಿ, ಬೋಟಿನ ಮೇಲೆ ತಕ್ಕೊಂಡು ನಡೆ." ಎಂದಂದರು.

ಅಪ್ಪಣೆಯಂತೆ ಜಮಾದಾರನು ಮೂವರನ್ನೂ ಕೈದು ಮಾಡಿಕೊಂಡು ಬೀದಿಯನ್ನು ತೆರವು ಮಾಡಿಸಿದನು. ಪೋಲೀಸರ ಕೆಲಸವು ಮುಗಿಯುತ್ತಲೇ ಅವರು ವಾದ್ಯಗಳನ್ನು ಬಾರಿಸುತ್ತ ಹೊರಟು ಹೋದರು. ವಿಶ್ವನಾಥರಾಯನಲ್ಲಿಯ ಜನರು ಭರಾಭರಾ ಹೊರಗೆ ಹೋಗಹತ್ತಿದರು. ಎರಡು ದುಡ್ಡಿನಸಲುವಾಗಿ ಬಂದ ಭಟ್ಟ-ಭಿಕ್ಷುಕರು ಮೋರೆ ವಣಗಿಸಿಕೊಂಡು ಹೊರಗೆ ಹೊರಟು ಹೋದರು. ಆಚಾರ್ಯರು, ವಾಲಗದವರು ತಂತಮ್ಮ ಮಾರ್ಗವನ್ನು ಶೋಧಿಸಹತ್ತಿದರು. ರಾಧಾಬಾಯಿಯು ಆಕ್ರೋಶವನ್ನು ಮಾಡುತ್ತ ಪೋಲೀಸರಿಗೆ ಬಯ್ಯಲಾರಂಭಿಸಿದಳು. ಸಾವಿರಾರು ಜನರ ಗದ್ದಲದಿಂದ ತುಂಬಿದ ಆ ವಾಡೆಯೂ, ಆ ಮಂಟಪವೂ ಸ್ವಲ್ಪ ವೇಳೆಯಲ್ಲಿ ಸರ್ವ ನಿರ್ಜನವಾಯಿತು.

ಸೂರ್ಯೋದಯವಾಯಿತು. ವೇಣುವು ಕಾರಾಗಾರದಲ್ಲಿ ಚಿಂತಿಸುತ್ತ ಕುಳಿತಿದ್ದಳು. ಹೊರಗೆ ಶಿಪಾಯಿಗಳ ವಾದ್ಯರವವಾದ ಕೂಡಲೆ ಅವಳ ಹೃದಯವು ಕಂಪಿಸಿತು. ಲಗ್ನಕ್ಕಾಗಿ ಬಂದ ಬ್ಯಾಂಡು ಬಾರಿಸಹತ್ತಿತೆಂದು ಅವಳಿಗೆ ತೋರಿತು. ತನ್ನ ಆಶೆಗೆ ನೀರು ಬಿಡುವ ಕಾರ್ಯವು ಸಮೀಪಿಸಿತೆಂದು ಅವಳು ಗದಗದ ನಡುಗಹತ್ತಿದಳು. ಅವಳ ಕೃಷ್ಣವರ್ಣದ ಕೇಶಗಳು ಬೆನ್ನ ಮೇಲೆ ಅವ್ಯವಸ್ಥಿತವಾಗಿ ಪಸರಿಸಿದ್ದವು. ಅತ್ತತ್ತು ಅವಳ ಕಣ್ಣುಗಳು ಕೆಂಪಗಾಗಿದ್ದವು; ಶರೀರವು ನಿಸ್ತೇಜವಾಗಿತ್ತು; ವಸ್ತ್ರಗಳು ಮಲಿನವಾಗಿದ್ದವು. ಅವಳು ದುಃಖದ ದೀರ್ಘ ಶ್ವಾಸವನ್ನು ಬಿಟ್ಟು:—" ಹೇ ಕರುಣಾನಿಧೆ, ದಯಾಘನಾ, ಈ ಕಷ್ಟಮಯ ಜೀವಿತದಿಂದಾದರೂ ಏನು ಉಪಯೋಗ? ಪವಿತ್ರ ಸುಖದ ಪ್ರಾಪ್ತಿಯಿಲ್ಲದಿರುವ ಈ ಶರೀರವನ್ನು ಈಗ ಇಡುವದಾದರೂ ಯಾತಕ್ಕೆ? ಕಡೆಗೆ ಆಶೆಯೆಲ್ಲ ನಿರಾಶೆಯಾಯಿತು. ಇಂದು ಬಿಡುಗಡೆಯಾದೀತು, ನಾಳೆ ಬಿಡುಗಡೆಯಾದೀತು ಹೀಗೆ ಅನ್ನುತ್ತ ಅನ್ನುತ್ತ ಲಗ್ನವು ಘಟಕೆಗೆ ಬಂದಿತು! ಹೊರಗೆ ವಾಜಂತ್ರಿಗಳು ಬಾರಿಸಲಾರಂಭಿಸಿದವು!! ಇನ್ನು ನಾನು ಉಳಿಯುವದು ಹೇಗೆ!!! ದೇವಾ, ಇದೇ ಏನು ನಿನ್ನ ನ್ಯಾಯ? ಈ ಅನಾಥಳ ಮೇಲೆ ಆಗತಕ್ಕ ಬಲಾತ್ಕಾರದ ಕಾರ್ಯವು ನಿನಗೆ

ಕಾಣಿಸುವದಿಲ್ಲವೇ? ಕೃಷ್ಣರಾವ, ನೀನು ನಿಜವಾಗಿ ಮೃತಪಟ್ಟೆಯೋ ಹೇಗೆ? ನಿಜವಾಗಿ ನನ್ನಂತೆಯೇ ನಿನಗೆ ಏನಾದರೂ ಪ್ರತಿಬಂಧವು ಆಗಿರಬಹುದು. ಇಲ್ಲವಾದರೆ ನೀನು ನನ್ನನ್ನು ಎಂದೂ ಬಿಡಿಸದೆ ಇರುತ್ತಿದ್ದಿಲ್ಲ. ಕೃಷ್ಣರಾವ, ಈ ದುಷ್ಟನು ನನ್ನನ್ನು ಕೈದಿನಲ್ಲಿ ಹಾಕಿದಂತೆ ನಿನ್ನನ್ನು ಹಾಕಿರುವನೋ ಹೇಗೆ? ಈಶ್ವರಾ, ನನ್ನ ಕೃಷ್ಣರಾಯನನ್ನು ಸುಖದಿಂದ ಇಡು. ಕೃಷ್ಣರಾವ, ನಾನು ಮೊದಲು ಈ ಬೋಡಿ ಬಾಯಿಯಿಂದ ಅಂದಂತಾಯಿತು. ನಿನ್ನ ಪವಿತ್ರ ಚರಣದ ದರ್ಶನವು ಆಗಬಾರದೆಂದು ನನ್ನ ಹಣೆಯಲ್ಲಿ ಬರೆದದೆ. ಕೃಷ್ಣರಾವ, ಈ ಲೋಕದಲ್ಲಿ ಇಲ್ಲವಾದರೆ ಇಲ್ಲ, ಪರಲೋಕದಲ್ಲಿಯಾದರೂ ಈ ವೇಣುವನ್ನು ಸ್ವೀಕರಿಸು. ನಿನ್ನ ಸರ್ವಾಂಗ-ಸುಂದರ ಮೂರ್ತಿಯನ್ನು ಅಂತಃಕರಣದಲ್ಲಿ ಇಟ್ಟುಕೊಂಡು, ನಿನ್ನ ಚರಣದಲ್ಲಿ ಲೀನವಾಗಿ ನಾನು ಈ ಕಷ್ಟಮಯ ಜಗತ್ತನ್ನು ತ್ಯಾಗ ಮಾಡುತ್ತೇನೆ."

ಹೀಗನ್ನುತ್ತ ವೇಣುವು ಆ ಕೋಣೆಯಲ್ಲಿದ್ದ ಕಲ್ಲಿನ ಗೋಡೆಗೆ ಜೋರಿನಿಂದ ತಲೆಯನ್ನು ಹಾಯಿಸಿದಳು. ಅದರಿಂದ ವೇಣುವು ಮೂರ್ಛಿತಳಾಗಿ ಭೂಮಿಯ ಮೇಲೆ ಪ್ರೇತವತ್ ಬಿದ್ದಳು. ಅದೇ ಆ ಕೋಣೆಯಲ್ಲಿ ಕೃಷ್ಣರಾಯನು ಬಂದನು; ಪ್ರೇತವತ್ ಬಿದ್ದ ವೇಣುವನ್ನು ನೋಡಿ ಅವನು ಗಟ್ಟಿಯಾಗಿ "ಹಾಯ ಹಾಯ" ಅನ್ನುತ್ತ ಅರವುದಪ್ಪಿ ಬಿದ್ದನು!



## ೯ನೆಯ ಪ್ರಕರಣ—ಮಾತೆ.

ಮಾತೆಯ ದೊಡ್ಡಸ್ತಿಕೆಯನ್ನು ವರ್ಣಿಸಲಿಕ್ಕೆ ಮಾನವೀ-ಜಿಹ್ವೆಯು ತೀರ ಅಸಮರ್ಥವಾದದ್ದೇ ಸರಿ. ಸುಮಾತೆಯ ಯೋಗ್ಯತೆಯನ್ನು ಸಾದ್ಯೋಪಾಂತ ಲಿಖಿಸಲಿಕ್ಕೆ ಈಶ್ವರೀ ಪ್ರಸಾದದ ಲೆಕ್ಕಣಿಕೆಯೇ ಬೇಕು. ಮಾತೆಯ ಗುಣಾನುವಾದವನ್ನು ಹಾಡಲಿಕ್ಕೆ ವಾಗ್ದೇವಿಗೂ ಕೂಡ ಧೈರ್ಯವಾಗುವದಿಲ್ಲ. ಅಂಥ ಮೇಲೆ ನಮ್ಮಂಥ ಲೇಖಕರು ಆ ಪ್ರಯತ್ನವನ್ನು ಮಾಡಿ ವಾಚಕರ ಉಪಹಾಸಕ್ಕೆ ಮಾತ್ರ ಪಾತ್ರರಾಗಬೇಕಾಗುವದು. ಸಂತಶ್ರೇಷ್ಠ ತುಕಾರಾಮನು ಅನಂತಕೋಟಿ ವಿಶ್ವಪಾಲಕನಿಗೆ "ವಿಠಾಬಾಯಿ ಮಾವುಲಿ" ಎಂಬ ಉಪಮೆಯನ್ನು ಕೊಟ್ಟಿರುವನು. ಇದರಿಂದ 'ಮಾವುಲಿ' ಎಂಬ

ಶಬ್ದದಲ್ಲಿ ಎಷ್ಟು ಚಮತ್ಕಾರವು ಗರ್ಭಿತವಾಗಿರುತ್ತದೆಂಬುವದು ಸಹಜ ಕಲ್ಪನೆಯಲ್ಲಿ ಬರುವಂತಿದೆ. ರಾಷ್ಟ್ರೀಯ ವೀರಸಂತ ರಾಮದಾಸರೂ 'ರಮಾಬಾಯಿ' ಎಂದು ಈಶ್ವರನಿಗೆ ಉಪಮೆಯನ್ನು ಕೊಟ್ಟು ಸ್ತೋತ್ರ ಮಾಡಿರುವರು. ಸಾಧುಸಂತರು ಭಗವಂತನಿಗೆ ಮಾತೆಯ ಉಪಮೆಯನ್ನು ಕೊಟ್ಟಿರುವದರಿಂದ ಆ ಮಾತೆಯ ಯೋಗ್ಯತೆಯು ಪ್ರಭುವಿನಷ್ಟೇ ಅದೆ. "ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿಗರೀಯಸಿ" ಎಂದು ಒಬ್ಬ ಕವಿಯು ಬರೆದಿಟ್ಟಿರುವದು ಯಥಾರ್ಥವಾಗಿದೆ.

ಇಂದು ನಮ್ಮ ವೇಣುವಿಗೆ ಅತ್ಯಂತ ಆನಂದವಾಗಿತ್ತು. ಅವಳಿಗೆ ಒಳ್ಳೇ ಸಮಾಧಾನವಾಗಿತ್ತು. ಅವಳಿಗೆ ಬಹಳ ಅಭಿಮಾನವು ಉತ್ಪನ್ನವಾಗಿತ್ತು. ಕಾರಾಗಾರದಿಂದ ಬಿಡುಗಡೆಯಾದ ಕಾಲಕ್ಕೆ ಅವಳಿಗಾದ ಆನಂದಕ್ಕಿಂತ ಇಂದಿನ ಆನಂದವು ಅಧಿಕವಾಗಿತ್ತು. ಇವತ್ತಿನ ಅವಳ ಆನಂದವು ಬೇರೆ ತರದ್ದಿತ್ತು. ಯಥಾಸಮಯದಲ್ಲಿ ಕೃಷ್ಣರಾಯನೊಡನೆ ಆದ ಲಗ್ನದ ಕಾಲದ ಆನಂದಕ್ಕೂ, ಇಂದಿನ ಆನಂದಕ್ಕೂ ಬಹಳ ಅಂತರವಿತ್ತು. ಈವತ್ತಿನ ಆನಂದದ ಕಾರಣವೇ ಬೇರೆಯಿತ್ತು. ಇಂದು ಅವಳ ಹತ್ತರ ಅವಳ ಮಾತೆಯಾದ ಇಂದಿರಾಬಾಯಿಯು ಕುಳಿತು, ಅವಳ ಸಂಗಡ ಹಿತೋಕ್ತಿಗಳನ್ನಾಡುತ್ತಿದ್ದಳು.

ಕೃಷ್ಣರಾಯನೊಡನೆ ವೇಣುವಿನ ಲಗ್ನವಾಗಿ ಎರಡೇ ದಿವಸವಾಗಿತ್ತು. ಲಗ್ನ-ಸಮಾರಂಭವು ಮುಂಬಯಿಯ ಚೌಪಾಟಿಯ ಮೇಲಿನ ಕೇಶವರಾಯನ ಬಂಗಲೆಯಲ್ಲಿ ಆಯಿತು. ಎಷ್ಟೋ ದಿವಸ ವೇಣುವು ಕಾರಾಗೃಹದಲ್ಲಿ ಇದ್ದದರಿಂದಲೂ, ನಂತರ ಲಗ್ನದ ಗಡಬಿಡಿಯಾದ್ದರಿಂದಲೂ ಅವಳೊಡನೆ ಸ್ವಸ್ಥವಾಗಿ ಕುಳಿತುಕೊಂಡು ಎರಡು ಮಾತುಗಳನ್ನಾಡಲಿಕ್ಕೆ ಇಂದಿರಾಬಾಯಿಗೆ ಅನುವು ದೊರೆತಿದ್ದಿಲ್ಲ. ಲಗ್ನದ ಸಲುವಾಗಿ ಬಂದ ಆಪ್ತಜನರು ತಂತಮ್ಮ ಸ್ಥಳಕ್ಕೆ ಹೋದ ಮೇಲೆ ಮನೆಯಲ್ಲಿ ಗಡಬಿಡಿಯು ಕಡಿಮೆಯಾಯಿತು. ಇದರಿಂದ ಸರ್ವರಿಗೆ ಕೂಡ್ರುವದಕ್ಕೂ ಏಳುವದಕ್ಕೂ ಸಂಧಿಯು ಪ್ರಾಪ್ತವಾಯಿತು.

ಒಂದು ಖುರ್ಚಿಯ ಮೇಲೆ ಇಂದಿರಾಬಾಯಿಯು ಕುಳಿತಿದ್ದು, ಅವಳ ಹತ್ತರವೇ ಮತ್ತೊಂದು ಖುರ್ಚಿಯ ಮೇಲೆ ವೇಣುವು ಕುಳಿತಿದ್ದಳು.

ವೇಣು :—“ಅವ್ವಾ, ಈ ಕಲ್ಪನಾತೀತ ಸುಖದ ದಿವಸವು ಬಂದೀತೆಂದು ನನಗೆ ಸ್ವಲ್ಪಾದರೂ ಆಶೆಯಿದ್ದಿಲ್ಲ; ಆದರೆ ಮುಖ್ಯವಾಗಿ ಈಶ್ವರೀ ಕೃಪೆಯಿಂದ ಈ ಆನಂದದ ದಿವಸವು ಕಾಣಿಸಿತು.”

ವೇಣುವಿನ ಕಣ್ಣುಗಳಲ್ಲಿ ಅಶ್ರುಬಿಂದುಗಳು ಹೊಳೆಯಹತ್ತಿದವು. ಹಿಂದಿನ ಸಂಗತಿಯು ಸ್ಮೃತಿಯಿಂದ ಹೀಗಾದದ್ದೇನೂ ಆಶ್ಚರ್ಯವಲ್ಲ. ಇಂದಿರಾಬಾಯಿಯು ವೇಣುವಿನ ಕಣ್ಣೀರನ್ನು ಪದರಿನಿಂದ ವರೆಸುತ್ತ ಅವಳನ್ನು ಅಪ್ಪಿಕೊಂಡು :—

ಇಂದಿರಾ :—“ವೇಣು, ಆದ ಮಾತನ್ನು ಮರೆಯುವದು ಯೋಗ್ಯವಾದದ್ದು. ಇನ್ನೂ ನಿನಗೆ ಶಕ್ತಿಯು ಬಂದಿಲ್ಲ. ನಿನ್ನ ತಲೆಯು ಚಿಂತೆಯಿಂದ ಕೆಟ್ಟು ಹೋಗಿದೆ. ಇಂಥ ವೇಳೆಯಲ್ಲಿ ಮತ್ತೆ ನೀನು ಚಿಂತಿಸುವದು ಯೋಗ್ಯವಲ್ಲೆಂದು ವೈದ್ಯರ ಅಂಬೋಣವದೆ.”

ವೇಣು :—“ಅವ್ವಾ, ಈಗ ನೀನು ಸ್ವಲ್ಪಾದರೂ ವ್ಯಸನ ಪಡಬೇಡ. ಇಂಥ ದೊಡ್ಡ ವೇದನೆಯನ್ನು ಆ ವೈದ್ಯನು ಬಹು ಬೇಗ ಕಡಿಮೆ ಮಾಡಿದನು.”

ಇಂದಿರಾ :—“ವೇಣು, ನೀನು ಆ ವೇಳೆಯಲ್ಲಿ ಮಸ್ತಕವನ್ನು ಕಲ್ಲಿಗೆ ಹಾಯಿಸಿದ್ದು ಒಳ್ಳೇ ಅವಿಚಾರದ ಸಂಗತಿಯಾಗಿದೆ. ಈಶ್ವರೀ ಕೃಪೆಯಿಂದ ನೀನು ಬದುಕಿದಿ; ಇಲ್ಲವಾದರೆ ನೀನು ನಮ್ಮೆಲ್ಲರನ್ನು ದುಃಖಸಾಗರದಲ್ಲಿ ಮುಳುಗಿಸುತ್ತಿದ್ದಿ.”

ವೇಣು :—“ಅವ್ವಾ, ನನಗೆ ಆ ಕಾರಾಗೃಹದಲ್ಲಿ ಕಪಾಲಮೋಕ್ಷದ ಹೊರ್ತು ಇತರ ಮಾರ್ಗವಿದ್ದಿಲ್ಲ. ನನಗೆ ಅಲ್ಲಿರುವಾಗ್ಗೆ ಮನಸ್ಸಿಗೆ ಬಹಳ ಕೆಡಕೆನಿಸಿತ್ತು. ಕಡೆಯತನಕ ಅವರ ಚರಣದರ್ಶನವಾಗಲಿಲ್ಲ; ಆದರೂ ಪ್ರಭುವಿನ ಕೃಪೆಯಿಂದ ಅಮಂಗಲವಾಗಲಿಲ್ಲ. ಅವ್ವಾ, ಆ ನೀಚನಾದ ಭೋಂಡಿಯು ಅನಾಥ ಮನೋರಮೆಯ ಮೇಲೂ ಇಂಥ ಪ್ರಸಂಗವನ್ನು ತಂದಿದ್ದನು. ಕಡೆಗೆ ಅವಳು ದೇಹಪಾತ ಮಾಡುವ ಉದ್ದೇಶದಿಂದ ಮಾಹಡಿಯ ಮೇಲಿಂದ ಕೆಳಗೆ ಹಾರಿಕೊಂಡಳು; ಆಗ ಸಚ್ಚಿದಾನಂದನು ಪ್ರಯತ್ನ ಮಾಡಿ ಅವಳನ್ನು ಬದುಕಿಸಿದನು. ಅವ್ವಾ, ಅವರಿಬ್ಬರ ವರ್ಣನೆಯನ್ನು ಎಷ್ಟು ಮಾಡಬೇಕು! ನನಗಂತೂ ಅವರು ದೇವಲೋಕದವರಿರಲಿಕ್ಕಬೇ

ಕೆಂದು ಭಾಸವಾಗುತ್ತದೆ. ಮನೋರಮೆಯು ಪ್ರತ್ಯಕ್ಷ ಲಕ್ಷ್ಮಿಯಂತೆ ಇದ್ದಾಳೆ. ಅವರಿಬ್ಬರ ಸ್ವಭಾವವು ಬಹು ಮೃದುವಾದದ್ದು! ಅವರಿಬ್ಬರ ಪವಿತ್ರ ಪ್ರೇಮವು ಅಗಮ್ಯವಾದದ್ದು!! ನನಗಂತೂ ಅವರಿಬ್ಬರನ್ನು ದೇವ ಭವನದಲ್ಲಿ ಕೂಡ್ರಿಸಿ ಪೂಜೆ ಮಾಡುತ್ತ ಹೋಗಬೇಕೆಂಬ ಅಪೇಕ್ಷೆಯಾಗಿದೆ.

ಇಂದಿರಾ:—“ಒಳ್ಳೇದು, ಸಚ್ಚಿದಾನಂದ-ಮನೋರಮೆಯರ ಕಾಲ ಕ್ಷೇಪವು ಹೇಗೆ?”

ವೇಣು:—ಅವ್ವಾ, ಸಚ್ಚಿದಾನಂದನ ಹತ್ತರ ಬಹಳ ಸಂಪತ್ತು ಅದೆ. ಈ ದರಿದ್ರ ಹಿಂದುಸ್ಥಾನದ ಉನ್ನತಿಯಾಗಬೇಕೆಂದು ಅವನು ವಿಶ್ವಪ್ರಯತ್ನ ಮಾಡುತ್ತಾನೆ. ಅವನು ಬಹಳ ಪ್ರವಾಸ ಮಾಡಿದ್ದಾನೆ. ಜಪಾನ, ಜರ್ಮನಿ, ಅಮೇರಿಕಾ, ಫ್ರಾನ್ಸ, ಇಂಗ್ಲಂಡ ಮೊದಲಾದ ದೇಶಗಳಿಗೆ ಎಷ್ಟೋ ಸಾರೆ ಹೋಗಿ ಅವನು ಆಯಾ ದೇಶದ ಊರ್ಜಿತಾವಸ್ಥೆಯ ಕಾರಣಗಳನ್ನು ಚನ್ನಾಗಿ ನಿರೀಕ್ಷಿಸಿದ್ದಾನೆ. ನಿಜವಾದ ಶಿಕ್ಷಣವು ಲಭಿಸಬೇಕೆಂದು ಅವನು ಒಂದು ರಾಷ್ಟ್ರೀಯ ವಿದ್ಯಾಲಯವನ್ನು ಸ್ಥಾಪಿಸಿದ್ದಾನೆ; ಆ ಕೆಲಸದ ಸಲು ವಾಗಿ ಮಿತಿಮೀರಿ ಧನವ್ಯಯ ಮಾಡುತ್ತಾನೆ. ತರುಣರ ಮನಸ್ಸಿಗೆ ಸಂಸ್ಕಾರವಾಗಬೇಕೆಂದು ಅವನು ಅಳತೆಗೆಟ್ಟು ಪ್ರಯತ್ನ ಮಾಡುತ್ತಾನೆ. ಮನೋರಮೆಯೂ ಸಚ್ಚಿದಾನಂದನಂತೆ ಒಳ್ಳೇ ವಿದ್ಯಾವತಿಯಾಗಿದ್ದಾಳೆ. ಮನೋರಮೆಗೆ ಉದಾತ್ತ ಜ್ಞಾನ ಪ್ರಾಪ್ತಿಯು ರಾಮಾಯಣ, ಭಾರತ ಮೊದಲಾದ ರಾಷ್ಟ್ರೀಯ ಗ್ರಂಥಗಳಿಂದಾಗಿರುತ್ತದೆ. ಅವಳು ಸ್ತ್ರೀಯರಿಗೆ ನಿಜವಾದ ಅಂದರೆ ರಾಷ್ಟ್ರಕ್ಕೂ, ಸಮಾಜಕ್ಕೂ, ಕುಟುಂಬಕ್ಕೂ ಉಪಯೋಗವಾಗುವಂಥ ಶಿಕ್ಷಣವನ್ನು ಕೊಡಬೇಕೆಂದು ಆಲೋಚಿಸಿ, ಅದಕ್ಕಾಗಿ ಸಚ್ಚಿದಾನಂದನ ಸಹಾಯದಿಂದ ಮಿತಿಮೀರಿ ಪ್ರಯತ್ನ ಮಾಡುತ್ತಾಳೆ. ಅವಳು ಮಾಡುವ ಕೆಲಸವು ಬಹಳ ಸ್ತುತ್ಯವದೆ. ಮನೋರಮೆಯ ಉದ್ಯೋಗಕ್ಕೆ ಈಶ್ವರನು ಯಶವನ್ನು ಕೊಟ್ಟರೆ, ತೀವ್ರ ಸಮಾಜವು ಸುಧಾರಿಸೀತೆಂದು ಹೇಳಲಿಕ್ಕೆ ಏನೂ ಸಂಶಯವಿಲ್ಲ.”

ಈ ಪ್ರಕಾರ ಈರ್ವರ ಸಂಭಾಷಣೆಯು ನಡೆದಿರುವಾಗ್ಗೆ ರಮಾಬಾಯಿಯು ಅಲ್ಲಿಗೆ ಬಂದಳು. ರಮಾಬಾಯಿಯು ಬಂದ ಕೂಡಲೆ ವೇಣುವು ಕೃತಜ್ಞತೆಯನ್ನು ತೋರಿಸಿ:—

ವೇಣು :—" ಅವ್ವಾ, ರಮಾಬಾಯಿಯವರು ನನ್ನ ಸಲುವಾಗಿ ಬಹಳ ಕಷ್ಟ ಪಟ್ಟರು. ಆ ಬಗ್ಗೆ ಅವರ ಋಣವು ನನ್ನ ಮೇಲೆ ಬಹಳವಾಯಿತು."

ರಮಾಬಾಯಿ :—" ವೇಣು, ಅದರಲ್ಲಿ ನಾನೇನು ಅಂಥ ಪ್ರಯತ್ನ ಮಾಡಿದೆನು. ನಾನು ನನ್ನ ಕರ್ತವ್ಯವನ್ನು ಮಾಡಿದೆನು. ಅದರಲ್ಲಿ ನನ್ನ ಕೃಷ್ಣರಾಯನ ಸಂಬಂಧವಿದ್ದದರಿಂದ ನಾನು ನಿಷ್ಕಪಟ ಬುದ್ಧಿಯಿಂದ ಪ್ರಯತ್ನ ಮಾಡಿದೆನು. ಅಷ್ಟಕ್ಕಾಗಿ ನನಗೆ ಇಷ್ಟು ದೊಡ್ಡಿಸ್ತನವನ್ನು ಕೊಡಲಿಕ್ಕೆ ಕಾರಣವಿಲ್ಲ."

ಇಂದಿರಾಬಾಯಿ :—" ವಿಶ್ವನಾಥರಾಯನು ಇಷ್ಟು ನಮ್ಮನ್ನು ದುಃಖಿಸಿದರೂ ಆ ಬಗ್ಗೆ ಅವನಿಗೇನೂ ತಕ್ಕ ಪ್ರಾಯಶ್ಚಿತ್ತವಾಗಲಿಲ್ಲ."

ಇಷ್ಟರಲ್ಲಿ ವೇಣು :—" ಅವ್ವಾ, ಧೋಂಡೀರಾಜನ ಸ್ಥಿತಿಯು ಹೇಗಾದೀತು ?"

ಇಂದಿರಾ:—" ಅವನಿಗೆ ಏಳು ವರ್ಷದ ಸಕ್ತಮಜೂರಿಯ ಶಿಕ್ಷೆಯಾಗಿದೆ. ಆವನ ತಂದೆಯು ಅಪೀಲು ಮಾಡಿದ್ದಾನೆ. ಅದು ಆದಾಗ್ಗೇ ನಿಜವು."

ವೇಣು :—" ಕೈದಿನವರಿಗೆ ತುರುಂಗದಲ್ಲಿ ಹೇಗೆ ನಡಿಸಿಕೊಳ್ಳುತಾರೆ."

ಇಂದಿರಾ :—" ವೇಣು, ತುರಂಗವೆಂದರೆ ಇಹಲೋಕದ ನರಕವು. ಅಲ್ಲಿ ಕೈದಿನವರನ್ನು ಅತ್ಯಂತ ನಿರ್ದಯತೆಯಿಂದ ನಡಿಸಿಸೊಳ್ಳುತ್ತಾರೆ. ಅವರನ್ನು ಕುಟ್ಟಲಿಕ್ಕೂ ಬೀಸಲಿಕ್ಕೂ ಹಚ್ಚುತ್ತಾರೆ; ಎತ್ತಿನಂತೆ ಗಾಣಕ್ಕೆ ಹೂಡಿ ಎಣ್ಣೆಯನ್ನು ತೆಗೆದುಕೊಳ್ಳುತ್ತಾರೆ; ಶಹರದ ಕಸವನ್ನು ತೆಗೆಯಲಿಕ್ಕೆ ಹಚ್ಚುತ್ತಾರೆ; ಕೆಲಸದಲ್ಲಿ ತಪ್ಪಿದರೆ ಚಬಕದಿಂದ ಹೊಡೆಯುತ್ತಾರೆ; ಕದನ್ನವನ್ನು ಉಣ್ಣಲಿಕ್ಕೆ ಕೊಡುತ್ತಾರೆ; ದಪ್ಪವಾದ ಅಲ್ಪ ಕಿಮ್ಮತ್ತಿನ ಬಟ್ಟೆಗಳನ್ನು ಹೊದಿಕೆಗೆ ಕೊಡುತ್ತಾರೆ; ಆಪ್ತ ಜನರ ದರ್ಶನವನ್ನು ಮಾಡಗೊಡುವದಿಲ್ಲ. ಹೀಗೆ ತುರಂಗದಲ್ಲಿ ಬಹಳ ಕಷ್ಟದಿಂದ ಕಾಲವ್ಯಯ ಮಾಡಬೇಕಾಗುತ್ತದೆ."

ವೇಣು :—" ಅವನು ಶ್ರೀಮಂತ ಪುತ್ರನಿದ್ದಾನೆ. ಅವನು ಅಲ್ಲಿ ಹೇಗೆ ಇಂಥ ಕೆಲಸಗಳನ್ನು ಮಾಡಬೇಕು ? ನಾವು ಈಗ ರಾಜಿಯಾದರೆ ಅವನನ್ನು ಬಿಡಲಿಕ್ಕಿಲ್ಲ, ನೋಡು."

ಇಂದಿರಾ:—" ಅವನ ಭಯಂಕರ ಕೃತ್ಯಕ್ಕೆ ಬಿಡುಗಡೆಯಾಗುವಂ

ತಿಲ್ಲ, ನಾವು ಈಗ ರಾಜಿಯಾಗಲಿಕ್ಕೂ ಬರುವದಿಲ್ಲ. 'ಕರ್ಮದಂತೆ ಫಲ' ವೆಂದು ವಿದ್ವಾಂಸರ ಅಭಿಪ್ರಾಯುವದೆ."

ವೇಣು:—"ನನ್ನ ಕ್ಷಮೆಯಿಂದ ಒಂದು ವೇಳೆ ಏನಾದರೂ ಉಪಯೋಗವಾಗುವಂತಿದ್ದರೆ ನಾನು ಸರ್ವಾಪರಾಧದ ಬಗ್ಗೆ ಕ್ಷಮೆ ಮಾಡಲಿಕ್ಕೆ ಪೂರ್ಣ ಸಿದ್ಧಳಿರುವೆನು."

ಇಂದಿರಾ:—"ಏನು ಮಾಡಿದರೂ ದತ್ತಶಿಕ್ಷೆಯಲ್ಲಿ ಒಂದು ಕೂದಲಿನಷ್ಟಾದರೂ ಕಡಿಮೆಯಾಗುವಂತಿಲ್ಲ."

ವೇಣು:—"ಅವ್ವಾ, ಗೋವಿಂದರಾಯರ ಮನೆಗೆ ಬೆಂಕಿಯನ್ನು ಹಚ್ಚಿಸಿದ ವಿಷಯವು ಏನಾಯಿತು?"

ರಮಾ:—"(ಮಧ್ಯದಲ್ಲಿ) ವೇಣು, ಗೋವಿಂದರಾಯನ ಮನೆಯೆಂದು ಯಾಕೆ ಅನ್ನುತ್ತೀ? ಅದು ನಿನ್ನ ಮನೆಯೆಂದೇ ಅನ್ನಬಾರದೇ? ವಿಶ್ವನಾಥರಾಯನು ಎಲ್ಲ ಹಾನಿಯ ಬಗ್ಗೆ ಇಪ್ಪತ್ತೈದು ಸಾವಿರ ರೂಪಾಯಿಗಳನ್ನು ಕೊಟ್ಟದ್ದರಿಂದ ಅವನ ಮೇಲಿನ ಫಿರ್ಯಾದಿಯು ತೆಗೆದು ಹಾಕಿತು."

ವೇಣು:—"ಈ ಕೆಲಸದಲ್ಲಿ ಕೇಶವರಾಯರು ಬಹಳ ಶ್ರಮವನ್ನು ತೆಗೆದುಕೊಂಡರು. ಅವರು ನಮ್ಮನ್ನು ಜನ್ಮಜನ್ಮದಲ್ಲಿಯೂ ಋಣಿಯಾಗಿ ಮಾಡಿಟ್ಟದ್ದಾರೆ. ಹಿಮುವಿನ ಬೆನ್ನಿನ ಹಿಂದೆ ನಿಮಗೆ ಪುತ್ರೋತ್ಪತ್ತಿಯಾಯಿತೆಂದರೆ ನನಗೆ ಬಳ್ಳೇ ಆನಂದವಾಗುತ್ತದೆ."

ರಮಾ:—"ವೇಣು, ನಿನ್ನಿಂದ ನನ್ನ ಪಿತೃವಂಶದ ವೃದ್ಧಿಯಾಗಲಿಕ್ಕೆ ಬೇಕು. ಅಂಥರೆ ನಾನೂ ಕೃತಕೃತ್ಯನಾಗುವೆನು."

ಇಂದಿರಾಬಾಯಿಯು ವೇಣುವಿನ ಬೆನ್ನಿನ ಮೇಲೆ ಕೈಯಿಟ್ಟು ಅಂದದ್ದೇನಂದರೆ:—"ವೇಣು; ನೀನು ಸರ್ವಸಾಧಾರಣ ಗ್ರಂಥಗಳನ್ನು ಪರಿಶೀಲನ ಮಾಡಿರುವಿ; ಸರ್ವಸಾಧಾರಣ ಸಕಲ ಶಾಸ್ತ್ರಗಳನ್ನು ಮನನ ಮಾಡಿಕೊಂಡಿರುವಿ; ಇನ್ನು ನಿನಗ ಉಪದೇಶ ಮಾಡಬೇಕೆಂಬಂತಿಲ್ಲ. ಆದರೂ ಒಂದೆರಡು ಹಿತೋಕ್ತಿಗಳನ್ನು ಹೇಳುತ್ತೇನೆ, ಚಿತ್ತವಿಟ್ಟು ಲಾಲಿಸು. ನೀನು ಯಾವಾಗಲೂ ನಿನಗಿಂತ ಹಿರಿಯರೊಡನೆ ವಿನಯಭಾವದಿಂದ ನಡೆ. ಚಿಕ್ಕಂದಿನಿಂದ ನೀನು ಗೋವಿಂದರಾಯರ ಕುಟುಂಬದಲ್ಲಿ ಪುತ್ರಿಯಂತೆ ನಡೆದದ್ದರಿಂದ, ಈಗ ನಿನಗೆ 'ಸೊಸೆ' ಈ ರೀತಿಯಿಂದ ನಡೆಯುವದು

ಸ್ವಲ್ಪ ಕಷ್ಟವಾದೀತು ಯಾವಾಗಲೂ ನಿನ್ನೊಡನೆಯೇ ಆಡುತ್ತಿದ್ದ ಕೃಷ್ಣ ರಾಯನೇ ನಿನ್ನ ಪತಿಯಾಗಿದ್ದಾನೆಂಬುವದನ್ನು ಲಕ್ಷ್ಯದಲ್ಲಿಡು. ಪತಿಯೇ ಸ್ತ್ರೀಯರ ಮುಖ್ಯ ಭೂಷಣವು. ಪತಿಯೇ ಸ್ತ್ರೀಯರ ದೇವತೆಯು. ಪತಿಯ ಪದದರ್ಶನದಿಂದ ಸ್ತ್ರೀಯರು ಪವಿತ್ರರಾಗುತ್ತಾರೆ. ಪತಿಯ ಸೇವನೆಯಿಂದ ಸ್ತ್ರೀಯರಿಗೆ ದಿವ್ಯಲೋಕದ ಪ್ರಾಪ್ತಿಯಾಗುತ್ತದೆ. ಪತಿಯ ಪಾದಧೂಳಿಯ ಸಂಪರ್ಕದಿಂದ ಸ್ತ್ರೀಯರಿಗೆ ಪುನರ್ಜನ್ಮವಿಲ್ಲ. ಪತಿಯು ಪ್ರಭುವೆಂದು ತಿಳಿದು, ಸದೈವ ದಾಸಿಯಂತೆ ಅವನ ಶುಶ್ರೂಷವನ್ನು ಮಾಡಬೇಕು. ತನ್ನ ಅಪರಾಧದಿಂದ ಪತಿಗೆ ಅಸಮಾಧಾನವಾಗುವಂಥ ಆಚರಣೆಯನ್ನು ಎಂದೂ ಮಾಡಬಾರದು; ಯಾಕಂದರೆ, ಅಂಥ ಆಚರಣೆಯು ನರಕ ಪ್ರಾಪ್ತಿಗೆ ಮೂಲ ಸಾಧನೀಭೂತವಾಗಿದೆ. ಪತಿ-ಪತ್ನಿಯರು ಆನಂದದಿಂದ ನಡೆದರೆ, ಅವರ ಉಜ್ವಲ-ಪ್ರಣಯಕ್ಕೆ ಕುಂದಣ ಕೂಡ್ರಿಸಿದಂತಾಗುತ್ತದೆ. ಇಂಥ ಕುಟುಂಬದಲ್ಲಿಯೇ ಸುಖ-ಸಮಾಧಾನಗಳು ದೃಷ್ಟಿ ಗೆ ಬೀಳುತ್ತವೆ. ಸಂಸಾರ ರಥಕ್ಕೆ ಪತಿ-ಪತ್ನಿಯರು ಎರಡು ಗಾಲಿಗಳು. ಈ ಎರಡೂ ಗಾಲಿಗಳು ಸ್ವಭಾವದಿಂದಲೂ, ಜ್ಞಾನದಿಂದಲೂ, ವಿಚಾರದಿಂದಲೂ, ಅಧಿಕಾರದಿಂದಲೂ ಸಮಾನವಾಗಿದ್ದರೆ ಈ ಸಂಸಾರ ರಥವು ಅಬಾಧಿತವಾಗಿ ನಡೆಯುತ್ತದೆ. ಮಗಳೇ, ನಿನ್ನ ಸುದೈವದಿಂದ ನಿನ್ನರೂಪ-ಶೀಲ-ಜ್ಞಾನಗಳಿಗೆ ಅನುಗುಣವಾದ ಪತಿಯು ಸಿಕ್ಕಿದ್ದಾನೆ. ಮತ್ತು ನಿನಗೆ ಮಗಳಂತೆ ಕಾಣುವ ಮಾವನು ಸಿಕ್ಕಿದ್ದಾನೆ. ಮತ್ತು ನಿನಗೆ ನನಗಿಂತಲೂ ಅಧಿಕವಾಗಿ ಪ್ರೇಮದಿಂದ ಪರಿರಕ್ಷಿಸುವ ಅತ್ತೆಯು ಸಿಕ್ಕಿದ್ದಾಳೆ. ಪುತ್ರಿಯೇ, ಒಳ್ಳೇ ಮನುಷ್ಯರ ಸಹವಾಸ ಸುಖವು ಸ್ವರ್ಗ ಸುಖವನ್ನು ಹೀಯಾಳಿಸುತ್ತದೆ. ಇದೆಲ್ಲ ಪ್ರಾಪ್ತಿಗೆ ನಿನ್ನ ಪೂರ್ವ ಜನ್ಮದ ಸುಕೃತವೇ ಕಾರಣವಾಗಿದೆ. ನೀನು ನಿನ್ನ ಸದ್ಗುಣಗಳಿಂದ ಸರ್ವ ಜನರ ಆದರಕ್ಕೆ ಪಾತ್ರಳಾಗು. ಸದಾಚರಣೆಯಿಂದ ಸರ್ವರಿಗೂ ವಂದ್ಯಳಾಗು. ಪತಿಸೇವನೆಯಿಂದ ಪವಿತ್ರಳಾಗು, ಅಂದರಾಯಿತು." ಎಂದಳು.

ಆಗ ವೇಣುವು ನಮ್ರದಿಂದ:—"ಸನ್ಮಾತೆಯೇ, ನಿನ್ನ ಈ ಅಮೃತ ಪ್ರಾಯವಾದ ಉಪದೇಶ ವಚನಗಳನ್ನು ನಾನು ಎಂದೂ ಮರೆಯುವದಿಲ್ಲ." ಎಂದಳು.



## ೧೨ನೆಯ ಪ್ರಕರಣ—ಪೂರ್ತಿ.

ವಿಶ್ವನಾಥರಾಯನು ಈ ಸಂಸಾರವನ್ನು ತುಚ್ಛೀಕರಿಸಿ ಕಾಶಿಗೆ ಹೋಗಿ ಇದ್ದನು. ಅವನು ತನ್ನ ಸ್ಥಾವರ-ಜಂಗಮ ಸ್ವಾಸ್ತಿಯನ್ನು ದಾನ ಮಾಡಿದನು. ರಾಧಾಬಾಯಿ-ಧೋಂಡೀರಾಜರಿಗೆ ಅವನು ಒಂದು ಕವಡಿಯನ್ನಾದರೂ ಕೊಡಲಿಲ್ಲ.

ಧೋಂಡಿರಾಜ-ಮಾಧವರಾಯರ ಮೇಲೆ [illegible] ನಾಲ್ಕು ಆರೋಪಗಳಿದ್ದವು. ಆ ಸಂಬಂಧವಾಗಿ ಧೋಂಡೀರಾಜನಿಗೆ ಹದಿನಾಲ್ಕು ವರ್ಷದ ಸಕ್ತಮಜೂರೀ ಶಿಕ್ಷೆಯಾಯಿತು; ಮಾಧವರಾಯನಿಗೆ ಹನ್ನೊಂದು ವರ್ಷದ ಸಕ್ತಮಜೂರೀ ಶಿಕ್ಷೆಯಾಯಿತು. ಇಂದಿಗೂ ಅವರು ತುರಂಗದಲ್ಲಿದ್ದಾರೆ.

ಸಚ್ಚಿದಾನಂದ-ಮನೋರಮೆಯರು ಒಂದು ರಾಷ್ಟ್ರೀಯ ವಿದ್ಯಾಲಯವನ್ನು ತೆಗೆದಿದ್ದು, ಅದು ಒಳ್ಳೇ ರೀತಿಯಿಂದ ನಡೆದಿರುತ್ತದೆ.

ವೇಣೂ-ಕೃಷ್ಣರಾಯರು ಸುಖದಿಂದ ಸಂಸಾರ ಮಾಡುತ್ತಿದ್ದಾರೆ ಕೃಷ್ಣರಾಯನು ಮುಂಬಯಿಯಲ್ಲಿ ಸ್ವದೇಶೀ ಮಾಲಿನ ವ್ಯಾಪಾರ ಮಾಡುತ್ತಿದ್ದು, ಅದರಲ್ಲಿ ಅವನು ಅಪಾರ ಧನಾರ್ಜನೆಯನ್ನೂ, ಶಾಶ್ವತ ಕೀರ್ತಿಯನ್ನೂ ಪಡೆದಿದ್ದಾನೆ.

ರಮಾಬಾಯಿ-ಕೇಶವರಾಯರು ಆನಂದದಿಂದ ಇರುತ್ತಾರೆ.

ಸಾಂಬನು ಸರ್ವರನ್ನೂ ಆನಂದದಲ್ಲಿ ಇಡಲಿ, ಇದೇ ನನ್ನ ಪ್ರಾರ್ಥನೆಯು !!



